# ಹೊಸತು

ನೆಮ್ಮದಿಯ ನಾಳೆ ನಮ್ಮದು

ಒಳಗೇನಿದೆ ...


ಸೂಜಿ-ದಾರದ ಹಾಡು ಪಾಡು — ಡಾ॥ ಎನ್. ಗಾಯತ್ರಿ ... ೧೫
ಸಾರ್ವಜನಿಕ ವಲಯ-ಕನ್ನಡ ಬಳಕೆ — ರಾ. ನಂ. ಚಂದ್ರಶೇಖರ ... ೨೫
ವಿಜ್ಞಾನ ಮತ್ತು ಕನ್ನಡ — ಎಸ್. ಮಂಜುನಾಥ ... ೧೦

ಗಂಗವ್ವ ಗಂಗಾಮಾಯಿ — ಡಾ॥ ಸಬಿಹಾ ಭೂಮೀಗೌಡ ... ೨೧
ಸ್ಥಾನಮಾನ — ಸುಬ್ರಹ್ಮಣ್ಯ ಎಸ್. ಆರ್. ... ೫೭
ಮಾರುತಿಪುರ — ಪುಂಡಲೀಕ ಪಾಟೀಲ ... ೪೧
ನಾಯಿಪಾಡು — ಭೋಜರಾಜ ಸೊಪ್ಪಿಮಠ ... ೨೯
ಕಾವ್ಯಧಾರೆ — ೧೧, ೧೮, ೨೬, ೪೪, ೬೨

ಖಜುರಾಹು - ಸೃಷ್ಟಿತತ್ವದ ದೇವ ಮಂದಿರಗಳ ನಡೆಮುಡಿಯಲ್ಲಿ... — ಡಾ॥ ಇಂದಿರಾ ಹೆಗ್ಗಡೆ ... ೪೫
ವಿಜಯನಗರದಲ್ಲಿ ಬಡತನ — ಶ್ರೀಧರ ಪಿಸ್ಸೆ ... ೩೭

ರೋಗಗ್ರಸ್ತ ಸರ್ಕಾರಿ ಆಸ್ಪತ್ರೆಗಳು : ಮಠಗಳಿಗೆ ವಹಿಸುವುದು ಮೂರ್ಖತನ — ಡಾ॥ ಸಿ. ಆರ್. ಚಂದ್ರಶೇಖರ್ ... ೩೫
ಭಾರತದಲ್ಲಿ ಆಹಾರ ಭದ್ರತೆ - ಹೀಗೊಂದು ಚಿಂತನೆ — ಡಾ॥ ಜಯಂತಿ ಜೆ. ... ೧೯

ಅಂತರಿಕ್ಷದಲ್ಲಿ 'ಜೀವ'ದ ಅಡುಗೆಮನೆ — ಎ. ಸುಬ್ರಮಣ್ಯ ... ೫೧
ಬಲೂನ್ ಗಿಡ : ನೋಡಿದ್ದೀರಾ ? — ಡಾ॥ ಎನ್. ಎಸ್. ಲೀಲಾ ... ೫೪

ಜನಪದ ಕಥೆಗಳ ಮಾಯಾಲೋಕ ! — ಡಾ॥ ಕೆ. ಎಸ್. ಪವಿತ್ರ ... ೬೧
ಸಂತಕವಿ ಕನಕದಾಸರು — ಗಂಗಾಧರ ಕೊಡ್ಲಿಯವರ ... ೫೯

ಲಿಬಿಯ : ಪಶ್ಚಿಮ ರಾಷ್ಟ್ರಗಳ ಅನಗತ್ಯ ಹಸ್ತಕ್ಷೇಪ — ಸೀಯಾರ್ಕೆ ... ೫೦

'ಸಂಗಡ'ದ ಜೊತೆಯಲ್ಲಿ ಸಾಗುತ್ತ... — ಡಾ॥ ಎನ್. ಸುರೇಶ್ ನಾಗಲಮಡಿಕೆ ... ೫೫

ಹೊಸ ಓದು — ಇಂದಿರಾಕುಮಾರಿ ... ೩೦
ಕ್ಯಾಮೆರಾಗೆ ಕೈತುಂಬ ಕೆಲಸ — ಡಾ॥ ಬಿ. ಎಸ್. ಶೈಲಜಾ ... ೩೪
ತನ್ನತನ — ಎಚ್. ಎಸ್. ಈಶ್ವರ ... ೬೨



ಚಿತ್ರಗಳು : ಸಂಕೇತ್, ಕಮಲಂ ಅರಸು, ಶ್ರೀಹರಿ, ರಾಂಚಂದ್ರ ಕೊಪ್ಪು, ಬಿ. ವಿಲ್ಸನ್

ಮುಖಚಿತ್ರ : ಗಾರ್ಮೆಂಟ್ಸ್ ಮಹಿಳೆಯರ ಹೋರಾಟ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಡಾ॥ ತುಮಕೂರು ಚಂದ್ರಕಾಂತ ಅವರು 'ಪ್ರಜಾವಾಣಿ'ಯಲ್ಲಿ ಏಪ್ರಿಲ್ ೧೫ರಂದು ಪರಮಾತ್ಮ ಸಾಯಿಬಾಬ ಸಹ ಒಬ್ಬ ಯಃಕಶ್ಚಿತ್ ಹುಲುಮಾನವನಂತೆ ಸಾವಿನೊಂದಿಗೆ ಸೆಣಸಾಟ ನಡೆಸುತ್ತಿರುವುದನ್ನು ('ನಡೆಸುತ್ತಿದ್ದುದನ್ನು' ಎಂದು ಓದಿಕೊಳ್ಳಬೇಕಾದ ದಿನ ಬರುತ್ತದೆ) ಕುರಿತು ಬರೆದಿದ್ದಾರೆ. ತರ್ಕಶುದ್ಧ ಚಿಂತನೆಯಲ್ಲಿ ಆಸಕ್ತಿ ಇರುವವರು ಅದನ್ನು ಓದಿ ಜೀರ್ಣಿಸಿಕೊಳ್ಳಬೇಕು. ಬಾಬಾ ಅವರ ದುಃಖದಲ್ಲಿ ಭಾಗಿಗಳಾಗಬಾರದೆಂದಲ್ಲ, ಮಾನವ ಸಹಜ ಅನುಕಂಪ ಅವರ ಇಂದಿನ ಸ್ಥಿತಿಯಲ್ಲಿ ಎಲ್ಲರಿಗೂ ಇರುತ್ತದೆ. ಆದರೆ ಮೂರ್ಖರು ಆತನನ್ನು ಮೊದಲು ಪರಮಪದಕ್ಕೇರಿಸಿ ಇಂದು ಚಿಂತಾಕ್ರಾಂತರಾಗಿರುವುದು ಅನುಕಂಪ ಮೂಡಿಸುವುದಿಲ್ಲ. ಆಶ್ರಮದಲ್ಲಿ ಕೊಲೆಗಳು ನಡೆದಾಗ ಬಾಬಾ ಎಲ್ಲೋ ಅಡಗಿ ಕೂತು ಪ್ರಾಣ ಕಾಪಾಡಿಕೊಂಡಿದ್ದರು, ಆಮೇಲೆ ಒಬ್ಬ ಹುಳುಕುತಲೆಯ ಕೇಂದ್ರ ಮಂತ್ರಿ ಬಂದು ಅವರನ್ನು ಕಾನೂನಿನ ಕಕ್ಷೆಯಿಂದ ಹೊರಗಿರಿಸಿದ. ದೇವರು ಸದಾ ಭಕ್ತನ ಆಳು ಎಂಬುದು ಖಾತ್ರಿಯಾಯಿತು. ಗಡಿಯಾರ, ಉಂಗುರ, ಬೂದಿ, ಎಲ್ಲಾ ಕ್ಷಣಾರ್ಧದಲ್ಲಿ ಕೈಚಳಕದಿಂದ ತರಿಸುತ್ತಿದ್ದ ಬಾಬಾ ತನಗೆ ಬೇಕಾದ ಔಷಧಿಗಳನ್ನು ಕ್ಲುಪ್ತವಾದ ಸಮಯಗಳಲ್ಲಿ ತಿಳಿಯಲಿಲ್ಲ, ತರಿಸಲಿಲ್ಲ. ಅದಕ್ಕೆ ಆಸ್ಪತ್ರೆಯ ವೈದ್ಯರು ದೇವವೈದ್ಯರಾಗಬೇಕಾಯಿತು. ನಮ್ಮಂತೆ ಬಾಬಾ ಸಹ ರಕ್ತದೊತ್ತಡ, ಅಂಗವೈಕಲ್ಯ, ಇತ್ಯಾದಿಗಳಿಗೆ ತುತ್ತಾಗಿ ಚಕ್ರದ ಕುರ್ಚಿಯಲ್ಲಿ ತೆವಳಬೇಕಾಯಿತು. ಆಸ್ಪತ್ರೆ ಕಟ್ಟಿಸಿದ್ದು ಮತ್ತು ಹಳ್ಳಿಗಳಿಗೆ ನೀರು ಕೊಟ್ಟಿದ್ದು ಸಹ ಸಾಮಾನ್ಯ ಮನುಷ್ಯರ ಮೂಲಕವೇ. ಯಾವುದೂ ಕೇವಲ ಇಚ್ಛಾಶಕ್ತಿಯಿಂದ ಪ್ರತ್ಯಕ್ಷವಾಗಲಿಲ್ಲ. ಅವರ ಭಕ್ತರು ಮೂರ್ಖತನವನ್ನು ಕಳೆದುಕೊಳ್ಳಲು ಸಿದ್ಧರಿರುತ್ತಾರೆನಿಸುವುದಿಲ್ಲ, ಏಕೆಂದರೆ ಅವರ ಕಷ್ಟಗಳಿಗೆ, ಪಾಪಕರ್ಮಗಳಿಗೆ, ದುಗುಡಗಳಿಗೆ ಒಂದು ಭ್ರಾಮಕ ಬಳ್ಳಿಯ ಆಸರೆ ಇಲ್ಲದೆ ಜೀವಿಸುವ ಧೈರ್ಯವನ್ನು ಬಾಬಾ ಅವರಿಗೆ ಕರುಣಿಸಿಲ್ಲ. ಅವರಿಲ್ಲದಾದಾಗ ಇನ್ನೊಬ್ಬ ದೇವಮಾನವರನ್ನು ಹುಡುಕಿಕೊಳ್ಳುತ್ತಾರೇನೊ! ದೈನ್ಯವಿಲ್ಲದ ಜೀವನ ಮತ್ತು ಅನಾಯಾಸವಾದ ಮರಣ ಬೇಕೆಂಬ ಆಸೆ ಮಾನವರಲ್ಲಿದೆ. ಮೊದಲನೆಯದನ್ನು ಬಾಬಾ ಪಡೆದುಕೊಂಡರು. ಅಂತರಂಗದಲ್ಲಿ ಸ್ವಲ್ಪ ಅಹಂಕಾರ ಮತ್ತು ಬಹಿರಂಗದಲ್ಲಿ ನಾಟಕೀಯತೆ ರೂಢಿಸಿಕೊಂಡಿದ್ದಿರಬಹುದು, ಅಷ್ಟೆ. ಅನಾಯಾಸವಾದ ಮರಣ ಹೊಂದುವವರೆಗೆ ಅವರು ಲವಲವಿಕೆಯಿಂದ ಜೀವಂತವಾಗಿರಲೆಂದು ಆಶಿಸೋಣ. ಮರೆಯಾಗುವ ಮುನ್ನ ಅವರ ಆಸ್ತಿಯನ್ನು ಸಾರ್ವಜನಿಕರ ಸುಬರ್ದಿನಲ್ಲಿರುವಂತೆ ಮಾಡಲು ಸೂಕ್ತ ಕ್ರಮ ಕೈಗೊಂಡಿದ್ದಾರೆಂದೂ ನಂಬೋಣ.

*  *  *

ಅಣ್ಣಾ ಹಜಾರೆಯವರ ವೈಯಕ್ತಿಕ ಚಳುವಳಿಯಿಂದ ಅಸ್ತಿತ್ವಕ್ಕೆ ಬಂದ ಒಂದು ಜಂಟಿ ಸಮಿತಿಯ ಸದಸ್ಯರಾದ ಪ್ರಶಾಂತ ಭೂಷಣ 'ದಿ ಹಿಂದು' ಪತ್ರಿಕೆಯಲ್ಲಿ ಏಪ್ರಿಲ್ ೧೫ರಂದು ಲೋಕಪಾಲ ಮಸೂದೆಯ ಬಗ್ಗೆ ಲೇಖನ ಬರೆದಿದ್ದಾರೆ. ಸಮಿತಿಯಲ್ಲಿ ಮಹಿಳೆ ಯಾರೂ ಇಲ್ಲ, ಹಿಂದುಳಿದ ವರ್ಗದವರು ಯಾರೂ ಇಲ್ಲ, ಇನ್ನೂ ಯಾರು ಯಾರೋ ಇರಬೇಕಾಗಿದ್ದವರು ಯಾರೂ ಇಲ್ಲ ಎಂಬ ವಿಮರ್ಶೆ ಬರುತ್ತಿದೆ. ಅದನ್ನು ಹೇಗೆ ಸರಿಪಡಿಸುತ್ತಾರೋ ತಿಳಿಯದು. ಪ್ರಸ್ತುತ ಲೇಖನದಲ್ಲಿ ಪ್ರಶಾಂತಭೂಷಣ ಅವರು ದೇಶದಲ್ಲಿ ಭ್ರಷ್ಟಾಚಾರವು ಅಗಾಧವಾಗಿ ಬೆಳೆಯಲು ಸರ್ಕಾರದ ನೀತಿಗಳು ಕಾರಣವೆಂದು ಸರಿಯಾಗಿ ಪ್ರತಿಪಾದಿಸಿದ್ದಾರೆ. ದೇಶದ ಸಂಪತ್ತನ್ನು ಕೊಳ್ಳೆಹೊಡೆಯಲು ಸ್ವದೇಶಿ ಮತ್ತು ಪರದೇಶಿ ಲೂಟಿಕೋರರಿಗೆ ಪರವಾನಗಿ ಕೊಡಲು ಸರ್ಕಾರ ತೀರ್ಮಾನಿಸಿದಾಗ ಅದರ ಲಾಭ ಪಡೆಯಲು ನೂಕುನುಗ್ಗಲು ಇರುತ್ತದೆ. ಹೇಗೋ ಲಪಟಾಯಿಸಬೇಕೆಂಬ ಅಭೀಪ್ಸೆಯು ಭ್ರಷ್ಟಾಚಾರಕ್ಕೆ ಮೂಲ ಪ್ರೇರಣೆ. ಆದ್ದರಿಂದ ಆ ನೀತಿಯು ಬದಲಾಗಿ, ಸಂಪತ್ತು ಸಾರ್ವಜನಿಕರ ಸ್ವತ್ತಾಗಿ ಉಳಿಯುವಂತಾಗಬೇಕು, ಸಾರ್ವಜನಿಕರ ಹಿತಕ್ಕಾಗಿ ರೂಢಿಸಿಕೊಳ್ಳುವಂತಿರಬೇಕು, ಜನಸಮುದಾಯಗಳನ್ನು ಹಿಂಸೆಯಿಂದ ಹೊರದೂಡುವ ರೌದ್ರ ಪ್ರಕ್ರಿಯೆ ನಿಲ್ಲಬೇಕು. ಅದನ್ನು ಪ್ರಶಾಂತಭೂಷಣ ಅಲ್ಲಗಳೆಯುವುದಿಲ್ಲ. ಆದರೆ ಲೋಕಪಾಲ ಇರಬೇಕೆಂಬ ಶಾಸನದಿಂದ ಭ್ರಷ್ಟಾಚಾರವನ್ನು ತಡೆಯಲು ಸಾಧ್ಯವೆಂದು ಅವರ ಅಂಬೋಣ. ಅವರೇ ಹೇಳುವಂತೆ ಲೋಕಪಾಲ ಕಾಯಿದೆ ಮತ್ತು ಕ್ರಿಯಾವಿಧಾನ ನ್ಯಾಯಾಲಯಗಳ ಪರಿಧಿಯಿಂದ ಹೊರಗಿರುವುದಿಲ್ಲ. ಮೊನ್ನೆಮೊನ್ನೆ ನಮ್ಮ ರಾಜ್ಯದ

(೬ನೇ ಪುಟಕ್ಕೆ)

**ಈ ತಿಂಗಳು (೩ನೇ ಪುಟದಿಂದ)**

ನ್ಯಾಯಾಲಯವು ಮುಖ್ಯಮಂತ್ರಿ ಯಡಿಯೂರಪ್ಪನವರ ಬಗೆಗೆ ಲೋಕಾಯುಕ್ತ ತನಿಖೆ ಕೂಡದೆಂದು ತಡೆಯಾಜ್ಞೆ ನೀಡಿತು, ಎಲ್ಲವೂ ಸ್ತಬ್ಧವಾಯಿತು, ಮುಖ್ಯಮಂತ್ರಿ ಯಾವುದೋ ಮಾರಮ್ಮನಿಗೆ ಪೂಜೆ ಮಾಡಿ ಹಾಲು ಕುಡಿದು 'ಇನ್ನೇನು ಮಾಡಬಲ್ಲೆ ನೀನು' ಎಂಬ ಅಭಿಪ್ರಾಯವನ್ನು ತಮ್ಮ ಹಾವಭಾವಗಳಿಂದ ಪ್ರಕಟಿಸಿದರು. ಲೋಕಪಾಲಕನಿಗೆ ಕಡಿವಾಣ ಹಾಕುವ ಶಕ್ತಿ ಇದ್ದರೆ ರಾಜ, ಟಾಟಾ, ರಾಡಿಯಾ, ಅಲಿ, ಯಾರೂ ವಿಚಲಿತ ರಾಗುವುದಿಲ್ಲ ಸಂಪೂರ್ಣ ಕ್ರಾಂತಿಯ ಎರಡನೆಯ ಅವತಾರವಾದ ಅಣ್ಣಾ ಹಜಾರೆಯವರ ಚಳುವಳಿ ಇದಕ್ಕೆ ಉತ್ತರ ಕಂಡುಕೊಳ್ಳುತ್ತದೆಯೇ? ಇಲ್ಲವಾದರೆ ಜೆ.ಪಿ. ಚಳುವಳಿಯ ಫಲಶ್ರುತಿ ಮರುಕಳಿಸುವ ಸಂಭವವಿರುತ್ತದೆ. ಸಮಿತಿಯ ಸದಸ್ಯರಾದ ಶ್ರೀ ಶಾಂತಿಭೂಷಣ್ ಅವರ ಒಟ್ಟು ಆಸ್ತಿ ೧೮ ಕೋಟಿ ರೂಪಾಯಿಗಳು. ದೆಹಲಿಯ ಬಳಿ ನೋಯಿಡಾದಲ್ಲಿ ಮೂರು ಮನೆ, ಬೆಂಗಳೂರಿನಲ್ಲೊಂದು ನಿವೇಶನ, ಇತ್ಯಾದಿ. ನಮ್ಮೂರಿನಲ್ಲಿ ಅವರು ಹೇಗೆ ನಿವೇಶನ ಪಡೆದರೆಂಬ ಕುತೂಹಲ ಸಹಜ. ರಾಮಕೃಷ್ಣ ಹೆಗಡೆ ಕಾಲದಲ್ಲಿ ಪಡೆದಿದ್ದಿರಬೇಕು. ಅದರಲ್ಲೇನೂ ಭ್ರಷ್ಟಾಚಾರವಿರಲಿಲ್ಲವೆಂದು ನಂಬೋಣವೆ?

* * *

ಉಡುಪಿಯ ಬಳಿ ಮಲ್ಪೆಯಲ್ಲಿ ಒಂದು ಚರ್ಚಿನವರು ಪ್ರತಿವರ್ಷ ಮಕ್ಕಳಿಗೆ ಬೇಸಿಗೆ ಶಿಬಿರ ನಡೆಸುತ್ತಾ ಬಂದಿದ್ದಾರೆಂಬ ವರದಿ ಇದೆ. ಈ ಬಾರಿ ಅವರು ಶಿಬಿರ ನಡೆಸುತ್ತಿದ್ದಾಗ ಯಡಿಯೂರಪ್ಪನವರ ಸರ್ಕಾರದ ಅನಧಿಕೃತ 'ಧಾರ್ಮಿಕ' ಪೊಲೀಸ್ ಪಡೆ ಅಲ್ಲಿಗೆ ನುಗ್ಗಿ ಶಿಬಿರದ ಮಕ್ಕಳಿಗೆ ನಡುಕ ತರಿಸಿದೆ. ಇದು ಮಕ್ಕಳ ಬಗೆಗೆ ಅವರಿಗಿರುವ ಪ್ರೀತಿ ಸಂಸ್ಕೃತಿಯ ಮಾದರಿ! ಅವರನ್ನು ತಡೆಯಬೇಕೆಂಬ ಕರ್ತವ್ಯವನ್ನು ಪೊಲೀಸರು ಎಂದೋ ಕೈಬಿಟ್ಟರು. ಆಚಾರ್ಯ-ಯಡಿಯೂರಪ್ಪ ಆಜ್ಞೆ ಇರಬೇಕು. ಹೀಗೆ ಗಲಾಟೆ ನಡೆಸಿದ ''ಸುಸಂಸ್ಕೃತ'' ಯುವಕರಲ್ಲಿ ಮಂಗಳೂರಿನ ಸೆಂಟ್ ಅಲೋಶಿಯಸ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿದ್ದ ಒಂದಿಬ್ಬರು ಧೀಮಂತರೂ ಇದ್ದರೆಂಬುದು ಕೇವಲ ಕುಚೋದ್ಯದ ಮಾತಲ್ಲ ಇನ್ನೇನು ಜೂನ್ ತಿಂಗಳು ಬರುತ್ತಿದೆ, ಕಾಲೇಜುಗಳಿಗೆ ಅಭ್ಯರ್ಥಿಗಳು ಪ್ರವೇಶ ಬಯಸಿ ಸರದಿ ಸಾಲಿನಲ್ಲಿ ನಿಲ್ಲುತ್ತಾರೆ. ಮಲ್ಪೆಯ ಈ ಸುಸಂಸ್ಕೃತ ಧರ್ಮರಕ್ಷಕ ವೀರರು ಸೆಂಟ್ ಅಲೋಶಿಯಸ್ ಕಾಲೇಜಿಗೆ ಹೋಗಿ ಮಕ್ಕಳನ್ನು ಕಾಲೇಜಿಗೆ ಸೇರಿಸಲು ಬರುವ ಪೋಷಕರನ್ನು ಎಳೆದುಹಾಕುತ್ತಾರೇನು? ಆಗ ಮುಖ್ಯಮಂತ್ರಿಯವರು ಯಾವ ಮಠದಲ್ಲಿ ತಂಗಿ ಉಪದೇಶ ಪಡೆಯುತ್ತಿರುತ್ತಾರೆ? ರಾಜ್ಯ ಎತ್ತ ಬೇಕಾದರೂ ಸಾಗಲಿ, ಬೇಕಾಗಿರುವುದು ಮುಖ್ಯಮಂತ್ರಿ ಪದವಿ ಮಾತ್ರ ತಾನೆ!

* * *

ನಮ್ಮ ದೇಶದಲ್ಲಿ ಸರ್ಕಾರಗಳು ಇದ್ದಕ್ಕಿದ್ದಂತೆ ಧರ್ಮಭೀರುಗಳಾಗಿ ಪ್ರಾಣ ದಯಾ ಸಂಘಗಳಾಗಿ ಮಾರ್ಪಡುತ್ತವೆ. ಆದ್ದರಿಂದ ಮಹಾವೀರ-ಬುದ್ಧ-ಶಂಕರ ಜಯಂತಿಗಳಂದು ಮಾಂಸದಂಗಡಿಗಳನ್ನು ಮುಚ್ಚಿಸುತ್ತಾರೆ. ರಾಮನವಮಿಯಂದು ಅದು ಅನಿವಾರ್ಯವೆಂಬ ಕಾನೂನು ಹಲವು ವರ್ಷಗಳಿಂದ ನಮ್ಮ ರಾಜ್ಯದಲ್ಲಿ ಜಾರಿಯಲ್ಲಿದೆ. ಅದರ ತಕ್ಷಣದ ಪರಿಣಾಮವೇನೆಂದರೆ ಅಂದು ಮಾಂಸ ತಿನ್ನಲು ಆಶಿಸುವವರು ಹಿಂದಿನ ದಿನವೇ ಅಂಗಡಿಗಳಿಗೆ ನುಗ್ಗಿ ಮಾಂಸ ಕೊಳ್ಳಬೇಕು. ಅಂದರೆ, ಪ್ರಾಣಿಗಳ ಜೀವನ ಒಂದು ದಿನದಷ್ಟು ಕಡಿಮೆ ಮಾಡಿದಂತಾಯಿತು. ಇದು ಬೆಟ್ಟದಷ್ಟು ದಯೆಯೇ ಇರಬೇಕು, ಇರಲಿ. ಈ ವರ್ಷ ಯಡಿಯೂರಪ್ಪನವರು ಈ 'ದಯಾಮರಣ' ನೀತಿಯನ್ನು ಅಂಬೇಡ್ಕರ್ ಜಯಂತಿಯಂದೂ ಜಾರಿಗೊಳಿಸಿ ಪ್ರಾಣಿಗಳನ್ನು ಒಂದು ದಿನ ಮುಂಚೆಯೇ ಸ್ವರ್ಗಕ್ಕೆ ಕಳಿಸಿಬಿಟ್ಟರು. ಪಾಪ, ಡಾ|| ಬಾಬಾಸಾಹೇಬ್ ಅಂಬೇಡ್ಕರ್ ಯಾವಾಗ ಕನಸಿನಲ್ಲಿ ಬಂದು ಹೀಗೆ ಮುಖ್ಯಮಂತ್ರಿಗಳಿಗೆ ಆದೇಶ ನೀಡಿದರೋ ತಿಳಿಯದು. ಆಹಾರವನ್ನು ಜನರಿಗೆ ನೀಡುವ ಕರ್ತವ್ಯ ನಿಭಾಯಿಸದ ಸರ್ಕಾರ ಯಾವ ಆಹಾರವನ್ನು ಯಾವತ್ತು ತಿನ್ನಕೂಡದು ಎಂಬ ಆಜ್ಞೆಯನ್ನು ಹೊರಡಿಸುತ್ತದಲ್ಲ, ಅದಕ್ಕಿಂತಲೂ ದೊಡ್ಡ ಪಾತಕ ಬೇಕೆ! ದೇಶದ ಜನರೆಲ್ಲಾ ಇನ್ನು ಮುಂದೆ ಕೊತ್ತಂಬರಿ ಸೊಪ್ಪು ಮಾತ್ರವೇ ತಿಂದು ಸಾತ್ವಿಕರಾಗಬೇಕೆಂಬ ಆಜ್ಞೆಯನ್ನು ಎಂದು ನಿರೀಕ್ಷಿಸೋಣ? ದ್ವಾದಶಿಯಂದು ಬೆಳಿಗ್ಗೆ ಆರು ಗಂಟೆಗೇ ಅಗಸೆ ಸೊಪ್ಪು ತಿನ್ನುವ ಸಂಪ್ರದಾಯದ ಪೇಜಾವರ ಸ್ವಾಮಿಗಳ ಫಜೀತಿ ನೋಡಲು ಯೋಗ್ಯವಾಗಿರುತ್ತದೆ, ಬಿಡಿ!!

* * *

ಹೀಗೂ ಉಂಟೆ ಎಂದು ಕಸಿವಿಸಿಯಾಗುವುದು ಬೇಡ. ಅದು ಕರ್ನಾಟಕದ ಉಚ್ಚ ನ್ಯಾಯಾಲಯ ಹೇಳಿರುವ ಮಾತು. ಒಪ್ಪಿ ತೆಪ್ಪಗಿರಬೇಕಾದ್ದು ಸಭ್ಯತನ. ಸಮಾಚಾರ ಇದು: ಯಾವುದೋ ಕಾರ್ಮಿಕ ಸಂಘ ಒಂದು ಹಕ್ಕೊತ್ತಾಯ ಮಂಡಿಸಿತು: ಕನಿಷ್ಠ ೨೫೦ ಮಂದಿ ನೌಕರರಿರುವ ಕಾರ್ಖಾನೆಗಳಲ್ಲೆಲ್ಲಾ ಪಾಕಶಾಸ್ತ್ರ ಪ್ರವೀಣರನ್ನು, ಅಡಿಗೆ ಬಡಿಸುವವರನ್ನು ಹಾಗೂ ಪಾತ್ರೆ ತೊಳೆಯುವವರನ್ನು ಖಾಯಂ ಕೆಲಸಗಾರರೆಂದು ಪರಿಗಣಿಸಿ ಸೇವಾ ನಿಯಮಗಳನ್ನು ರೂಪಿಸಬೇಕು, ಎಂದು. ಮಾಲೀಕರು 'ಆಗದು' ಎಂದರು. ಆದರೆ ದುಡಿಯುವ ಜನರ ಒತ್ತಾಯಕ್ಕೆ ಮಣಿದು ಸರ್ಕಾರ ಆಜ್ಞೆ ಹೊರಡಿಸಿತು. ಸರಿ, ನ್ಯಾಯಾಲಯಗಳಿಗೆ ಹೋದರು. ಅತ್ತ-ಇತ್ತ-ಎತ್ತೆತ್ತ ಎಂಬಂತೆ ಏನೇನೋ ತೀರ್ಪುಗಳು ಬಂದವು. ದೆಹಲಿಯ ಸರ್ವೋಚ್ಚ ನ್ಯಾಯಾಲಯಕ್ಕೂ ಹೋದರು. ಮತ್ತೆ ರಾಜ್ಯದ ಉಚ್ಚ ನ್ಯಾಯಾಲಯಕ್ಕೆ ಬಂದರು. ಅಲ್ಲಿ ನ್ಯಾಯಾಧೀಶರು ಹೇಳಿದರು, ''ಈ ಅಡಿಗೆಯವರನ್ನೆಲ್ಲಾ ಖಾಯಂಗೊಳಿಸಿದರೆ ನಾಳೆಯಿಂದ ಸಾರಿಗೆ ಉಪ್ಪು ಜಾಸ್ತಿ ಹಾಕಿಬಿಡುತ್ತಾರೆ, ಆದ್ದರಿಂದ ಖಾಯಂಗೊಳಿಸುವುದು ಬೇಡ,'' ಎಂದು. ಊಟ ಮಾಡುವವರ ಬಗೆಗಿನ ಕಳಕಳಿ ಶ್ಲಾಘನೀಯವಾದದ್ದೇ ಇರಬೇಕು. ಆ ಮಾತನ್ನು ಕೇಳಿದ ಒಬ್ಬ ಯುವಕನ ಮನಸ್ಸಿಗೆ ಬಂತು: ''ಎಲಾ, ಎಷ್ಟು ಚೆನ್ನಾದ ಪರಿಹಾರ! ಈವರೆಗೆ ಇದು ಹೊಳೆದೇ ಇರಲಿಲ್ಲವಲ್ಲ, ಎಂಥ ಬೆಪ್ಪು ನಾನು. ಅಲ್ಲ, ಇದೇ ಸೂತ್ರವನ್ನು ನ್ಯಾಯಾಧೀಶರಿಗೆ ಅನ್ವಯಿಸಿದ್ದರೆ ಬಾಲಕೃಷ್ಣನ್, ದಿನಕರನ್, ಸೇನ್, ಮುಂತಾದವರ ಮೇಲೆ ಆಪಾದನೆಗಳೇ ಇರುತ್ತಿರಲಿಲ್ಲವಲ್ಲ! ಆದ್ದರಿಂದ ಈ ಕ್ಷಣದಿಂದ ನ್ಯಾಯಾಧೀಶರನ್ನೆಲ್ಲಾ ಗುತ್ತಿಗೆ ಆಧಾರದ ಮೇಲೆ ದಿನಗೂಲಿಯ ಮೇಲೆ ನೇಮಿಸಿದರೆ ಹೇಗೆ?'' ಆ ಯುವಕ ರಾಷ್ಟ್ರಪತಿಯವರ ಕಚೇರಿಗೆ ಸಲಹೆ ರವಾನಿಸಲು ಅಡ್ಡಿಯಿಲ್ಲ, ಆದರೆ ಕೆಲಸಗಾರರು ಕಾರ್ಖಾನೆಗಳಲ್ಲಿ ಸದಾಕಾಲಕ್ಕೂ ಹಂಗಾಮಿಯಾಗಿ ಸೇವೆ ಸಲ್ಲಿಸಬೇಕು, ಕಡಿಮೆ ಕೂಲಿ ಪಡೆಯಬೇಕು, ಮಾಲೀಕನ ಮರ್ಜಿಯಲ್ಲಿರಬೇಕು. ಈ ವರ್ಷದ ಮೇ ದಿನಕ್ಕೆ ಎಂಥಾ ಸೊಗಸಾದ ಕೊಡುಗೆ, ಅಲ್ಲವೆ?

* * *

ಸರ್ವೋಚ್ಚ ನ್ಯಾಯಾಲಯವು ಡಾ|| ವಿನಾಯಕ ಸೇನ್‌ಗೆ ಸದ್ಯಕ್ಕಂತೂ ಬಿಡುಗಡೆ ನೀಡಿದೆ. ಇನ್ನು ಮೊಕದ್ದಮೆಯ ಅಂತಿಮ ತೀರ್ಮಾನವೇನಾಗುತ್ತದೋ ಕಾದು ನೋಡಬೇಕು. ಚಿದಂಬರಂ ಸೌಜನ್ಯಕ್ಕಾದರೂ ತೀರ್ಪನ್ನು ಸ್ವಾಗತಿಸಿರುವುದು ಒಳ್ಳೆಯ ಸಂಪ್ರದಾಯ. ನ್ಯಾಯಾಧೀಶರು ಹೇಳಿದರಂತೆ, ಗಾಂಧಿ ಆತ್ಮಕತೆಯ ಪುಸ್ತಕ ಹಿಡಿದವರೆಲ್ಲಾ ಗಾಂಧಿವಾದಿಗಳಲ್ಲ; ಎಂದು. ಅದಕ್ಕೇ ಇರಬೇಕು, ಗಾಂಧಿವಾದಿಗಳಲ್ಲಿ ಕೆಲವರು ಈಗ ಗೋಲ್ವಾಲ್ಕರ್ ಪುಸ್ತಕ ಹಿಡಿಯುತ್ತಿದ್ದಾರೆ! ಅದಕ್ಕಿಂತಲೂ ಮುಖ್ಯವಾಗಿ, ಮಾರ್ಕ್ಸ್ ಪುಸ್ತಕವನ್ನು ಒಮ್ಮೆಯೂ ಮುಟ್ಟುವ ಗೋಜಿಗೆ ಹೋಗದ ಮಾರ್ಕ್ಸ್‌ವಾದಿಗಳು ಮತ್ತು ಮಾರ್ಕ್ಸ್ ವಿರೋಧಿಗಳು ಇದ್ದಾರಲ್ಲ, ಅವರನ್ನು ಕುರಿತು ಏನು ವ್ಯಾಖ್ಯಾನ ನೀಡಬೇಕು?

* * *

ಸಾಹಿತ್ಯ ಸಮಾರಂಭಗಳಲ್ಲಿ ವಿಷಯಾಂತರ ಮಾಡಿ ಕೊರೆಯುವವರು ಇಲ್ಲದಿಲ್ಲ, ಅಂಥವರು ಕೇಳುಗರ ತಾಳ್ಮೆ ಪರೀಕ್ಷಿಸುತ್ತಾರೆ. ರಾಜಕಾರಣಿಗಳಾದರೆ ಇವೆಲ್ಲ ಮಾಮೂಲು. ಆದರೆ ಸಾಹಿತಿಗಳೇ ಸಂದರ್ಭೋಚಿತವಾಗಿ ಮಾತನಾಡದೆ, ವಿಷಯಕ್ಕೆ ಸಂಬಂಧಿಸದ ವಿಚಾರ ಗಳನ್ನೆತ್ತಿಕೊಂಡು ಸಮಯಪ್ರಜ್ಞೆಯೂ ಇಲ್ಲದೆ ಭಾಷಣ ಕೊಚ್ಚಿದರೆ ಆಭಾಸವಾಗುತ್ತದೆ. ಅಂಥದೊಂದು ಪ್ರಸಂಗ ಈಚೆಗೆ ಪುಸ್ತಕ ಬಿಡುಗಡೆ ಸಮಾರಂಭವೊಂದರಲ್ಲಿ ನಡೆಯಿತು. ನಿಗದಿಯಾಗಿದ್ದ ಭಾಷಣಕಾರರು ಕಥಾಲೋಕದ ತಜ್ಞರು, ಸಾಹಿತಿಗಳು. ನಿಗದಿಪಡಿಸಿದ್ದ ಸಮಯವನ್ನೂ ಮೀರಿ, ವಿಷಯ ಬಿಟ್ಟು ಬೇರೇನನ್ನೋ ಮಾತನಾಡಿ, ಪಾಂಡಿತ್ಯ ತೋರಿಸಲು ಹೋಗಿ ಪೆಚ್ಚಾದರು. ಅವರು ವಿರಮಿಸಿದಾಗ ಹಾಯೆನಿಸಿತು ಶ್ರೋತೃಗಳಿಗೆ.

* * *

ಈ ದೇಶದಲ್ಲಿ ಕ್ರಿಕೆಟ್ಟಿನ ಅವಾಂತರ ಭ್ರಷ್ಟಾಚಾರದ ಪೀಡೆಯಂತೆಯೇ ಭದ್ರವಾಗಿ ಅಂಟಿಕೊಂಡುಬಿಟ್ಟಿದೆ. ಫಿಫ್ಟಿ-೫೦ ಮುಗಿದು ಐಸಿಸಿ ಸಾವಿರಾರು ಕೋಟಿ ಲಾಭ ಸಂಪಾದಿಸಿತು ಇದೀಗ ತಾನೆ. ಇನ್ನು ಕ್ರಿಕೆಟಿಗರು ಜೇಬಿಗೆ ಹಾಕಿಕೊಂಡರು ಕೋಟಿಗಟ್ಟಳೆ. ಈಗ ಐಪಿಎಲ್‌ನ ಸರದಿ, ಟ್ವೆಂಟಿ-೨೦. ಆಟಕ್ಕಿಂತ ನೋಟವೇ ಜಾಸ್ತಿ. ಕಣದಲ್ಲಿರುವ ಕ್ರಿಕೆಟಿಗರೆಲ್ಲ ತಂಡಗಳ ಒಡೆಯರ ಸ್ವತ್ತು. ಅರ್ಥಾತ್ ಹರಾಜಿನಲ್ಲಿ ಕೊಂಡ ಗುಲಾಮರು. ಇದನ್ನು ಪ್ರಾರಂಭ ಮಾಡಿದ ಮೋದಿ ಎಂಬ ಚಾಣಾಕ್ಷ ಈಗ ತಲೆತಪ್ಪಿಸಿಕೊಂಡು ತಿರುಗುತ್ತಿದ್ದಾನೆ. ತಾನೂ ಕೋಟಿ ಕೋಟಿ ನುಂಗಿದ ಇತರರೂ ಸಂಪಾದಿಸಿದರು. ಇವನು ಸಿಕ್ಕಿಬಿದ್ದ ಅಷ್ಟೆ. ಕ್ರಿಕೆಟ್ ಅಭಿಮಾನಿಗಳಿಗೆ ದೊರೆತದ್ದು ಮಾತ್ರ ಸೊನ್ನೆ, ಲಾಠಿ ಏಟು. ವಿಶ್ವಕಪ್ ಕ್ರಿಕೆಟ್ 'ಸಮರ'ದಲ್ಲಿ ಟಿಕೆಟ್‌ಗಳೆಲ್ಲ ಕಾಳಸಂತೆಯಲ್ಲಿ ಮಾರಾಟ. ಟಿಕೆಟ್ ಪಡೆಯಲು ಹೋದ ಅಭಿಮಾನಿಗಳಿಗೆ ಬೆಂಗಳೂರು, ನಾಗಪುರ, ಅಹ್ಮದಾಬಾದ್‌ಗಳಲ್ಲಿ ದೊರೆತದ್ದು ಲಾಠಿ ಏಟು, ಬೆನ್ನಮೇಲೆ ಬಾಸುಂಡೆ. ಇನ್ನು ಮುಂಬೈನಲ್ಲಿ ನಡೆದ ಫೈನಲ್ಸ್‌ನಲ್ಲಿ ವಿಐಪಿ ಬಾಕ್ಸ್‌ನ ೨೫,೦೦೦ ರೂ. ಟಿಕೇಟಿಗೆ

ಕಾಳಸಂತೆಯಲ್ಲಿ ಒಂದೂವರೆ ಲಕ್ಷ ರೂಪಾಯಿ ? ಯಾರಿಗುಂಟು ಯಾರಿಗಿಲ್ಲ.

* * *

ಮುಖ್ಯಮಂತ್ರಿ ಯಡಿಯೂರಪ್ಪಾಗೆ ರಾಜಮಹಾರಾಜರುಗಳ ಕಾಲವಾಗಿದ್ದರೆ ಇಷ್ಟು ಹೊತ್ತಿಗೆ 'ದಾನಶೂರ ಕರ್ಣ' ಬಿರುದು ದೊರಕುತ್ತಿತ್ತೇನೊ. ಏಕೆಂದರೆ ಅವರು ಬಾಯಿಬಿಟ್ಟರೆ ಸುಮ್ಮನೆ ಕೋಟಿ ಕೋಟಿ ರೂಪಾಯಿಗಳು ಸುರಿಯುತ್ತಿರುತ್ತವೆ. ಅವನ್ನು ಬಾಚಿಕೊಂಡವರೇ 'ಧನ್ಯ'ರು. ಮಠಾಧಿಪತಿಗಳೆಲ್ಲ ಕೃತಾರ್ಥರು. ಈಗ ಯಡಿಯೂರಪ್ಪ ಕಣ್ಣು ದೇವಸ್ಥಾನಗಳ ಜೀರ್ಣೋದ್ಧಾರದ ಕಡೆಗೆ ಹೊರಳಿದೆ. ಅದಕ್ಕಾಗಿ ಕೋಟಿ ಕೋಟಿ ವಿನಿಯೋಗಿಸುವುದಾಗಿ ಪ್ರಕಟಿಸಿದ್ದಾರೆ. ಆಗುತ್ತೋ ಬಿಡುತ್ತೋ ಬೇರೆ ವಿಷಯ. ಮುಖ್ಯಮಂತ್ರಿಗಂತೂ 'ದೈವಕೃಪೆ' ಬೇಕು ಕುರ್ಚಿ ಭದ್ರಪಡಿಸಿಕೊಳ್ಳಲು. ಈ ಕೊಡುಗೈದಾನಿಗೆ ಎಲ್ಲಿಲ್ಲದ ಅವಾಂತರ. ವಿಶ್ವ ಕಪ್ ಗೆದ್ದ ಕ್ರಿಕೆಟಿಗರಿಗೆ ಹಿಂದುಮುಂದೆ ನೋಡದೆ ಬೆಂಗಳೂರಿನಲ್ಲಿ ನಿವೇಶನ ಕೊಡುವುದಾಗಿ ಪ್ರಕಟಿಸಿಯೇಬಿಟ್ಟರು. ಬಿ.ಡಿ.ಎ. ಕಾನೂನಿನಲ್ಲಿ ಅದಕ್ಕೆ ಅವಕಾಶವಿಲ್ಲ ಎನ್ನುವುದನ್ನು ಗಮನಕ್ಕೆ ತಂದಾಗ, ಕಾನೂನನ್ನೇ ತಿದ್ದುಬಿಡುತ್ತೇನೆ ಎಂದು ಬೀಗಿದರು. ಸರಕಾರದ ತೀರ್ಮಾನ ಎಂದರೆ ಸುಮ್ಮನಾಯಿತೆ. ಅವರೇ ಸರ್ಕಾರ ತಾನೆ! ಈಗ ಅವರು ಮಣ್ಣು ಮುಕ್ಕಬೇಕಾಯಿತು. ಅವರಿಗೆಲ್ಲ ಹಣ ನೀಡುವುದಾಗಿ ಪ್ರಕಟಿಸಿದ್ದಾರೆ ತೆಪ್ಪಗೆ. ಕಾನೂನುಬಾಹಿರವಾಗಿ ತಮ್ಮ ಕುಟುಂಬದವರಿಗೆ ನಿವೇಶನ ಹಂಚಿ ಲಾಗ ಹೊಡೆದದ್ದು ಅವರು ಮರೆತರೆ.

* * *

ಬೆಂಗಳೂರು ಕೆಂಪೇಗೌಡ ಐನೂರನೇ ಜನ್ಮದಿನೋತ್ಸವದ ವಿಜೃಂಭಣೆಯಲ್ಲಿ ಗೊಂದಲವೋ ಗೊಂದಲ. ಊರು ಬೃಹತ್ತಾಗಿ ಬೆಳೆದಿರುವುದರ ಸೂಚಕ. ಸನ್ಮಾನಿತರ ಪಟ್ಟಿ ಹನುಮಂತನ ಬಾಲದಂತೆ ಬೆಳೆದು, ನಗದು ೨೫ರಿಂದ ೨೦ ಸಾವಿರಕ್ಕಿಳಿದು ಯಾರಿಗೂ ಅದು ಲಭಿಸದೆ ಮಾನ ಕಳೆದುಹೋಯಿತು ನಗರಪಾಲಕರಿಗೆ. ಇಂಥ ಉತ್ಸವಗಳು ನಿರಾಡಂಬರವಾಗಿರಬೇಕು. ಯಾಕಿಷ್ಟು ಅದ್ದೂರಿ ಖರ್ಚು. ನಮ್ಮ ನಾಡಿನಲ್ಲಿ ಸನ್ಮಾನಗಳಿಗೇನು ಕಮ್ಮಿ ಇಲ್ಲ, ಯಾವುದಕ್ಕಾಗಿ ಹಂಬಲ, ನೂಕು ನುಗ್ಗಲು!

■

*ಸಂಪಾದಕೀಯ (೫ನೇ ಪುಟದಿಂದ)*

ಐಕ್ಯತೆಯ ಹೋರಾಟವೇ ಅದಕ್ಕೆ ಮಾರ್ಗ. ಹೋರಾಟ ಯಾರ ಮೇಲೆ ? ಎದುರಾಳಿ ಅತ್ಯಂತ ಪ್ರಬಲ. ತನ್ನ ಪ್ರಾಬಲ್ಯವನ್ನು ಸಾಮ್ರಾಜ್ಯಶಾಹಿಯ ಭಂಟನಾಗುವ ಮೂಲಕ ಇಮ್ಮಡಿಸಿಕೊಂಡಿರುವ ಭಾರತ ಸರ್ಕಾರದ ನಾಯಕರು ಜನಪ್ರತಿನಿಧಿಗಳೆಂಬ ಹೆಸರಿಗೆ ಕಳಂಕ ತಂದಿದ್ದಾರೆ. ಈ ಮೇ ದಿನದಂದು ಆ ವಿಷಜಂತುಗಳಿಗೆ ಬೋನಿನಲ್ಲಿ ಸ್ಥಳ ಕಾದಿರಿಸಬೇಕಾದ್ದು ದುಡಿಯುವ ಜನರ ಪ್ರಜಾಪ್ರಭುತ್ವವಾದಿ ಕರ್ತವ್ಯವಾಗಿದೆ. ಅದನ್ನು ನಿರ್ವಹಿಸಲು ಸಜ್ಜಾಗೋಣ.

## ಭ್ರಷ್ಟಾಚಾರದ ವಿರುದ್ಧ ಹೋರಾಟ ನಿರಂತರವಾಗಿ ನಡೆಯಬೇಕು

ಭ್ರಷ್ಟಾಚಾರದ ವಿಚಾರದಲ್ಲಿ ಜನಸಾಮಾನ್ಯರು ಎಷ್ಟು ಬೇಸತ್ತಿದ್ದಾರೆ ಎನ್ನುವುದಕ್ಕೆ ಈಚೆಗೆ ಜರುಗಿದ ಪ್ರತಿಭಟನೆಯೇ ಸಾಕ್ಷಿ. ಲಕ್ಷ ಲಕ್ಷ ಕೋಟಿ ಭ್ರಷ್ಟಾಚಾರದ ಆಪಾದನೆಯನ್ನು ಹೊತ್ತಿರುವ ಕಾಂಗ್ರೆಸ್ ನೇತೃತ್ವದ ಯುಪಿಎ ಸರಕಾರ ಇದನ್ನು ಎಚ್ಚರಿಕೆಯ ಗಂಟೆಯಾಗಿ ತೆಗೆದುಕೊಳ್ಳಬೇಕು. ರಾಲೇಗಾಂವ್‌ನ ಗಾಂಧಿವಾದಿ ಅಣ್ಣಾ ಹಜಾರೆ ಕೈಗೊಂಡ ನಿರಶನ ವ್ರತ ದೇಶವ್ಯಾಪಿ ಜನಾಂದೋಳನವಾಗಿ ಭುಗಿಲೆದ್ದದ್ದು ಒಂದು ವಿಶೇಷ ಘಟನೆ. ಈಚಿನ ವರ್ಷಗಳಲ್ಲಿ ದೇಶದಲ್ಲಿ ಇಂಥ ಮಿಂಚಿನ ವೇಗದಲ್ಲಿ ಹರಡಿದ ಪ್ರತಿಭಟನೆಯನ್ನು ಕಂಡಿರಲಿಲ್ಲ. ಸಮಾಜದ ಎಲ್ಲ ಸ್ತರಗಳಲ್ಲೂ ತಾಂಡವವಾಡುತ್ತಿರುವ ಭ್ರಷ್ಟಾಚಾರದ ವಿಷಯದಲ್ಲಿ ಜನಸಾಮಾನ್ಯರ ಆಕ್ರೋಶ ದೇಶದ ಮೂಲೆ ಮೂಲೆಗಳಲ್ಲಿ ಸ್ವಯಂಪ್ರೇರಿತವಾಗಿ ಅಭಿವ್ಯಕ್ತಿಯಾಯಿತು. ಎಲ್ಲೆಲ್ಲೂ ಭ್ರಷ್ಟಾಚಾರದ ವಿರುದ್ಧ ಪ್ರತಿಭಟನೆಗಳು, ಜನ ಲೋಕಪಾಲ ಮಸೂದೆ ತರಲು ಒತ್ತಾಯ ಕಂಡುಬಂತು. ಸರಕಾರದ ಮುಂದೆ ಅಣ್ಣಾ ಹಜಾರೆ ಮತ್ತು ಅವರ ಬೆಂಬಲಿಗರು ಮಂಡಿಸಿದ್ದ ಬೇಡಿಕೆಗಳನ್ನು ಸರಕಾರ ನಾಲ್ಕು ದಿನ ಅಳೆದೂ ಸುರಿದೂ ಸಂಧಾನ ನಡೆಸಿ ಕೊನೆಗೂ ಪೂರ್ಣವಾಗಿ ಒಪ್ಪಿಕೊಂಡಿತು. ಮುಂದಿನ ಮಳೆಗಾಲದ ಅಧಿವೇಶನದಲ್ಲಿ ಜನ ಲೋಕಪಾಲ ಮಸೂದೆಯನ್ನು ಮಂಡಿಸಲು ಸರಕಾರ ಮುಂದೆ ಬಂದಿದೆ. ಕರಡು ಮಸೂದೆ ತಯಾರಿಸಲು ಎಲ್ಲ ಬಗೆಯಲ್ಲೂ ಸಮ ಪ್ರಾತಿನಿಧ್ಯದ ಸಮಿತಿಯನ್ನು ರಚಿಸಲಾಗಿದೆ. ಇದು ನಿಜಕ್ಕೂ ಜನತೆಗೆ ಸಂದ ಜಯ. ಆದರೆ ಇಷ್ಟೇ ಸಾಕೆ ? ಜನ ಲೋಕಪಾಲ ಕಾಯಿದೆಯಿಂದ ಭ್ರಷ್ಟಾಚಾರದ ನಿಯಂತ್ರಣ ಸಾಧ್ಯವೆ ? ಇಂಥ ಹಲವಾರು ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ. ಕೇವಲ ಒಂದು ಕಾನೂನಿನ ಕ್ರಮದಿಂದ ಮಾತ್ರವೇ ನಮ್ಮಲ್ಲಿ ಬೇರೂರಿರುವ ಭ್ರಷ್ಟಾಚಾರ ನಿರ್ಮೂಲನವಾಗದು. ವ್ಯವಸ್ಥೆಯನ್ನು ಪರಿಷ್ಕರಿಸುವ ಎಲ್ಲ ಕ್ರಮಗಳೂ ಆಗಬೇಕು. ಅಂದರೆ ವ್ಯವಸ್ಥೆಯಲ್ಲಿ ಆಮೂಲಾಗ್ರವಾಗಿ ಸುಧಾರಣೆಯಾಗಬೇಕು. ಅದಕ್ಕಾಗಿ ಜನಾಂದೋಳನ ನಿರಂತರವಾಗಿ ಸಾಗಬೇಕು.

ವ್ಯವಸ್ಥೆಯಲ್ಲಿ ಸುಧಾರಣೆ ಎಂದರೆ ನಮ್ಮ ಸಂವಿಧಾನದತ್ತ ಕಾರ್ಯಾಂಗ, ಶಾಸಕಾಂಗ, ನ್ಯಾಯಾಂಗಗಳಲ್ಲಿ ಮೂಲಭೂತವಾದ ಬದಲಾವಣೆಗಳಾಗಬೇಕು. ಚುನಾವಣೆಗಳಲ್ಲಿ ಸುಧಾರಣೆಗಳಾಗಬೇಕು. ನ್ಯಾಯ ವಿತರಣೆಯಲ್ಲಿ ಬೇರೂರಿರುವ ಮಂದಗತಿ ಬದಲಾಗಿ, ಭ್ರಷ್ಟರಿಗೆ ಶೀಘ್ರವಾಗಿ ಶಿಕ್ಷೆಯಾಗಬೇಕು. ಹಾಗಾದಾಗ ಮಾತ್ರ ಸ್ವಲ್ಪಮಟ್ಟಿಗೆ ಪ್ರಗತಿಯಾದೀತು. ಇದು ಸುದೀರ್ಘವಾದ ಪ್ರಕ್ರಿಯೆ. ಅದು ಮುಂದುವರಿಯಲು ಜನಜಾಗೃತಿ ಅಗತ್ಯ. ಮುಂದೆ ಬರಲಿರುವ ಲೋಕಪಾಲ ಮಸೂದೆ ಎಷ್ಟೇ ಪ್ರಗತಿಪರವಾಗಿದ್ದು, ಕಟ್ಟುನಿಟ್ಟಾದ, ಸಮಯಾಧಾರಿತ ವಿಧಿಗಳನ್ನು ಹೊಂದಿದ್ದರೂ, ಸಮರ್ಪಕವಾಗಿದ್ದರೂ, ಭ್ರಷ್ಟರು ಅದನ್ನು ದಾಟಿಕೊಂಡು ಹೋಗುವ ಚಾಕಚಕ್ಯತೆ ಹೊಂದಿರುತ್ತಾರೆ. ಈಗಿರುವ ಕಾನೂನುಗಳ ವ್ಯಾಪ್ತಿಯಲ್ಲೇ ಭ್ರಷ್ಟರನ್ನು ಮಟ್ಟ ಹಾಕಲು ಸರಕಾರಕ್ಕೆ ಸಾಕಷ್ಟು ಅವಕಾಶವಿದೆ. ಆದರೆ ರಾಜಕೀಯ ಇಚ್ಛಾಶಕ್ತಿಯ ಕೊರತೆ ಅದಕ್ಕೆ ಅಡ್ಡಿ.

ಹಣ, ರಾಜಕೀಯ ಪ್ರಭಾವ ಹೊಂದಿರುವವ ಎಂಥ ಅಪರಾಧ ಎಸಗಿದರೂ ಬಚಾವಾಗುವ ಅವಕಾಶ ಹೊಂದಿರುತ್ತಾನೆ. ಸ್ವತಂತ್ರ ಭಾರತದಲ್ಲಿ ಇದು ಮೊದಲಿನಿಂದಲೂ ನಡೆದುಬಂದಿದೆ. ಭ್ರಷ್ಟ ರಾಜಕಾರಣಿ, ರಾಜಕೀಯ ಬೆಂಬಲವಿರುವ ಅಧಿಕಾರಿ ಶಿಕ್ಷೆಗೆ ಗುರಿಯಾಗಿ, ಕಾರಾಗೃಹ ಸೇರಿರುವ ಉದಾಹರಣೆ ಒಂದೂ ಕಂಡುಬರುವುದಿಲ್ಲ. ಸ್ವತಂತ್ರ ಭಾರತದ ಮೊದಲ ಸರಕಾರದಲ್ಲೇ ಭ್ರಷ್ಟಾಚಾರದ ವಾಸನೆ ಬರತೊಡಗಿದ್ದು ವಿಸ್ಮಯವೇನಲ್ಲ. ವಿತ್ತ ಮಂತ್ರಿಯಾಗಿದ್ದ ಟಿ. ಟಿ. ಕೃಷ್ಣಮಾಚಾರಿಯವರು ಇನ್ಸೂರೆನ್ಸ್ ಹಗರಣದಲ್ಲಿ ಸಿಕ್ಕಿಕೊಂಡು ಸಚಿವ ಪದವಿ ಕಳೆದುಕೊಂಡರು. ಈ ಪ್ರಕರಣದಲ್ಲಿ ಶಿಕ್ಷೆಗೆ ಗುರಿಯಾದ್ದು ಉದ್ಯಮಿ ಹರಿದಾಸ ಮುಂದ್ರ. ಈ ಪ್ರಕರಣದಿಂದಾದ ಒಂದು ಒಳ್ಳೆಯ ಕಾರ್ಯವೆಂದರೆ ಇನ್ಸೂರೆನ್ಸ್ ಕ್ಷೇತ್ರದ ರಾಷ್ಟ್ರೀಕರಣ, ಸರಕಾರಿ ಸ್ವಾಮ್ಯ. ಆಗಿನಿಂದ ಎಷ್ಟೋ ಪ್ರಕರಣಗಳು ನಡೆದಿವೆ. ಜಾಗತೀಕರಣ ಉದಾರೀಕರಣದ ಗುಂಗಿನಲ್ಲಿ ಈಗ ಭ್ರಷ್ಟಾಚಾರ ಮುಗಿಲು ಮುಟ್ಟಿದೆ. ಆಗ ಭ್ರಷ್ಟಾಚಾರದಲ್ಲಿ ತೊಡಗಿದ್ದ ಹಣ ಲಕ್ಷಗಟ್ಟಳೆ ಏನಲ್ಲ. ಆದರೆ ಈಗ ೨ಜಿ ಹಗರಣ, ಕಾಮನ್‌ವೆಲ್ತ್ ಕ್ರೀಡಾ ಹಗರಣದಲ್ಲಿ ಕಬಳಿಕೆಯಾಗಿರುವುದು ಸಾವಿರಾರು ಕೋಟಿ ರೂಪಾಯಿಗಳು. ಕಾಮನ್‌ವೆಲ್ತ್ ಹಗರಣದ ರೂವಾರಿ ಕಲ್ಮಾಡಿ ಇನ್ನೂ ಸ್ವತಂತ್ರ ಪ್ರಜೆಯೇ ಆಗಿದ್ದಾನೆ ಏನೂ ಆಗಿಲ್ಲವೆಂಬಂತೆ. ೨ಜಿ ಹಗರಣದಲ್ಲಿ ಮಾಜಿ ಸಚಿವ ಎ. ರಾಜಾ ಸದ್ಯಕ್ಕೆ ಕಾರಾಗೃಹದಲ್ಲಿದ್ದಾನೆ. ಯಾವಾಗ ಬೇಕಾದರೂ ಆತ ಜಾಮೀನಿನ ಮೇಲೆ ಹೊರಬರುವ ಸಾಧ್ಯತೆಗಳಿವೆ. ಕಾನೂನು ಚತುರರು ಈ ಭ್ರಷ್ಟರನ್ನು ಪಾರುಮಾಡಲು ಸಿದ್ಧ. ಅದು ಅವರ ವೃತ್ತಿಧರ್ಮ! ಈ ಪ್ರಕರಣದ ಆಪಾದಿತರುಗಳು ಶಿಕ್ಷೆಗೆ ಗುರಿಯಾಗಲು ಇನ್ನೆಷ್ಟು ವರ್ಷಗಳು ಬೇಕಾದೀತೊ ? ಜಯಲಲಿತಾ ಹಗರಣ ದಶಕ ಕಳೆದರೂ ಯಥಾಸ್ಥಿತಿಯಲ್ಲೇ ಇದೆ. ಸತ್ಯಂ ಕಂಪ್ಯೂಟರ್ಸ್ ಉದ್ಯಮಿಯ ವಿಚಾರಣೆ ಇನ್ನೂ ಪ್ರಾರಂಭವೇ ಆಗಿಲ್ಲ. ಆತ ಒಂದಲ್ಲ ಒಂದು ನೆಪವೊಡ್ಡಿ ಕಾರಾಗೃಹ ವಾಸ ತಪ್ಪಿಸಿಕೊಳ್ಳುತ್ತಿದ್ದಾನೆ. ಕಾರಾಗೃಹಕ್ಕೆ ಹೋಗಿ-ಬಂದು ಮಾಡುತ್ತಾನೆ. ನಮ್ಮ ನ್ಯಾಯಾಲಯಗಳೂ ಅಷ್ಟೆ: ಇಂಥ ಭ್ರಷ್ಟರ ವಿಚಾರದಲ್ಲಿ ಹಗುರವಾಗಿ ನಡೆದುಕೊಳ್ಳುತ್ತವೆ. ವಿಚಾರಣೆ ನಡೆಸದೆಯೇ ತಡೆಯಾಜ್ಞೆಗಳನ್ನು ನೀಡುತ್ತವೆ. ನಮ್ಮ ಮುಖ್ಯಮಂತ್ರಿ ಯಡಿಯೂರಪ್ಪ ಈಗ ತಮ್ಮ ಮೇಲಿನ ಎಲ್ಲ ಆಪಾದನೆಗಳ ವಿಚಾರಣೆಗೆ ಉಚ್ಚ ನ್ಯಾಯಾಲಯದಿಂದ ತಡೆಯಾಜ್ಞೆ ಪಡೆದುಕೊಂಡಿದ್ದಾರೆ. ಇದು ವರ್ಷಗಟ್ಟಳೆ ಎಳೆಯುವುದರಿಂದ ಅವರು ಬಚಾವು. ಮುಂದೆ ಬರುವ ಲೋಕಪಾಲ ಕಾಯಿದೆ ಅಡಿಯಲ್ಲೂ ಇಂಥದ್ದೇ ಅಡ್ಡಿಗಳುಂಟಾಗುವ ಸಾಧ್ಯತೆಗಳು ಇಲ್ಲದಿಲ್ಲ. ಅದಕ್ಕಾಗಿಯೇ ಯಾವ ಭ್ರಮೆಯೂ ಇಲ್ಲದೆ, ಭ್ರಷ್ಟಾಚಾರದ ವಿರುದ್ಧ ಹೋರಾಟ ನಿರಂತರವಾಗಿ ನಡೆಯಬೇಕು. ಜಾಗೃತ ಜನಾಂದೋಳನವೊಂದೇ ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಲು ಸಾಧ್ಯ.




ಇನ್ನು ಸಂಪಾದಕೀಯ ಹಾಗೂ ಮುರಳಿಧರ್ ಅವರ 'ವಿಕೃತಿ ಸಂವತ್ಸರದ ವಿಕೃತಗಳು' ಲೇಖನದಲ್ಲಿ ಪ್ರಸ್ತಾಪಿಸಿರುವ ನ್ಯಾಯಾಂಗ ವಿಷಯಗಳೂ ಆತಂಕ ಹುಟ್ಟಿಸುತ್ತವೆ. ಇಂದು ನ್ಯಾಯಾಂಗದ ನಿರ್ಣಯಗಳ ಬಗ್ಗೆ ಸಾರ್ವಜನಿಕವಾಗಿಯೇ ಚರ್ಚೆಯಾಗುವಷ್ಟು ವಿವಾದಗಳು ತಲೆ ಎತ್ತುತ್ತಿವೆ. ನ್ಯಾಯಾಂಗದ ಯಾವುದೇ ತೀರ್ಮಾನಗಳು ಪ್ರಶ್ನಿತವಾಗಬಹುದಾದರೂ, ವಿವಾದಗಳೂ ಮತ್ತು ಮೇಲ್ಮನವಿಗಳೆಲ್ಲ ಇತ್ಯರ್ಥವಾಗುವ ಅವಧಿಯಲ್ಲೇ ಲಾಭ ಪಡೆಯುವ ಕಕ್ಷಿಗಾರರು ಏನನ್ನು ಸಹ ಮಾಡಲು ಸಿದ್ಧರಿರುತ್ತಾರೆ. ಸ್ವಲ್ಪ ಸಮಯ ಸಿಕ್ಕಿದರೂ ಕೋಟಿಗಟ್ಟಲೆ ಲಾಭ ಮಾಡುವ ಮಂದಿಯನ್ನು ಓಲೈಸಲು ಸಾಕಷ್ಟು ಜನರಿರುತ್ತಾರೆ. ಇದನ್ನೆಲ್ಲ ತಡೆಯುವವರಾರು ? ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರುಗಳೇ ಕಟಕಟೆಯಲ್ಲಿ ನಿಲ್ಲುವಂತಹ ಆರೋಪಗಳನ್ನು ನಾವಿಂದು ಕಾಣುತ್ತಿರುವುದು ವಿಷಾದಕರ ಸಂಗತಿಯಾಗಿದೆ.




ವಿದ್ಯುತ್ತಿಗೆಂದು ನಿರ್ಮಿಸಿದ ಅಣುಸ್ಥಾವರಗಳು ಎಂದೂ ಅಪಾಯಕಾರಿಯೆಂಬುದನ್ನು ಜಪಾನ್ ದೇಶದಲ್ಲಿ ನಡೆದ ದುರಂತ ನೆನಪಿಸುತ್ತಿದ್ದರೂ ನಮ್ಮ ಸರ್ಕಾರಗಳು ಕಣ್ಣು, ಕಿವಿ ಮತ್ತು ಬಾಯ್ಮುಚ್ಚಿ ಕುಳಿತಿವೆ. ಅಣುಸ್ಥಾವರಗಳು ಎಷ್ಟು ಸುರಕ್ಷಿತ ಎನ್ನುವ ಖಾತ್ರಿಯನ್ನು ಯಾರೂ ಸಹ ನೀಡಲಾರರು. ಈ ಹಿನ್ನೆಲೆಯಲ್ಲಿ ಮುಖಪುಟದ ಚಿತ್ರ ಪ್ರಸ್ತುತವೆನಿಸುತ್ತದೆ ಹಾಗೂ ನಮ್ಮನ್ನೆಚ್ಚರಿಸುತ್ತದೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

**ಏಪ್ರಿಲ್ ಸಂಚಿಕೆ**

ಡಾ॥ ಜಿ. ರಾಮಕೃಷ್ಣ ಅವರ 'ಪನಾಮಾ ಲೂಟಿಗೆ ಕ್ಯಾಮಿನೊ ರಿಯಲ್' ಎಂಬ ಲೇಖನವನ್ನು ಓದುತ್ತಾ ಅಮೆರಿಕಾ ಇಂಗ್ಲೆಂಡ್ ಹಾಗೂ ಇನ್ನಿತರ ಐರೋಪ್ಯ ದೇಶಗಳ ಬಗ್ಗೆ ನನ್ನ ಸ್ಮೃತಿಯಲ್ಲಿದ್ದ ಕೆಲವು ಕಲ್ಪನೆಗಳು ಸರಿದು ನಿಜಾಂಶದ ದರ್ಶನವಾಯಿತು. ಅವ್ಯಾಹತವಾಗಿ ಈ ದೇಶಗಳು ಕೇವಲ ಭೌತಿಕ ಸಂಪತ್ತಿಗಾಗಿ ಪ್ರಪಂಚದ ಇತರೆ ದೇಶಗಳನ್ನು ಹೇಗೆ ಬರ್ಬರವಾಗಿ ಉಪಯೋಗಿಸಿಕೊಂಡವೆಂಬುದನ್ನು ಲೇಖಕರು ಸವಿಸ್ತಾರವಾಗಿ ಐತಿಹಾಸಿಕ ಹಾಗೂ ಪ್ರಸಕ್ತ ಕಾಲಘಟ್ಟದ ಅಂಶಗಳನ್ನು ವಿವರಿಸಿದ್ದಾರೆ. ಈ ನಿಟ್ಟಿನಲ್ಲಿ ನನಗೊಂದು ಪುಸ್ತಕ ಓದಿದ ನೆನಪಾಗುತ್ತದೆ. ಅದು ಮಾಕ್ಸಿಂ ಗಾರ್ಕಿ ಅವರ 'ಅಮೆರಿಕಾ : ಸಿಟಿ ಆಫ್ ದ ಎಲ್ಲೋ ಡೆವಿಲ್'. ೧೯೦೬ರಲ್ಲಿ ಮಾಕ್ಸಿಂ ಗಾರ್ಕಿ ಅವರು ಅಮೆರಿಕಾಕ್ಕೆ ಭೇಟಿಯಿತ್ತಾಗ ಒಬ್ಬ ಬಿಳಿಯ ಪತ್ರಕರ್ತನು ನಿಮ್ಮ ಜನ ಅಮೆರಿಕನ್ನರನ್ನು ತಿರಸ್ಕಾರ ಭಾವದಿಂದ ನೋಡುತ್ತಾರಲ್ಲವೆ, ಎಂದು ಪ್ರಶ್ನಿಸಿದನಂತೆ. ಅದಕ್ಕವರ ಉತ್ತರ ಹೀಗಿದೆ : ಅಮೆರಿಕನ್ನರನ್ನಷ್ಟೇ ಅಲ್ಲ, ಅಲ್ಲಿರುವ ಪಾದ್ರಿಗಳು, ಹರಿಯುವ ನದಿಗಳು, ಹಕ್ಕಿಗಳು, ಕ್ರೂರ ಮೃಗಗಳು, ಬೆಟ್ಟಗಳು, ಅರಣ್ಯಗಳು, ವಿಜ್ಞಾನಿಗಳು, ತಂತ್ರಜ್ಞರು, ಬಂಡವಾಳಶಾಹಿಗಳು, ಯಂತ್ರಗಳು, ಶಿಕ್ಷಣ ವ್ಯವಸ್ಥೆ, ಸಾರಿಗೆ, ಇತ್ಯಾದಿ, ಇವುಗಳಾವುವೂ ನಿಮ್ಮದಲ್ಲವಲ್ಲ, ಇವುಗಳೆಲ್ಲವನ್ನೂ ಅಲ್ಲಿಯ ಸ್ಥಳೀಯರಿಂದ ದೋಚಿದ್ದಲ್ಲವೆ... ಹೀಗೆ ಅಮೆರಿಕಾ, ಇಂಗ್ಲೆಂಡ್ ಹಾಗೂ ಇನ್ನಿತರ ಐರೋಪ್ಯ ದೇಶಗಳ ಈ ದೋಚುಬಾಕತನವು ಮುಂದುವರಿಯುತ್ತಿರುವುದು ಆಘಾತಕಾರಿ ಬೆಳವಣಿಗೆಯಾಗಿದೆ. ಪ್ರಸ್ತುತ ಜನರಲ್ಲಿ ಈ ದೇಶಗಳ ಬಗ್ಗೆ ಅಸಹ್ಯವೆನಿಸುವಷ್ಟು ತಿರಸ್ಕಾರಭಾವ ಮೂಡಿದೆ. ಈ ನಿಟ್ಟಿನಲ್ಲಿ ಲೇಖನವು ಭಾರತೀಯರಾದ ನಮ್ಮನ್ನು ಅತಿಶೀಘ್ರದಲ್ಲಿ ಅಸಹ್ಯವನ್ನು ದೂರ ಇಡುವ ಹಾದಿಯಲ್ಲಿ ಎಚ್ಚೆತ್ತುಕೊಳ್ಳುವಂತೆ ಸೂಚಿಸುತ್ತಾ ಕಾರ್ಯಪ್ರವೃತ್ತರಾಗುವಂತೆ ಮಾಡುತ್ತದೆ.

ಬೆಂಗಳೂರು **ಬಿ. ಎನ್. ವೇಣುಗೋಪಾಲ್**

ಬಿ. ಶ್ರೀನಿವಾಸ್ ಅವರ 'ಕಾಣದಾಯಿತೋ ಊರುಕೇರಿ' ಗಣಿ ಕಾರ್ಮಿಕರ ಜೀವನದ ವಾಸ್ತವ ಬದುಕಿನ ಚಿತ್ರಣ, ಕತೆಗಾರರಿಂದ ಸೂಕ್ಷ್ಮವಾಗಿ ನಿರೂಪಿಸಲ್ಪಟ್ಟಿದೆ. ಗಣಿ ಮಾಲಿಕರ ವಿರುದ್ಧ ದನಿ ಎತ್ತಲಾಗದಷ್ಟು ಕಾರ್ಮಿಕರನ್ನು ಹದ್ದುಬಸ್ತಿನಲ್ಲಿಟ್ಟುಕೊಂಡಿರುವ ಗಣಿ ಧಣಿಗಳು ಹಾಗೂ ಶೋಷಿತ ಕಾರ್ಮಿಕರ ಜೀವನ ಸಮರ್ಥವಾಗಿ ಕತೆಯಲ್ಲಿ ನಿರೂಪಿಸಲ್ಪಟಿದೆ.

**ಕುವೆಂಪು ಅವರ ಆತ್ಮಶ್ರೀ ದರ್ಶನ**

ಜನಜೀವನದ ಶಾಶ್ವತ ಮೌಲ್ಯಗಳು ಕಾಲಕಾಲಕ್ಕೆ ಪುನರೂಪಿತಗೊಳ್ಳುತ್ತವೆ. ಅಂದಂದಿನ ಸಾಮಾಜಿಕ ಅಗತ್ಯಗಳನ್ನು ಪರಿಣಾಮಕಾರಿಯಾಗಿ ಪರಿಭಾವಿಸಿದ ಮಹಾಪುರುಷರು ಅವುಗಳನ್ನು ಪೂರೈಸಿ ವರ್ತಮಾನಕ್ಕೆ ವಿಭಿನ್ನ ತಿರುವನ್ನೂ ಇತಿಹಾಸಕ್ಕೆ ಹೊಸ ನಡಿಗೆಯನ್ನೂ ನೀಡುತ್ತಾರೆ.

ಸಮಾಜ ಅವರನ್ನು ದಾರ್ಶನಿಕರು ಎಂದು; ಅವರು ಪ್ರತಿಪಾದಿಸಿದ ಮೌಲ್ಯಗಳಿಗೆ ತತ್ವಗಳು, ಸೂಕ್ತಿಗಳು, ವಚನಗಳು, ಸಂದೇಶಗಳು ಎಂದು ಹಲವಾರು ಹೆಸರುಗಳಿಂದ ಗುರುತಿಸುತ್ತದೆ. ಜಡಗೊಂಡ ಪ್ರಭುತ್ವ

**ಡಾ॥ ಬಿ. ಎಸ್. ಶೈಲಜಾ ಅವರಿಗೆ ನಮಸ್ಕಾರಗಳು.**

**ಬಸವರಾಜ ಮಸೂತಿ ಎಂಬ ವಿದ್ಯಾರ್ಥಿಯಾದ ನಾನು ತಮ್ಮಲ್ಲಿ ಖಗೋಳದ ಬಗ್ಗೆ ತಿಳಿಯಲು ಇಚ್ಛಿಸಿದ್ದೇನೆ. ನಾನು ಕೇಳಿರುವ ಪ್ರಶ್ನೆಗಳಿಗೆ ಉತ್ತರ ಮತ್ತು ಮಾಹಿತಿಯನ್ನು ತಿಳಿಸುವಿರಿ ಎಂದು ನಂಬಿದ್ದೇನೆ.**

1. **ಚಂದ್ರನ ಬಗ್ಗೆ ಸಂಶೋಧನ ಕೇಂದ್ರ ಭಾರತದಲ್ಲಿ ಎಲ್ಲಿದೆ ?**
2. **20-3-2011. ಚಂದ್ರನ ಬಗ್ಗೆ ಮಾಧ್ಯಮದಲ್ಲಿ ಪ್ರಚಾರವಾದ ಸುದ್ದಿ ಇದು. ಚಂದ್ರ ಇಪ್ಪತ್ತು ವರ್ಷಕ್ಕೆ ಒಮ್ಮೆ ಶೇ. 12ರಷ್ಟು ದೊಡ್ಡದಾಗಿ ಕಾಣಲು ವೈಜ್ಞಾನಿಕ ಕಾರಣ ಕೊಡಿ.**
3. **ತಾವು ಬರೆದ ಫೆಬ್ರವರಿ 2011ರ ಹೊಸತುವಿನಲ್ಲಿ ಒರೈಯನ್ ಎಂಬ ಲೇಖನ ಓದಿದೆನು. ಅದರಲ್ಲಿ ತಾವು ನೈಋತ್ಯ ದಿಕ್ಕಿನ ನಕ್ಷತ್ರಗಳಿಗೆ, ಕುಂತಿ, ದ್ರೌಪದಿ, ವೈತರಣಿ ಮುಖ ಎಂದು ಹೆಸರು ಇಡಲು ಕಾರಣವೇನು ? ತಿಳಿಸಿ.**

**ಅಂಕಣಕಾರರ ಉತ್ತರ**

1. ಚಂದ್ರನ ಕುರಿತು ಸಂಶೋಧನೆಯನ್ನು ಭಾರತೀಯ ಬಾಹ್ಯಾಕಾಶ ಸಂಸ್ಥೆ ನಡೆಸುತ್ತಿದೆ.
2. 'ಸೂಪರ್‌ಮೂನ್' ಕುರಿತು ನಭಾವಲೋಕನದಲ್ಲಿ ಚರ್ಚೆಯಾಗಿದೆ. ಇದು ವರ್ಷಕ್ಕೊಮ್ಮೆಯಾದರೂ ನಡೆಯುವ ಘಟನೆ. 20 ವರ್ಷ ಕಾಯಬೇಕಾಗಿಲ್ಲ.
3. ಕುಂತಿ, ದ್ರೌಪದಿ - ಈ ಹೆಸರುಗಳನ್ನು ಪ್ರೊಫೆಸರ್ ಆರ್. ಎಲ್. ನರಸಿಂಹಯ್ಯನವರು ಬಳಸಿದ್ದಾರೆ. ಕ್ಯಾಸಿಯೋಪಿಯಾ, ಆಂಡ್ರೊಮಿಡಾ - ಈ ಹೆಸರುಗಳು ಪಾಶ್ಚಾತ್ಯರದ್ದು. ಅಲ್ಲಿಯ ಪುರಾಣದ ಕತೆಗಳು ನಮಗೆ ತಿಳಿದಿರುವುದಿಲ್ಲ, ಆದ್ದರಿಂದ ನಮ್ಮ ಪುರಾಣದ ಹೆಸರುಗಳನ್ನೇ ಕೊಟ್ಟರೆ ನೆನಪಿನಲ್ಲಿ ಇಟ್ಟುಕೊಳ್ಳಲು ಸುಲಭ. ಎರಿಡಾನಿಸ್ ಎಂಬುದು ಸ್ವರ್ಗದ ನದಿ. ಆದ್ದರಿಂದ ಅದಕ್ಕೆ ವೈತರಣೀ ಎಂದು ಹೆಸರಿಸಿದ್ದಾರೆ. ಅದರ ಮುಂಚೂಣಿಯ ಪ್ರಮುಖ ನಕ್ಷತ್ರಕ್ಕೆ ವೈತರಣೀ ಮುಖ ಎಂದು ಹೆಸರು. ಒಪ್ಪವಾಗಿದೆ. ತಮ್ಮ ಆಸಕ್ತಿಗೆ ಧನ್ಯವಾದಗಳು.

**– ಬಿ. ಎಸ್. ಶೈಲಜಾ**

ವ್ಯವಸ್ಥೆಯನ್ನು, ಸಂಪ್ರದಾಯಿಯಾದ ವ್ಯಕ್ತಿಗತ ಬದುಕನ್ನು ಚಲನಶೀಲಗೊಳಿಸಿ ಸಮಾಜದ ಸಂರಚನೆಯಲ್ಲಿ ಸಾವಯವ ಪರಿವರ್ತನೆ ತರುವ ಇಂಥ ಮೌಲ್ಯಗಳ ಸ್ಥಾಪಕರು ಭಿನ್ನ-ಭಿನ್ನವಾದ ಕಾಲದೇಶಗಳಲ್ಲಿ ಮಿಂಚಿ ಮರೆಯಾಗಿದ್ದಾರೆ. ಅವರಲ್ಲಿ ಕುವೆಂಪು ಅವರು ತಮ್ಮ ''ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ'' ಸಂದೇಶದ ಮೂಲಕ ಜನಮಾನಸವನ್ನು ಬೆಳಗಿದ್ದಾರೆ.

ಭಾರತೀಯ ಜನಜೀವನದ ಮೇಲೆ ಆವರಿಸಿದ್ದ 'ಮತ'ದ ಮೌಢ್ಯಗಳನ್ನು ಕಂಡುಕೊಂಡಿದ್ದ ಕುವೆಂಪು 'ಅನಿಕೇತನ' ಪ್ರಜ್ಞೆಯನ್ನು ಬೆಳೆಸಿಕೊಂಡು ವಿಶ್ವಮಾನವರಾಗಲು ಕರೆಯಿತ್ತರು. ಜಡಮತಿಯೆನಿಸಿದ ಭಾರತೀಯ ಧರ್ಮಪ್ರಜ್ಞೆಯನ್ನು ಚೇತನಗೊಳಿಸಿದ ಮಹಾನ್ ದಾರ್ಶನಿಕ ಸ್ವಾಮಿ ವಿವೇಕಾನಂದರ ದರ್ಶನದಿಂದ ಪ್ರಭಾವಿತರಾಗಿದ್ದ ಕುವೆಂಪು ಆತ್ಮಚೇತನದ ಶಕ್ತಿ-ಸಾಮರ್ಥ್ಯದ ಕುರಿತು ಅಪಾರ ಚಿಂತನಶೀಲ ಬರಹಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ಕೊಡಮಾಡಿದರು.

ಬದಲಾವಣೆಯೆಂಬುದು ವ್ಯಕ್ತಿಗತ ನೆಲೆಯಲ್ಲಿ ಆಂತರಿಕವಾಗಿ ಆರಂಭವಾಗಬೇಕು. ಅದು ಪರಿವರ್ತಿತಗೊಳ್ಳುತ್ತ ಸಮಷ್ಟಿಯಲ್ಲಿ ಪ್ರತಿಧ್ವನಿತವಾಗಬೇಕು ಎಂಬುದು ಅವರ ಅಧ್ಯಾತ್ಮದ ಆಶಯವಾಗಿತ್ತು. ಮತ ಮೌಢ್ಯವನ್ನು ಪ್ರಬಲವಾಗಿ ವಿರೋಧಿಸಿದರು. ಮತದ ಮೌಢ್ಯತೆಗಳನ್ನು ಸ್ಪಷ್ಟವಾಗಿ ಗುರುತಿಸಿ ಧಿಕ್ಕರಿಸಿದ್ದು ಕೇವಲ ಭಾವಪಟಲದ ಬೀಸು ಹೇಳಿಕೆಗಳಿಂದಲ್ಲ, ವೈಚಾರಿಕ ನೆಲೆಗಟ್ಟಿನಿಂದ. ಅದಕ್ಕೆ ಅವರ ಈ ಕವಿತೆಯೇ ಉದಾಹರಣೆ.

ಮೊದಲ ಠಕ್ಕನು ಮೊದಲ ಬೆಪ್ಪನು ಸಂಧಿಸಲು
ಸಂಭವಿಸಿತೆಂಬರೀ ಮತ ಎಂಬ ಮತಿವಿಕಾರಂ,
ದೊರೆ ಪುರೋಹಿತ ಮೊರ್ ಅವಳಿ ಮೊಲೆಯೂಡೆ
ಸಲಹಿದರಿದಂ!
ಮತದ ಮದಿರೆಯನೀಂಟಿ ಮಂಕು ಬಡಿದಿದೆ ಜನಕೆ!

ಎಂದು ತಮ್ಮ ಕವನದಲ್ಲಿ ಮತಮೌಢ್ಯದ ದುರಂತದ ಹಿನ್ನೆಲೆಯನ್ನು ವಿವರಿಸಿದ್ದಾರೆ.

ಈ ಮತದ ಬಲೆಯಲ್ಲಿ ಸಿಲುಕಿರುವ ನಮ್ಮ ಮತಿಯನ್ನು ವಿಮೋಚನೆಗೊಳಿಸುವದಕ್ಕಾಗಿ ಮತಿಯ ಮೇಲಿರುವ ತರ-ತರದ ಹಿಡಿತಗಳನ್ನು ಸಡಿಲಿಸಬೇಕು. ಜನಮಾನಸದ ಬುದ್ಧಿಯನ್ನು ಸಮಾಜ, ಧರ್ಮಮೌಢ್ಯತೆ, ಅಜ್ಞಾನ ಮುಂತಾದ ಅಂಕುಶಗಳು ನಿಯಂತ್ರಿಸುತ್ತಿವೆ. ಅವುಗಳಿಂದ ನಮ್ಮ ಬುದ್ಧಿಯನ್ನು ಬಿಡಿಸಿಕೊಂಡು ಹೊರಬರಬೇಕಾಗಿದೆ. ಆಗ ಮಾತ್ರ ನಿರಂಕುಶಮತಿಗಳಾಗಲು ಸಾಧ್ಯವಾಗುತ್ತದೆ. ಆತ್ಮಶ್ರೀ ಪ್ರಾಪ್ತಿಯಾಗುತ್ತದೆ.

ಕುವೆಂಪು ತಮ್ಮ ''ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ'' ದರ್ಶನವನ್ನು ಪ್ರತಿಪಾದಿಸುವಾಗ ವ್ಯಕ್ತಿಧರ್ಮವನ್ನು ಸಮರ್ಥಿಸಿದರು. ಒಬ್ಬೊಬ್ಬರಿಗೂ ಒಂದೊಂದು ಧರ್ಮ : ಅದು ಅವರವರ ವ್ಯಕ್ತಿಗತವಾದ ಮೌಲ್ಯಗಳು, ನಂಬಿಕೆಗಳು ಮತ್ತು ಸಿದ್ಧಾಂತಗಳನ್ನು ಒಳಗೊಂಡಿರಬೇಕೆಂದು ಪ್ರತಿಪಾದಿಸಿದರು. ಇದನ್ನು ಕೆಲವರು ತಪ್ಪಾಗಿ ಭಾವಿಸುವ ಸಾಧ್ಯತೆಗಳಿರಬಹುದು. ಪ್ರತಿಯೊಬ್ಬನ ಮೌಲ್ಯ- ನಂಬಿಕೆಗಳು ವಿಧ-ವಿಧವಾಗಿದ್ದರೆ ಸಮಾಜ ಸಂಘಟನೆ ದುರ್ಬಲವಾಗುವದೆಂಬ ಅನುಮಾನಗಳುಂಟಾಗಬಹುದು. ಇದಕ್ಕೆ ಪರಿಹಾರವಾಗಿ ಕುವೆಂಪು 'ಪೂರ್ಣದೃಷ್ಟಿತತ್ವ'ವನ್ನು ಕೊಟ್ಟರು. ನಮ್ಮ ದೃಷ್ಟಿಯಂತೆ ಸೃಷ್ಟಿಯಾಗುತ್ತದೆ ಎಂಬ ಸೌಂದರ್ಯಮೀಮಾಂಸೆ ಜೀವನ-ಮೀಮಾಂಸೆಯಾಗಬೇಕು. ಅವರ ವಿಶ್ವಮಾನವ ಸಂದೇಶದಲ್ಲಿ ''ಪ್ರತಿಯೊಂದು ಮಗುವು ಹುಟ್ಟುತ್ತಲೇ ವಿಶ್ವಮಾನವ. ಬೆಳೆಯುತ್ತ ನಾವು ಅವನನ್ನು ಅಲ್ಪಮಾನವನನ್ನಾಗಿ ಮಾಡುತ್ತೇವೆ. ಅದನ್ನು ಮತ್ತೆ ವಿಶ್ವಮಾನವನನ್ನಾಗಿ ಮಾಡುವದೇ ವಿದ್ಯೆಯ ಕರ್ತವ್ಯವಾಗಿದೆ'' ಎಂದು ಅವರು ಕರೆಕೊಟ್ಟರು. ಇಂತಹ ಮಹಾಮಾನವರನ್ನು ರೂಪಿಸುವ ಶಕ್ತಿ ಇಂದಿನ ವ್ಯಾಪಾರೀಕರಣಗೊಂಡ ಶಿಕ್ಷಣರಂಗದಲ್ಲಿ ಇಲ್ಲ. ಅದಕ್ಕಾಗಿ ಅಕ್ಷರಸ್ಥರಾದವರೂ ಕೂಡ ತಮ್ಮ ವ್ಯಕ್ತಿತ್ವವನ್ನು ಹೇಗೆ ರೂಪಿಸಿಕೊಳ್ಳಬೇಕೆಂಬ ಉದಾತ್ತ ಸಂದೇಶ ಅವರ 'ಅನಿಕೇತನ' ಕವಿತೆಯಲ್ಲಿದೆ. ವ್ಯಕ್ತಿಚೇತನಕ್ಕೆ ಅವರು,

ರೂಪ-ರೂಪಗಳನ್ನು ದಾಟಿ
ನಾಮ ಕೋಟಿಗಳನ್ನು ಮೀಟಿ
ಎದೆಯ ಬಿರಿಯೆ ಭಾವದೀಟಿ
ಓ ನನ್ನ ಚೇತನ...
ಎಲ್ಲಿಯೂ ನಿಲ್ಲದಿರು
ಮನೆಯನೆಂದು ಕಟ್ಟದಿರು
ಕೊನೆಯನೆಂದು ಮುಟ್ಟದಿರು
ಓ ಅನಂತವಾಗಿರು!

ಎಂದು ಕರೆಯಿತ್ತರು. ಮಾನವಪ್ರಜ್ಞೆಯನ್ನು ವಿಶ್ವಮಾನವ ಪ್ರಜ್ಞೆಯನ್ನಾಗಿಸಿ, ಪಾರಮಾರ್ಥಿಕ ನಿಲುವುಗಳಲ್ಲೂ ಮನುಷ್ಯ ಕಲ್ಯಾಣದ ಅಮೃತತ್ವ ಕಂಡುಕೊಂಡು ಜಾತಿ-ಮತಗಳನ್ನು ಮೀರಿನಿಂತ ವಿಶ್ವ ದಾರ್ಶನಿಕರಲ್ಲಿ ಕುವೆಂಪು ಒಬ್ಬರು. ಅವರ ದಾರ್ಶನಿಕತೆ ಸಾಮಾಜಿಕ ಕಳಂಕಗಳಿಗೆ ಪರಿಹಾರವಾಗಬಲ್ಲುದು.

ಅಫಜಲಪುರ, ಗುಲಬರ್ಗಾ — ಡಿ. ಎಂ. ನದಾಫ್

## ಮೂರು ವಚನಗಳು

೧

ಅಕ್ಷರದ ಬೆಳಕಿನ ಮಹಾಬೆಟ್ಟವನ್ನೇ
ಹತ್ತಿದ್ದೇವೆಂದು ಬೀಗುವ ಗುರುಗಳು
ಅಹಂ ತಮದ ಕೂಪದಲ್ಲಿ ಬಡಬಡಿಸುತ್ತಿಹರಯ್ಯಾ
ನಾನು ನಾನೆಂಬ ಮತಿಸೂತಕಕ್ಕೆ
ಹುಟ್ಟಿನ ಮೂಲದ ಕಟ್ಟೆಯ ಕಟ್ಟಿ
ಶ್ರೇಷ್ಠತೆಯ ವ್ಯಸನದೊಳಗೆ ಬಳಲುತ್ತಿರುವರಯ್ಯಾ
ಊರು ಕೇರಿಗಳಲ್ಲಿ ಸೋಬಾನೆಯ ಸಿರಿಯಜ್ಜಿ
ಮರೆವನೇ ಸುಟ್ಟು ಅರಿವಿನ ಬೀಜಗಳ ಬಿತ್ತುತ್ತಿಹಳಯ್ಯಾ
ಇದು ನೀ ಕೊಟ್ಟ ಕಾಯಕವೆಂದು ನಿತ್ಯ ಮಣಿಯುವಳಯ್ಯಾ
ಇರುವೆಗೂ ನುಚ್ಚು ಹಾಕಿ ಗುರುವೆಂದು ನಮಿಸುವಳಯ್ಯಾ
ಅರಿವೇ ಗುರುವೆಂದ ಗುರುಸಿದ್ಧರಾಮ ತಂದೆ.

೨

ಕವಿಯ ಭಾವದಲ್ಲಿ ಮಗುವಿನ ಮುಗ್ಧ ವಿಸ್ಮಯವಿರಬೇಕು
ಮನದಲ್ಲಿ ತಾಯಿಯ ಅಂತಃಕರಣವಿರಬೇಕು
ಮತಿಯಲ್ಲಿ ಲೋಕವನರಿತ ಪರಂಜ್ಯೋತ
ಜ್ಞಾನಿಯಿರಬೇಕು
ನಡೆಯಲ್ಲಿ ನಿಜವನುಂಡ ನಿರಾಳವಿರಬೇಕು
ನುಡಿಯಲ್ಲಿ ನೆಲದಮರೆಯ ನಿದಾನವಿರಬೇಕು
ನೋಟದಲ್ಲಿ ಇಂತಿವೆಲ್ಲವನೊಳಕೊಂಡು
ಕಾಲದಂತುವನರಿವ ಕಾಲಜ್ಞಾನಿಯಿರಬೇಕಯ್ಯ
ಅರಿವೇ ಗುರುವೆಂದ ಗುರುಸಿದ್ಧರಾಮ ತಂದೆ.

೩

ವಿಮರ್ಶಕನೆಂಬುವನು ಕವಿಯ
ಆದಿ ಓದುಗನಯ್ಯಾ ನಿಜದ ಹಾದಿಗನಯ್ಯಾ
ಅನುಭವದ ಹೊಲಬನರಿದು
ತಲಬು ತೋರುವನಯ್ಯಾ
ತಾಯನಗಲಿದ ಎಳೆಗರುವ
ತಾಯೆಡೆಗೆ ಕರೆತಂದು ಕೆಚ್ಚಲೂಡಿಸಿದಂತೆ
ಅರಿವೆ ಗುರುವೆಂದ ಗುರುಸಿದ್ಧರಾಮ ತಂದೆ.

■ ಪ್ರೊ॥ ಎಸ್. ಜಿ. ಸಿದ್ದರಾಮಯ್ಯ
ಎಸ್-೧೨೩, ದೀಪ್ತಿ ಅಪಾರ್ಟ್‌ಮೆಂಟ್ಸ್, ಎಫ್-೨, ಕಿರ್ಲೋಸ್ಕರ್ ಕಾಲೊನಿ
ಮೊದಲನೇ ಅಡ್ಡರಸ್ತೆ, ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯



# ವಿಜ್ಞಾನ ಮತ್ತು ಕನ್ನಡ

■ ಎಸ್. ಮಂಜುನಾಥ

ವಿಜ್ಞಾನ ಮತ್ತು ಕನ್ನಡ ಎಂದಾಗ, ಅನೇಕ ವಿಚಾರಗಳ ಬಗ್ಗೆ ಬೆಳಕು ಚೆಲ್ಲಬೇಕಾಗುತ್ತದೆ. ಮೊದಲಿಗೆ, ನಮ್ಮ ಶಾಲಾ ಪಠ್ಯಗಳಲ್ಲಿ ಮೂಲಭೂತವಾಗಿ ಕನ್ನಡದಲ್ಲಿ ಕಲಿಸುವ ಪ್ರಾಥಮಿಕ ವಿಜ್ಞಾನ, ಕಾಲೇಜು ಹಂತದಲ್ಲಿನ ಒಂದಷ್ಟು ವಿಸ್ತಾರ ವಿಜ್ಞಾನ, ಹೊಸ ಸಂಶೋಧನೆಗಳನ್ನು ವಿಜ್ಞಾನಾಸಕ್ತರಿಗೆ ಮತ್ತು ಸಾಮಾನ್ಯ ಜನರಿಗೆ ತಿಳಿಸುವ ಜನಪ್ರಿಯ ವಿಜ್ಞಾನ, ಕನ್ನಡದಲ್ಲಿ ವಿಜ್ಞಾನ ಪ್ರಚಾರ ಮಾಡುತ್ತಿರುವ ಸಂಘ-ಸಂಸ್ಥೆಗಳು, ಪತ್ರಿಕೆ ಹಾಗೂ ನಿಯತಕಾಲಿಕೆಗಳು, ಬಾನುಲಿ ಹಾಗೂ ದೃಶ್ಯಮಾಧ್ಯಮಗಳು, ಇವುಗಳ ಕರ್ತವ್ಯ ಹಾಗೂ ನಿಭಾಯಿಸುತ್ತಿರುವ ಪಾತ್ರ, ಜೊತೆಗೆ ಇವುಗಳ ಮಹತ್ವವನ್ನು ತಿಳಿಸಿಕೊಡುವುದೇ ಈ ಲೇಖನದ ಮುಖ್ಯ ಆಶಯವಾಗಿದೆ.

**ಕನ್ನಡದಲ್ಲಿ ವಿಜ್ಞಾನ ಪಠ್ಯ :** ''ನಮ್ಮ ಭಾಷೆಯಲ್ಲಿ ಓದಿದ್ದೇ ಮೈಗೆ ಹತ್ತುವುದು. ಆಧುನಿಕ ವಿಜ್ಞಾನವನ್ನು ನಮ್ಮ ಭಾಷೆಗಳ ಮೂಲಕ ಕಲಿಯುವುದು ಸಾಧ್ಯವಿಲ್ಲವೆನ್ನುವುದು ಮೂಢನಂಬಿಕೆ'', ಎಂದು ಈ ಹಿಂದೆಯೇ ಹಿರಿಯ ಸಾಹಿತಿ ಹಾ. ಮಾ. ನಾಯಕರು ಪ್ರತಿಪಾದಿಸಿದ್ದನ್ನು ಎಂದಿಗೂ ಮರೆಯುವಂತಿಲ್ಲ. ಈ ಹಿನ್ನೆಲೆಯಲ್ಲಿ ಕನ್ನಡ ಮಾಧ್ಯಮದಲ್ಲಿನ ಪ್ರಾಥಮಿಕ ಹಾಗೂ ಪ್ರೌಢಶಾಲಾ ಹಂತದ ವಿಜ್ಞಾನ ಪಠ್ಯದ ಅವಶ್ಯಕತೆ ಹಾಗೂ ಅವುಗಳ ಮಹತ್ವವನ್ನು ತಿಳಿದುಕೊಳ್ಳಬಹುದು. ಈಗಂತೂ ನಮ್ಮ ವಿಜ್ಞಾನ ಪಠ್ಯಗಳು ಬಹಳಷ್ಟು ಸುಧಾರಿಸಿವೆ, ವಿಜ್ಞಾನವನ್ನು ಅತಿ ಸರಳವಾಗಿ ಸುಲಭವಾಗಿ ಬೋಧಿಸುತ್ತಿವೆ. ಈ ಪಠ್ಯಗಳ ಮೂಲಕ ಮಕ್ಕಳು ಬೇಗನೆ ವಿಜ್ಞಾನದ ವಿಚಾರಗಳನ್ನು ಗ್ರಹಿಸಲು ಸಾಧ್ಯವಾಗುತ್ತದೆ.

ಪದವಿಪೂರ್ವ ಕಾಲೇಜಿನ ಹಂತದಲ್ಲಿ ಕೂಡ ಈಗ ವಿಜ್ಞಾನ ಪಠ್ಯ ಪುಸ್ತಕಗಳು ಅಷ್ಟೇ ಸುಂದರವಾಗಿ ರೂಪುಗೊಂಡಿವೆ. ಉದಾಹರಣೆಗೆ, ನಮ್ಮ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದವರು ಭೌತವಿಜ್ಞಾನ, ಗಣಿತ, ರಸಾಯನವಿಜ್ಞಾನ ಹಾಗೂ ಜೀವವಿಜ್ಞಾನದ ಪಠ್ಯಪುಸ್ತಕಗಳನ್ನು ಅಚ್ಚುಕಟ್ಟಾಗಿ ಮುದ್ರಿಸಿ ಅತ್ಯಂತ ಜವಾಬ್ದಾರಿಯಿಂದ ತಮ್ಮ ಕರ್ತವ್ಯವನ್ನು ನಿಭಾಯಿಸಿದ್ದಾರೆ. ಕಾಲೇಜಿನ ಹಂತದಲ್ಲಿ ಈಗಿನ ಪರಿಸ್ಥಿತಿಯಲ್ಲಿ ಪಠ್ಯವನ್ನು ರಚಿಸುವುದು ಅಷ್ಟೊಂದು ಸರಳವೇನಲ್ಲ, ಅದೊಂದು ಪ್ರಯಾಸದ ಕೆಲಸವೇ ಹೌದು. ಹತ್ತು-ಹದಿನೈದು ವರ್ಷಗಳ ಹಿಂದೆ ಇದ್ದಂತೆ, ಈಗ ವಿಜ್ಞಾನ ಪಠ್ಯದಲ್ಲಿ ಯಾವುದೇ ಗೊಂದಲ-ಗೋಜಲುಗಳಿಲ್ಲ ಎನ್ನುವುದೇ ಹೆಮ್ಮೆಯ ಸಂಗತಿಯಾಗಿದೆ. ಈಗಿನ ವಿಜ್ಞಾನ ಬರಹಗಾರರಲ್ಲಿ, ಪಠ್ಯಪುಸ್ತಕ ರಚನಾಕಾರರಲ್ಲಿ ಒಮ್ಮತ ಮೂಡಿರುವುದೇ ಇದಕ್ಕೆ ಕಾರಣ. ಕನ್ನಡದಲ್ಲಿ ವಿಜ್ಞಾನವನ್ನು ನಾಲಿಗೆಗೆ ಕಗ್ಗಂಟಾಗಿಸದೆ ಸರಳ ಹಾಗೂ ಸುಲಲಿತವಾಗಿ ವಿಜ್ಞಾನ ಪಠ್ಯ ರಚನೆಯಾಗುತ್ತಿರುವುದು ಸಂತಸವನ್ನುಂಟುಮಾಡಿ ವಿಜ್ಞಾನ ಪ್ರೇಮಿಗಳಲ್ಲಿ ನೆಮ್ಮದಿಯನ್ನು ತಂದಿದೆ.

> ಅಖಿಲ ಭಾರತ ೭೭ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಾಡಿದ ಭಾಷಣದ ಭಾಗ

**ಕನ್ನಡದಲ್ಲಿ ಜನಪ್ರಿಯ ವಿಜ್ಞಾನ :** ವಿಜ್ಞಾನ ಹಾಗೂ ತಂತ್ರಜ್ಞಾನ ಕ್ಷೇತ್ರದಲ್ಲಿ ಪ್ರತಿದಿನ ನವನವೀನ ಸಂಶೋಧನೆಗಳು ನಡೆಯುತ್ತಿರುವುದರಿಂದಲೇ, ವಿಜ್ಞಾನವು ನಾವು ಊಹಿಸಲಸಾಧ್ಯವೆನಿಸಿದ ರೀತಿಯಲ್ಲಿ ಬೆಳೆಯುತ್ತಿದೆ. ಈ ಹೊಸ ಸಂಶೋಧನೆಗಳನ್ನು ಸಾಮಾನ್ಯ ಜನರಿಗೆ ಅರ್ಥವಾಗುವ ಭಾಷೆಯಲ್ಲಿ ಬರೆಯುವ ಸಾಹಿತ್ಯವೇ ಜನಪ್ರಿಯ ವಿಜ್ಞಾನ. ಸಾಹಿತ್ಯದ ಈ ಪ್ರಕಾರವು ವಿಜ್ಞಾನ ರಂಗದಲ್ಲಾದ ಇತ್ತೀಚಿನ ಬೆಳವಣಿಗೆಗಳ ಮಾಹಿತಿಯನ್ನು ನೀಡಿ ನಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಸಂಪೂರ್ಣವಾಗಿ ಸಹಕಾರಿಯಾಗಿದೆ.

ಮುದ್ರಣ ಕ್ಷೇತ್ರದಲ್ಲಿನ ಆಧುನಿಕ ತಂತ್ರಜ್ಞಾನದಿಂದಾಗಿ, ಆಕರ್ಷಕ ಹಾಗೂ ಬಹುವರ್ಣೀಯ ಜನಪ್ರಿಯ ಪುಸ್ತಕಗಳು ಸೂಜಿಗಲ್ಲಿನಂತೆ ಓದುಗರನ್ನು ಆಕರ್ಷಿಸುತ್ತಿವೆ. ಇದರಲ್ಲಿ ಪ್ರಮುಖವಾಗಿ ಭೌತವಿಜ್ಞಾನ, ಖಗೋಳವಿಜ್ಞಾನ, ರಸಾಯನವಿಜ್ಞಾನ, ವೈದ್ಯಕೀಯ, ಆರೋಗ್ಯ, ಮನೋವಿಜ್ಞಾನ ಹಾಗೂ ವೈಚಾರಿಕ ಕೃತಿಗಳನ್ನು ಕಾಣಬಹುದು. ಉದಾಹರಣೆಗೆ, ವೈಜ್ಞಾನಿಕ ಮನೋಧರ್ಮ, ವೈಜ್ಞಾನಿಕತೆ, ವಾಸ್ತು ಎಷ್ಟು ವಾಸ್ತವ ?, ಫಲಜ್ಯೋತಿಷ್ಯ ನಂಬುವಿರಾ ?, ಕೋಪರ್ನಿಕಸ್ ಕ್ರಾಂತಿ, ಕಲಾಂ ಮೇಷ್ಟ್ರು, ಶುಕ್ರಸಂಕ್ರಮ, ಆಗಸದ ಅಲೆಮಾರಿಗಳು, ಭೂಮಿಯ ವಯಸ್ಸು, ಫಿಸಿಕ್ಸ್ ಮತ್ತು ಐನ್‌ಸ್ಟೈನ್, ಜೀವಜಗತ್ತಿನ ಕೌತುಕಗಳು, ನಿದ್ರೆ ಮತ್ತು ಕನಸುಗಳು ಹೀಗೆ ವೈವಿಧ್ಯಮಯ ಶೀರ್ಷಿಕೆಗಳಿರುವ ಕೃತಿಗಳು ವಿಜ್ಞಾನ ಲೋಕದ ಹತ್ತು ಹಲವು ಸಂಗತಿಗಳನ್ನು ರಂಜನೀಯವಾಗಿ ಹಾಗೂ ರಸವತ್ತಾಗಿ ಓದುಗರ ಮುಂದೆ



ತೆರೆದಿಡುತ್ತಿವೆ. ಇದು ಕನ್ನಡದಲ್ಲಿ ವಿಜ್ಞಾನವನ್ನು ಜನಪ್ರಿಯಗೊಳಿಸುವ ದಿಶೆಯಲ್ಲಿ ಉತ್ತಮ ಬೆಳವಣಿಗೆಯಾಗಿ, ಕನ್ನಡ ಮತ್ತು ವಿಜ್ಞಾನದ ನಡುವೆ ಇರುವ ಅಂತರವನ್ನು ಕಡಿತಗೊಳಿಸುವ ಸುಲಭೋಪಾಯವಾಗಿದೆ.

ನಾವು ಓದಿದ್ದನ್ನು ಅಥವಾ ಕೇಳಿದ್ದನ್ನು ಸ್ಪಷ್ಟವಾಗಿ ಗ್ರಹಿಸಬೇಕಾದರೆ, ಅಭಿವ್ಯಕ್ತಿಗೊಳಿಸಬೇಕಾದರೆ ಮಾತೃಭಾಷೆಯ ಮಾಧ್ಯಮವೇ ಅತ್ಯುತ್ತಮವೆಂದು ವಿದ್ವಾಂಸರಿಂದ ಹಿಡಿದು ಜನಸಾಮಾನ್ಯರವರೆಗೂ ಎಲ್ಲರೂ ಒಪ್ಪುವ ಸಂಗತಿ. ಈ ಮುಖ್ಯ ಕಾರಣಕ್ಕಾಗಿಯೇ ವಿಜ್ಞಾನ ಮತ್ತು ತಂತ್ರಜ್ಞಾನ ವಿಷಯಗಳನ್ನು ಕನ್ನಡದಲ್ಲಿ ತಿಳಿಸುವ ಕೈಂಕರ್ಯದಲ್ಲಿ ನಮ್ಮ ವಿಜ್ಞಾನ ಸಾಹಿತಿಗಳು ತೊಡಗಿದ್ದಾರೆ. 'ವಿಜ್ಞಾನ ಮತ್ತು ಕನ್ನಡ' ಎಂಬುದನ್ನು ಧ್ಯೇಯ ವಾಕ್ಯವನ್ನಾಗಿಸಿಕೊಂಡು ತಮ್ಮ ಜೀವನವನ್ನೇ ಮುಡಿಪಾಗಿಸಿಕೊಂಡ ಅನೇಕ ಮಹನೀಯರು ನಮ್ಮ ನಡುವೆ ಇದ್ದಾರೆ. ಈ ದಿಶೆಯಲ್ಲಿ ಶಿವರಾಮ ಕಾರಂತರು, ಆರ್. ಎಲ್. ನರಸಿಂಹಯ್ಯ, ಜಿ. ಟಿ. ನಾರಾಯಣರಾವ್, ಎಂ. ಎ. ಸೇತುರಾವ್, ಎಚ್. ನರಸಿಂಹಯ್ಯ, ಜೆ. ಆರ್. ಲಕ್ಷ್ಮಣ ರಾವ್, ಎಚ್. ಆರ್. ರಾಮಕೃಷ್ಣ ರಾವ್, ಅಡ್ಯನಡ್ಕ ಕೃಷ್ಣಭಟ್, ಕೆ. ಪಿ. ಪೂರ್ಣಚಂದ್ರ ತೇಜಸ್ವಿ, ಎಂ. ಆರ್. ನಾಗರಾಜು, ಎಸ್. ಬಾಲಚಂದ್ರ ರಾವ್, ಬಿ. ವಿ. ವೀರಭದ್ರಪ್ಪ, ಬಿ. ಎಸ್. ಶೈಲಜಾ, ಟಿ. ಆರ್. ಅನಂತರಾಮು, ನರೇಂದ್ರ ನಾಯಕ್, ನಾಗೇಶ್ ಹೆಗ್ಡೆ, ಬಿ. ಪಿ. ರಾಧಾಕೃಷ್ಣ, ಎನ್. ಎಸ್. ಲೀಲಾ, ನೇಮಿಚಂದ್ರ, ಸಿ. ಆರ್. ಚಂದ್ರಶೇಖರ್, ನಾ. ಸೋಮೇಶ್ವರ ಇನ್ನೂ ಮುಂತಾದವರ ಸಾಧನೆಗಳನ್ನು ಗಮನಿಸಬಹುದು.

ಹಿಂದೆ ಒಂದು ಸಣ್ಣ ಝುರಿಯಾಗಿ ಹುಟ್ಟಿದ ಈ 'ಜನಪ್ರಿಯ ವಿಜ್ಞಾನ', ಇಂದು ದೊಡ್ಡ ಜಲಪಾತವಾಗಿ ಧುಮ್ಮಿಕ್ಕುತ್ತಿರುವುದು ಅದರ ಪ್ರಾಮುಖ್ಯತೆಯನ್ನು ಸಾರಿ ಹೇಳುತ್ತದೆ. ಜನಪ್ರಿಯ ವಿಜ್ಞಾನವೆಂಬ ಅಪರೂಪದ ಈ ಕ್ಷೇತ್ರ, ಸಾಹಿತ್ಯದಲ್ಲಿ ಅನಾಯಾಸವಾಗಿ ಬೆಳೆಯುತ್ತಿರುವುದು, ಒಂದರ್ಥದಲ್ಲಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುತ್ತಿದೆ. ಈ ಹಿಂದೆ ವಿಜ್ಞಾನ ಸಾಹಿತಿಗಳನ್ನು ಸಾಹಿತಿಗಳನ್ನಾಗಿ ಕಾಣದೆ ಸತಾಯಿಸಿದ್ದ ಕೆಲ 'ಮಡಿವಂತ' ಸಾಹಿತಿಗಳಿಗೆ ಇಂದಿನ ಈ ಲೇಖನದಲ್ಲಿ ಸೂಕ್ತ ಉತ್ತರ ನೀಡಲು ಪ್ರಯತ್ನಿಸಿದ್ದೇನೆ. ವಿಜ್ಞಾನ ಮತ್ತು ಕನ್ನಡ ಬೆಸೆದುಕೊಂಡು ಅಪರೂಪದ ಸಾಹಿತ್ಯ ಪ್ರಕಾರವಾಗಿ ರೂಪುಗೊಂಡಿರುವುದೇ ಜನಪ್ರಿಯ ವಿಜ್ಞಾನ ಸಾಹಿತ್ಯ. ವಿನಾಶ್ಚರ್ಯ ನೋಡಿ ! ಈ ಹಿಂದೆ ವಿಜ್ಞಾನ ಹಾಗೂ ಸಾಹಿತ್ಯ ಎಂದಿಗೂ ಸೇರಲಾರದ ಅಸಂಗತ ಕ್ಷೇತ್ರಗಳು ಎಂಬ ನಂಬಿಕೆ ಇಂದು ಮಿಥ್ಯೆಯಾಗಿದೆ.

ಜನಪ್ರಿಯ ವಿಜ್ಞಾನದಲ್ಲಿ ಕೆಲವು ಕೃತಿಗಳಂತೂ ಹಲವಾರು ಬಾರಿ ಮುದ್ರಣಗೊಂಡು, ಜನಮಾನಸದಲ್ಲಿ ಶಾಶ್ವತ ಸ್ಥಾನವನ್ನು ಪಡೆದುಕೊಂಡಿವೆ. ಅಂತಹ ಕೆಲವು ಕೃತಿಗಳ ಬಗ್ಗೆ ಮೆಲುಕುಹಾಕುವುದು ಒಂದು ರೋಮಾಂಚನಕಾರಿ ಸಂಗತಿಯೇ ಸರಿ. ಜಿ. ಟಿ. ನಾರಾಯಣರಾವ್ ಅವರ 'ವೈಜ್ಞಾನಿಕ ಮನೋಧರ್ಮ' ಎನ್ನುವ ಕೃತಿ ೭ ಮುದ್ರಣಗಳನ್ನು ಕಂಡು, ಕನ್ನಡ ಸಾಹಿತ್ಯ ಅಕಾಡೆಮಿಯ ಗೌರವ ಪುರಸ್ಕಾರ, ಕ.ಸಾ.ಪ.ದ ಡಾ|| ಎಚ್. ಎನ್. ದತ್ತಿನಿಧಿ ಪ್ರಶಸ್ತಿಯನ್ನು ತನ್ನದಾಗಿಸಿಕೊಂಡಿದೆ. ಈ ಕೃತಿಯು ಎಂದೆಂದಿಗೂ ಯುವ ವಿಚಾರವಾದಿಗಳಿಗೆ ಪ್ರೇರಕ ಶಕ್ತಿಯಾಗಿ ನಿಲ್ಲುವುದು. ಈ ಕೃತಿಯಲ್ಲಿ ಸಾಹಿತ್ಯಕ-ವೈಚಾರಿಕ-ವೈಜ್ಞಾನಿಕ ತ್ರಿವೇಣಿ ಸಂಗಮವನ್ನು ಓದುಗರು ಖಂಡಿತವಾಗಿಯೂ ಮನಗಾಣುತ್ತಾರೆ. ಉದಾಹರಣೆಗೆ, ಈ ಕೃತಿಯಲ್ಲಿನ 'ಗ್ರಹ ಮೌಢ್ಯವೋ ಬುದ್ಧಿ ಜಾಡ್ಯವೋ', 'ಶುಭ ಮುಹೂರ್ತವೆಂಬ ಮಾಯಾಮೃಗ', 'ಜಾತಕವೆಂಬ ಘೋರ ಪಾತಕ', 'ಇಲ್ಲಿಯ ಬದುಕು ಅಲ್ಲಿಯ ಸರಕು' ಎನ್ನುವ ಪಾಠದ ಶೀರ್ಷಿಕೆಗಳು ಓದುಗರ ಆಸಕ್ತಿಯನ್ನು ಬಡಿದೆಬ್ಬಿಸುತ್ತವೆ, ಸರಾಗವಾಗಿ ಓದಿಸಿಕೊಂಡು ಹೋಗುತ್ತವೆ.

ಹಾಗೆಯೇ ಡಾ|| ಎಸ್. ಬಾಲಚಂದ್ರರಾವ್ ಅವರ 'ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ' ಎನ್ನುವ ಕೃತಿ ೬ ಮುದ್ರಣಗಳನ್ನು ಕಂಡು, ಕ.ಸಾ.ಪ.ದ ಡಾ|| ಎಚ್. ಎನ್. ದತ್ತಿನಿಧಿ ಪ್ರಶಸ್ತಿಯನ್ನು ಪಡೆದುಕೊಂಡಿದೆ. ಯಾವುದೇ ಹೊಸ ಸಂಶೋಧನೆ ಬಗ್ಗೆ ಮಾತನಾಡಿದಾಗ, ಓ ಇದಾ...! ಇದೆಲ್ಲಾ ನಮ್ಮ ಖುಷಿ ಮುನಿಗಳಿಗೆ, ನಮ್ಮ ಪೂರ್ವಜರಿಗೆ ಅಂದೇ ಗೊತ್ತಿತ್ತು; ಅದನ್ನೇ ಇಂದಿನ ವಿಜ್ಞಾನಿಗಳು ಹೊಸದಾಗಿ ಹೇಳುತ್ತಿದ್ದಾರೆ, ಅಷ್ಟೆ, ಎಂದೆಲ್ಲಾ ಹಸಿ-ಹಸಿ ಸುಳ್ಳು ಹೇಳಿ ವಿಜ್ಞಾನದ ಮಹತ್ವವನ್ನು ಕುಂದಿಸುವ ಕೆಲಸ ಕೆಲ ಮತಾಂಧ ಶಕ್ತಿಗಳಿಂದ ನಿರಂತರವಾಗಿ ನಡೆಯುತ್ತಿದೆ. ಈ ರೀತಿ ಉಡಾಫೆ

# ನೀನು ಹೊರಟಹೋದ ನಂತರ



ನಡುರಾತ್ರಿ ನೀನು ಹೊರಟುಹೋದಿ
ಬಾಗಿಲನ್ನು ತೆರೆದೇ ಇಟ್ಟು, ಬೇಡವೆಂದರೂ
ಎದೆಯ ಮೇಲೆ ಹೆಜ್ಜೆ ಇಟ್ಟು,
ಒಳ ನುಗ್ಗಿದ ತಂಗಾಳಿ ಸುತ್ತತೊಡಗಿತು –

ಸುತ್ತಲು: ಸುತ್ತುವಾಗ ಅದರ ಮೂಗು
ಬಡಿದುಕೊಳ್ಳುತ್ತಿತ್ತು ಕೋಣೆಯ ಗೋಡೆಗಳಿಗೆ
ಬಟ್ಟಲಲ್ಲಿ ನೋವು, ಮಧು
ತುಂಬಿ ಕಾಯುತ್ತಿತ್ತು ಇರುಳಲ್ಲಿ ಅರ್ಧಮರ್ಧ –

ಬೆಳದಿಂಗಳು ಹೊಂಚಿ ಇಣುಕುತ್ತಿತ್ತು
ಕುಡಿ ಕಣ್ಣುಗಳಲ್ಲಿ, ತುಟಿ ನೇತ್ರ ಹಸ್ತ
ಹೃದಯ ಪಾದ ಎಲ್ಲವೂ ಒಂಟಿಯಾಗಿದ್ದವು,
ವಿರಕ್ತಿಯ ವಿರಹದಲ್ಲಿ ತಲೆದಿಂಬು ಹಾಸಿಗೆ –

ಮಂಚ ವಿರಹ ಅನುಭವಿಸುತ್ತಿದ್ದವು.
ಇಡೀ ರಾತ್ರಿ ಗಿಡದಲ್ಲಿ ಪ್ರೀತಿ ಪಡೆದ ಮೊಗ್ಗು
ಬೆತ್ತಲಾಗುತ್ತಿತ್ತು ಸೂರ್ಯನ ಬೆಳಕಿನಲ್ಲಿ,
ಸುಗಂಧೋಪಗಂಧ ಮಕರಂದ ಹೀರಲು –

ಕಾತುರದಿಂದ ಹಾರಾಡುತ್ತಿದ್ದವು. ಬಣ್ಣಬಣ್ಣದ
ದುಂಬಿಗಳು.
ಹೃದಯದ ಬಾಗಿಲು ತೆರೆದೇ ಇತ್ತು.
ಹೋದವಳಿಗೆ ಹೇಗೆ ತಿಳಿಸಲಿ ಪ್ರೀತಿಯ ದಾರಿ;
ಹೃದಯದ ದಾರಿ ಮರೆತೇಬಿಟ್ಟಿತೆ ಜೀವ ?

**ಡಾ|| ಎಂ. ವೆಂಕಟಸ್ವಾಮಿ**, ಸಂಖ್ಯೆ. ೫೧೯, ೩೯ನೇ ಬ್ಲಾಕ್, ಸಿ.ಪಿ.ಡಬ್ಲ್ಯುಡಿ. ಕ್ವಾರ್ಟರ್ಸ್
ಟೈಪ್ - ೫, ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು - ೫೬೦ ೧೦೨

ಮಾತನಾಡುವವರಿಗೆ ತಕ್ಕ ಉತ್ತರವನ್ನು ತಮ್ಮ ವಿಚಾರಾತ್ಮಕ ಲೇಖನಗಳಿಂದ ನೇರವಾಗಿ, ನಿಷ್ಠುರವಾಗಿ ಲೇಖಕರು ಈ ಕೃತಿಗಳಲ್ಲಿ ಸಿದ್ಧಮಾಡಿ ತೋರಿಸಿದ್ದಾರೆ. ಇನ್ನು ಪ್ರೊ॥ ಬಿ. ವಿ. ವೀರಭದ್ರಪ್ಪನವರ ಕೃತಿ 'ವಾಸ್ತು ಎಷ್ಟು ವಾಸ್ತವ ?' ೬ ಮುದ್ರಣಗಳನ್ನು ಕಂಡಿದೆ. ಇಲ್ಲಿ ಖದೀಮ ವಾಸ್ತು ತಜ್ಞರ ದಗಲ್ಬಾಜಿತನವನ್ನು ಎಳೆ-ಎಳೆಯಾಗಿ ಬಿಚ್ಚಿ ತೋರಿಸಿ ನಾಡಿನ ಜನತೆಗೆ ಅಮೋಘ ಕೊಡುಗೆಯನ್ನು ನೀಡಿದ್ದಾರೆ, ಪ್ರೊ॥ ಬಿ. ವಿ. ವಿ. ಅವರು.

''ವಿಜ್ಞಾನಿಗಳು ಸಹ ನಮ್ಮಂತೆ ಸಾಮಾನ್ಯ ಮನುಷ್ಯರು, ಅವರು ಸಹ ಸಾಮಾನ್ಯರಂತೆ ತಪ್ಪು ಮಾಡಿ ಪೇಚಿಗೆ ಸಿಲುಕುತ್ತಾರೆ, ಹಾಸ್ಯಕ್ಕೆ ಗುರಿಯಾಗಿ ಹಲವು ಹಗುರ ಘಟನೆಗಳಿಗೆ ಸಾಕ್ಷಿಯಾಗಿದ್ದಾರೆ'', ಎನ್ನುತ್ತಾರೆ ನಾಡಿನ ಹೆಸರಾಂತ ವಿಜ್ಞಾನ ಬರಹಗಾರರಾದ ಪ್ರೊ॥ ಜೆ. ಆರ್. ಲಕ್ಷ್ಮಣರಾವ್ ಅವರು ತಮ್ಮ 'ವಿಜ್ಞಾನಿಗಳೊಡನೆ ರಸನಿಮಿಷಗಳು' ಎನ್ನುವ ಕೃತಿಯಲ್ಲಿ, ಈ ಕೃತಿ ೧೦ ಮುದ್ರಣಗಳನ್ನು ಕಂಡಿರುವುದು ಇದರ ಜನಪ್ರಿಯತೆಗೆ ಸಾಕ್ಷಿ. ಮತ್ತೊಂದೆಡೆ ನಮ್ಮ ನಾಡಿನ ಖ್ಯಾತ ವಿಜ್ಞಾನ ಲೇಖಕರಾದ ಪ್ರೊ॥ ಎಚ್. ಆರ್. ರಾಮಕೃಷ್ಣರಾವ್‌ರವರು ತಮ್ಮ ಕೃತಿ 'ಖಗೋಳವಿಜ್ಞಾನದ ಸಂಕ್ಷಿಪ್ತ ಚರಿತ್ರೆ'ಯಲ್ಲಿ ಖಗೋಳ ಜ್ಞಾನ ಬೆಳೆದು ಬಂದ ಹಾದಿಯನ್ನು ಅತ್ಯಂತ ರೋಚಕವಾಗಿ ದಾಖಲಿಸಿದ್ದಾರೆ. ಈ ಪುಸ್ತಕವು ಕನ್ನಡ ಸಾಹಿತ್ಯ ಲೋಕದಲ್ಲಿ ಎಂದೆಂದಿಗೂ ಒಂದು ಮಹತ್ವದ ಅಮರ ಕೃತಿಯಾಗಿ ನಿಲ್ಲುವುದೆನ್ನುವುದರಲ್ಲಿ ಆಶ್ಚರ್ಯಪಡಬೇಕಾಗಿಲ್ಲ. ಉದಾಹರಣೆಗೆ ಈ ಕೃತಿಯಲ್ಲಿನ ಮುಕ್ತ ಚಿಂತನೆಯ ಮುಕ್ತಾಫಲ, ವಿಶ್ವದ ಮೋಜಣಿ, ಇರುಳು ಬಾನು ಕಪ್ಪು ಏಕೆ ? ಎನ್ನುವ ಶೀರ್ಷಿಕೆಗಳು ಎಂಥವರನ್ನೂ ಆಕರ್ಷಿಸದೆ ಬಿಡದು. ಇವು ಕೇವಲ ಒಂದೆರಡು ಉದಾಹರಣೆ ಮಾತ್ರ. ಇದೇ ರೀತಿ ಜನಪ್ರಿಯ ವಿಜ್ಞಾನ ಸಾಹಿತ್ಯದಲ್ಲಿ ಇನ್ನೂ ಅನೇಕಾನೇಕ ಮಹತ್ತರ ಕೃತಿಗಳನ್ನು ನೋಡಬಹುದು. ಈ ಎಲ್ಲಾ ಕೃತಿಗಳು ಸಾಮಾನ್ಯ ಜನರ ವಿಜ್ಞಾನವನ್ನು ಹೆಚ್ಚಿಸುತ್ತಾ, ವೈಜ್ಞಾನಿಕ ಚಿಂತನೆಗೆ ನಮ್ಮೆಲ್ಲರನ್ನು ಪ್ರೇರೇಪಿಸುತ್ತಾ, ನಮ್ಮ ಜೀವನೋತ್ಸಾಹವನ್ನು ದುಪ್ಪಟ್ಟು ಮಾಡಿ, ನೆಮ್ಮದಿಯ ಜೀವನಕ್ಕೆ ಅತ್ಯಂತ ಸಹಕಾರಿಯಾಗಿವೆ. ಸಮಾಜದ ಸ್ವಾಸ್ಥ್ಯ ಕಾಪಾಡಲು ಈ ರೀತಿಯ ಕೃತಿಗಳು ಖಂಡಿತವಾಗಿಯೂ ಬೇಕು.




ಜನಪ್ರಿಯ ವಿಜ್ಞಾನದಲ್ಲಿ ಕೇವಲ ಲೇಖನಗಳಷ್ಟೇ ಅಲ್ಲದೆ, ವಿಜ್ಞಾನದ ಬೆರಗನ್ನು ಹೆಚ್ಚಿಸುವಂಥ ರಮ್ಯ ಕಥೆಗಳು ಹಾಗೂ ಕಾದಂಬರಿಗಳು, ಹಾಗೆಯೇ ಸುಮಧುರ ಭಾವನೆಗಳ ಜೊತೆ ಸ್ಪಷ್ಟ ವಿಚಾರಗಳನ್ನು ಮೂಡಿಸುವಂಥ ಜನಪ್ರಿಯ ವಿಜ್ಞಾನ ಕವನಗಳು ಸಹ ಹುಟ್ಟಿಕೊಂಡಿರುವುದು, ಈ ಶಾಖೆಯಲ್ಲಿನ ಹೊಸ ಸಾಧ್ಯತೆಗಳನ್ನು ನವೀನ ಸಾಹಿತ್ಯದ ಪ್ರಯೋಗಗಳನ್ನು ಬಹಳ ಸ್ಪಷ್ಟವಾಗಿ ಸಾಧಿಸಿ ತೋರಿಸಿವೆ. ಉದಾಹರಣೆಗೆ, ನವಕರ್ನಾಟಕ ಪ್ರಕಾಶನದವರು ಹೊರತಂದಿರುವ 'ಚುಕ್ಕಿಚಂದ್ರಮ' ಎನ್ನುವ ಖಗೋಳ ಕವನ ಸಂಕಲನ, 'ವೈಚಾರಿಕ ಕವನಗಳು' ಎನ್ನುವ ಜನಪ್ರಿಯ ವಿಜ್ಞಾನ ಕವನ ಸಂಕಲನಗಳಿಗೆ, ಓದುಗರಿಂದ ಉತ್ತಮ ಪ್ರತಿಕ್ರಿಯೆ ದೊರೆತು ಪುನಃ ಮರುಮುದ್ರಣಗಳಿಗೆ ಹೊರಟಿರುವುದು ಈ ಕೃತಿಗಳಲ್ಲಿನ ಗಟ್ಟಿತನವನ್ನು ತೋರಿಸಿಕೊಡುತ್ತದೆ. ಈ ಹಿಂದೆ ವೈಜ್ಞಾನಿಕ ಹಾಗೂ ವೈಚಾರಿಕ ಲೇಖನಗಳು ಪ್ರಥಮ ಬಾರಿಗೆ ಕನ್ನಡ ಸಾಹಿತ್ಯದಲ್ಲಿ ಪ್ರಕಟಗೊಂಡಾಗ ಕೆಲ 'ಶುದ್ಧ' ಸಾಹಿತಿಗಳು ವಿಜ್ಞಾನ ಸಾಹಿತ್ಯವನ್ನು ಲಘುವಾಗಿ ಕಂಡು ಕಡೆಗಣಿಸಿದ್ದರು. ಅಂಥದ್ದೇ ಉಪೇಕ್ಷೆ ಈ ಎರಡು ಜನಪ್ರಿಯ ವಿಜ್ಞಾನ ಕವನ ಸಂಕಲನಗಳಿಗೆ ಸಂದಿವೆ. ಕೆಲ ಸ್ವಘೋಷಿತ 'ಅಕಾಡಮಿಕ್' ಸಾಹಿತಿಗಳು, ಇವು ಕವನಗಳೇ ಅಲ್ಲವೆಂದು ಟೀಕೆ ಮಾಡಿ ತಮ್ಮ 'ಪ್ರಬುದ್ಧತೆ'ಯನ್ನು ಹಾಗೂ ಶುದ್ಧ ಸಾಹಿತ್ಯಕ ಮಡಿವಂತಿಕೆಯನ್ನು ಪ್ರದರ್ಶಿಸಿದ್ದಾರೆ. ಇದು ಮಾಮೂಲಿನ ಸಂಗತಿ. ಹೊಸ ವಿಚಾರಗಳನ್ನು, ಹೊಸ ಪ್ರಯೋಗಗಳನ್ನು ಸಾಂಪ್ರದಾಯಿಕ ಮನಸ್ಸುಗಳು ಒಪ್ಪಿಕೊಳ್ಳುವುದಿಲ್ಲ ಎಂಬುದಕ್ಕೆ ಇದೇ ಸಾಕ್ಷಿ. ಆದರೆ ಕಾಲವೇ ಇದಕ್ಕೆಲ್ಲಾ ತಕ್ಕ ಉತ್ತರ ನೀಡಲಿದೆ ಎಂಬುದು ನನ್ನ ಆಶಯ !

**ಕನ್ನಡದಲ್ಲಿ ವಿಜ್ಞಾನ ಪ್ರಚಾರ ಮಾಡುತ್ತಿರುವ ಸಂಘ - ಸಂಸ್ಥೆಗಳು**

ವಿಜ್ಞಾನವನ್ನು ಕನ್ನಡದಲ್ಲಿ ಪ್ರಚಾರಗೊಳಿಸಲು ರಾಜ್ಯಾದ್ಯಂತ ಕೆಲ ಸಂಘ-ಸಂಸ್ಥೆಗಳು ಸಕ್ರಿಯವಾಗಿ ಕಾರ್ಯ ನಿರ್ವಹಿಸುತ್ತಿವೆ. ಅದರಲ್ಲಿ ಪ್ರಮುಖವಾದವುಗಳು ಇಂತಿವೆ. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು (ಕ.ರಾ.ವಿ.ಪ.), ಭಾರತ ಜ್ಞಾನ ವಿಜ್ಞಾನ ಸಮಿತಿ, ತುಮಕೂರು ಜಿಲ್ಲಾ ವಿಜ್ಞಾನ ಕೇಂದ್ರ, ಗುಲ್ಬರ್ಗಾ, ಬೆಳಗಾವಿ, ಹಾವೇರಿ, ಹೀಗೆ ಇನ್ನೂ ಅನೇಕ ಜಿಲ್ಲಾ ವಿಜ್ಞಾನ ಕೇಂದ್ರಗಳು ಆಯಾ ಜಿಲ್ಲಾಡಳಿತದ ನೆರವಿನಿಂದ ಚಟುವಟಿಕೆಗಳನ್ನು ಹಮ್ಮಿಕೊಂಡು ಬಂದಿವೆ. ಅಷ್ಟೇ ಅಲ್ಲದೆ, ಬಳ್ಳಾರಿಯ ಮೇಡಂ ಕ್ಯೂರಿ ಅಕಾಡಮಿ, ಚಿತ್ರದುರ್ಗದ ಚಿಂತನಾ ಪ್ರಕಾಶನ, ಕುಪ್ಪಂನಲ್ಲಿರುವ ಅಗಸ್ತ್ಯ ವಿಜ್ಞಾನ ಫೌಂಡೇಶನ್, ಬೆಂಗಳೂರು ವಿಜ್ಞಾನ ವೇದಿಕೆ, ಬೆಂಗಳೂರಿನ ಜಗದೀಶ್ ವಿಜ್ಞಾನ ಕೇಂದ್ರ, ಬೆಂಗಳೂರು ಅಸೋಸಿಯೇಷನ್ ಫಾರ್ ಸೈನ್ಸ್ ಎಜುಕೇಷನ್, ನೆಹರು ತಾರಾಲಯ, ವಿಶ್ವೇಶ್ವರಯ್ಯ ತಾಂತ್ರಿಕ ವಸ್ತು ಸಂಗ್ರಹಾಲಯ, ದಕ್ಷಿಣ ಕನ್ನಡ ಜಿಲ್ಲಾ ವಿಚಾರವಾದಿಗಳ ಸಂಘ, ರಾಜ್ ವೈಚಾರಿಕ ವೇದಿಕೆ, ಶಾಲಾ-ಕಾಲೇಜು ಮಟ್ಟದ ವಿಜ್ಞಾನ ಸಂಘಗಳು ಇನ್ನೂ ಅನೇಕ ಸಂಘ-ಸಂಸ್ಥೆಗಳು, ನಗರ ಹಾಗೂ ಗ್ರಾಮೀಣ ಭಾಗಗಳಲ್ಲಿ ನಿರಂತರವಾಗಿ ಕಾರ್ಯ ನಿರ್ವಹಿಸುತ್ತಿವೆ. ವಿಜ್ಞಾನಿಗಳ ಜನ್ಮದಿನಾಚರಣೆ, ವಿಶೇಷ ವಿಜ್ಞಾನ ಉಪನ್ಯಾಸ, ಕಾರ್ಯಾಗಾರ, ಸ್ತಬ್ಧ ಚಿತ್ರ ಪ್ರದರ್ಶನ, ವಿಜ್ಞಾನ ವಸ್ತು ಪ್ರದರ್ಶನ, ವಿಜ್ಞಾನ ಜಾಥಾ, ಪವಾಡ ರಹಸ್ಯ ಬಯಲು, ರಸಪ್ರಶ್ನೆ... ಹೀಗೆ ಇನ್ನೂ ಅನೇಕ ವೈವಿಧ್ಯಮಯ ಕಾರ್ಯಕ್ರಮಗಳ ಮೂಲಕ ಈ ಎಲ್ಲಾ ಸಂಘ - ಸಂಸ್ಥೆಗಳು ವಿದ್ಯಾರ್ಥಿ ಸಮೂಹ, ಮಹಿಳಾ ಸಮುದಾಯ ಹಾಗೂ ಯುವಜನಾಂಗದ ಚಿತ್ತವನ್ನು ನಿರಂತರವಾಗಿ ತಮ್ಮತ್ತ ಸೆಳೆಯುತ್ತಿವೆ.

ಆದರೆ ಇವು ಏನೂ ಸಾಲದು, ಈ ದಿಸೆಯಲ್ಲಿ ಮತ್ತಷ್ಟು ವಿಜ್ಞಾನಕ್ಕೆ ಮೀಸಲಾದ ಸಂಘ-ಸಂಸ್ಥೆಗಳು, ಇನ್ನೂ ಹೆಚ್ಚಿನ ರೀತಿಯಲ್ಲಿ, ಬಹಳ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಬೇಕಾದ ಸನ್ನಿವೇಶ ಸೃಷ್ಟಿಯಾಗಿದೆ. ಏಕೆಂದರೆ, ಒಂದೆಡೆ ವಿಜ್ಞಾನ ಹಾಗೂ ತಂತ್ರಜ್ಞಾನ ಬೆಳೆದಂತೆಲ್ಲಾ ಮತ್ತೊಂದೆಡೆ ಅಜ್ಞಾನ, ಕಂದಾಚಾರ, ಜೋತಿಷ್ಯ, ಮಾಟ-ಮಂತ್ರ, ವಾಮಾಚಾರ, ವಾಸ್ತು, ಹಸ್ತಶಾಸ್ತ್ರ, ಸಂಖ್ಯಾಶಾಸ್ತ್ರ, ಗಿಳಿಶಾಸ್ತ್ರ, ದೇವರು-ದೆವ್ವ ಮೈಮೇಲೆ ಬರುವುದು, ಇನ್ನೂ ಅನೇಕ ರೀತಿಯ ಮೂಢನಂಬಿಕೆಗಳು ಬೆಳೆಯುತ್ತಲೇ ಇವೆ. ಇದೇ ಕಾರಣಕ್ಕಾಗಿ ವಿಜ್ಞಾನ ಸಂಘ-ಸಂಸ್ಥೆಗಳ ಬಲ ಮತ್ತಷ್ಟು-ಮಗದಷ್ಟು ಹೆಚ್ಚಬೇಕಾದ ಅನಿವಾರ್ಯತೆ ಹಿಂದೆಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವಾಗಿದೆ.

**ದಿನಪತ್ರಿಕೆ, ಹೊತ್ತಿಗೆ ಹಾಗೂ ನಿಯತಕಾಲಿಕಗಳು :** ನಾಡಿನ ಬಹುತೇಕ ದಿನಪತ್ರಿಕೆಗಳಲ್ಲಿ ವಿಜ್ಞಾನಕ್ಕಾಗಿ ಮೀಸಲಿರಿಸಿರುವ ವಿಜ್ಞಾನ ಪುರವಣಿಗಳನ್ನು ನೋಡಬಹುದು, ವಾರಕ್ಕೊಮ್ಮೆ ವಿಜ್ಞಾನ ಲೇಖನಗಳನ್ನು ಪ್ರಕಟಿಸುತ್ತಿರುವುದು ಸಂತೋಷದ ವಿಷಯವೇ ಸರಿ. ಈ ಲೇಖನಗಳ ಮೂಲಕ ಪತ್ರಿಕೆಗಳು ಒಂದಿಷ್ಟು ವಿಜ್ಞಾನ ಸೇವೆ ಮಾಡುತ್ತಿವೆ. ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕರ ಸಂಘವು ಈಗ್ಗೆ ೬೦-೭೦ ವರ್ಷಗಳ ಹಿಂದೆಯೇ ಹಳ್ಳಿ-ಹಳ್ಳಿಗಳಲ್ಲಿ ವಿಜ್ಞಾನದ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಉಪನ್ಯಾಸದ ವಸ್ತುಗಳನ್ನು ಚಿಕ್ಕ ಹೊತ್ತಿಗೆಗಳಾಗಿ ಮುದ್ರಿಸಿ ವಿಶಿಷ್ಟ ಬಗೆಯಲ್ಲಿ ವಿಜ್ಞಾನ ಪ್ರಚಾರಕ್ಕೆ ನಾಂದಿ ಹಾಡಿತು. ತರುವಾಯ, ಈ ಮಹತ್ಕಾರ್ಯವನ್ನು ನಾಡಿನ ಮೈಸೂರು, ಬೆಂಗಳೂರು, ಧಾರವಾಡ (ಕರ್ನಾಟಕ ವಿ.ವಿ.), ಗುಲ್ಬರ್ಗಾ, ಮಂಗಳೂರು, ಹಾಗೂ ಹಂಪಿ ವಿಶ್ವವಿದ್ಯಾನಿಲಯಗಳ ಪ್ರಸಾರಾಂಗಗಳು ಇದೇ ಕೆಲಸವನ್ನು ಮುಂದುವರಿಸಿಕೊಂಡು ಬಂದಿವೆ. ಇನ್ನು ನಿಯತಕಾಲಿಕಗಳ ಬಗ್ಗೆ ಹೇಳುವುದಾದರೆ, ೧೯೧೮ರಲ್ಲಿಯೇ ಬೆಳ್ಳಾವೆ ವೆಂಕಟರಮಣಪ್ಪ ಹಾಗೂ ನಂಗಪುರಂ ವೆಂಕಟೇಶ್ ಅಯ್ಯಂಗಾರ್ ಈ ಇಬ್ಬರು ಮಹನೀಯರು ತಮ್ಮ ಕರ್ನಾಟಕ ವಿಜ್ಞಾನ ಪ್ರಚಾರಿಣೀ ಸಮಿತಿಯಿಂದ 'ವಿಜ್ಞಾನ' ಎಂಬ ಮಾಸ ಪತ್ರಿಕೆಯನ್ನು ಪ್ರಾರಂಭಿಸಿದ್ದರು, ಇದು ಎರಡು ವರ್ಷಗಳ ಕಾಲ ನಡೆದದ್ದು ಒಂದು ರೋಮಾಂಚನಕಾರಿ ಸಂಗತಿಯೇ ಸರಿ. ನಂತರ ಮೈಸೂರು ವಿ. ವಿ.ಯ 'ವಿಜ್ಞಾನ ಪ್ರಪಂಚ', ಕರ್ನಾಟಕ ವಿ.ವಿ.ಯ 'ವಿಜ್ಞಾನ ಭಾರತಿ', ಬೆಂಗಳೂರು ವಿ.ವಿ.ಯ 'ಜನಪ್ರಿಯ ವಿಜ್ಞಾನ', ದಕ್ಷಿಣ ಕನ್ನಡ ಜಿಲ್ಲೆಯ ಶ್ರೀನಿವಾಸನಗರದ ವಿಜ್ಞಾನ ಸಂಘದಿಂದ ಹೊರ ಹೊಮ್ಮಿದ 'ವಿಜ್ಞಾನ ಲೋಕ' ನಿಯತಕಾಲಿಕೆಗಳು ಈ ದಿಕ್ಕಿನಲ್ಲಿ ತುಂಬ ಪ್ರಮುಖ ಪಾತ್ರವನ್ನು ನಿರ್ವಹಿಸಿದವು. ಇಂತಹ ಭವ್ಯ ಪರಂಪರೆ ಇರುವ ನಮ್ಮ ನಾಡಿನಲ್ಲಿ ಪ್ರಸ್ತುತ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಬಾಲ ವಿಜ್ಞಾನ ಪತ್ರಿಕೆ, ಭಾರತ ಜ್ಞಾನ-ವಿಜ್ಞಾನ ಸಮಿತಿಯ 'ಟೀಚರ್' ಪತ್ರಿಕೆ, ಹಂಪಿ ಕನ್ನಡ ವಿಶ್ವವಿದ್ಯಾನಿಲಯದ 'ವಿಜ್ಞಾನ ಸಂಗಾತಿ', ಈ ಎಲ್ಲಾ ನಿಯತಕಾಲಿಕೆಗಳು ತಮ್ಮದೇ ಶೈಲಿಯಲ್ಲಿ ಒಂದೇ ಲಯದಲ್ಲಿ ಸಾಕಷ್ಟು ವಿಜ್ಞಾನ ಕುರಿತ ಮಾಹಿತಿಗಳನ್ನು ನೀಡುತ್ತ ವೈಜ್ಞಾನಿಕ ಜಾಗೃತಿಯನ್ನು ಮೂಡಿಸುತ್ತಿವೆ. ಈ ನಿಯತ ಕಾಲಿಕೆಗಳು ಮತ್ತಷ್ಟು ಜನರನ್ನು ತಲುಪುವುದು ಇಂದು ತೀರ ಅಗತ್ಯವಾಗಿದೆ.

**ಕನ್ನಡ ದೃಶ್ಯ ಮಾಧ್ಯಮಗಳು ಹಾಗೂ ವಿಜ್ಞಾನ :** ಇಂದಿನ ನಮ್ಮ ಪ್ರಾದೇಶಿಕ ದೃಶ್ಯ ಮಾಧ್ಯಮಗಳಲ್ಲಿ ವಿಜ್ಞಾನದ ಬಗ್ಗೆ ಹೇಳಿಕೊಳ್ಳುವಂಥ ಯಾವ ಕಾರ್ಯಕ್ರಮಗಳೂ ಜನರ ಗಮನಕ್ಕೆ ಬಂದಿಲ್ಲ. ಕೆಲವು ಖಾಸಗಿ ವಾಹಿನಿಗಳು ವಿಜ್ಞಾನ ಕಾರ್ಯಕ್ರಮದ ಹೆಸರಿನಲ್ಲಿ ಬರೀ ವಿಜ್ಞಾನದ ಅವಾಂತರಗಳನ್ನು ಬಿತ್ತರಿಸುತ್ತಿವೆ, ಅಷ್ಟೆ. ಇನ್ನೂ ಕೆಲ ವಾಹಿನಿಗಳಲ್ಲಿ ವಿಜ್ಞಾನ ಹೇಳ ಹೆಸರಿಲ್ಲದಂತಾಗಿದೆ. ಇಂದಿನ ನಮ್ಮ ಟಿವಿ ಕಾರ್ಯಕ್ರಮಗಳು ಹೇಗಿವೆ ಎಂದರೆ ಬೆಳಿಗ್ಗೆ ಕಸದ ರಾಶಿಯೊಂದಿಗೆ ಪ್ರಾರಂಭಗೊಂಡು ರಾತ್ರಿ ಹೆಣದ ರಾಶಿಯೊಂದಿಗೆ ಮುಕ್ತಾಯಗೊಳ್ಳುತ್ತಿವೆ. ಕಸದ ರಾಶಿಯೆಂದರೆ ಜ್ಯೋತಿಷ್ಯ, ವಾಸ್ತು, ಸಂಖ್ಯಾಶಾಸ್ತ್ರ ಎಂಬಂತಹ ಕೊಳಕು ಕಾರ್ಯಕ್ರಮಗಳು. ಇನ್ನು ರಾತ್ರಿ ಮುಕ್ತಾಯವಾಗುವ ಹೆಣದ ರಾಶಿಯೆಂದರೆ ಕ್ರೈಮ್ ಡೈರಿ, ಕ್ರೈಮ್ ರಿಪೋರ್ಟರ್ ಹಾಗೂ ವಾರೆಂಟ್ ಇತ್ಯಾದಿ ರಕ್ತ ವೈಭವ ಕಾರ್ಯಕ್ರಮಗಳು. ಈ ಶೈಲಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ನಮ್ಮ ಟಿವಿ ಮಾಧ್ಯಮಗಳಿಂದ ಇನ್ನು ವಿಜ್ಞಾನವನ್ನು ಹೇಗೆ ತಾನೆ ಅಪೇಕ್ಷಿಸುವುದು ?

ಎಂದೋ ಸತ್ತು ಹೆಣವಾದ ವೈದಿಕ ಸಂಸ್ಕೃತಿಯ ಹೋಮ-ಹವನ, ಅಭಿಷೇಕ ಇತ್ಯಾದಿಗಳ ಬಗ್ಗೆ ಈ ಕೊಳಕು ಜ್ಯೋತಿಷಿಗಳು ಯಾವುದೇ ಅಡೆ-ತಡೆಗಳಿಲ್ಲದೆ, ಎಗ್ಗಿಲ್ಲದೆ ಉಪದೇಶ ನೀಡುತ್ತಿದ್ದಾರೆ. ಖಾಸಗಿ ವಾಹಿನಿಗಳಲ್ಲಿ ಜ್ಯೋತಿಷ್ಯ ಕಾರ್ಯಕ್ರಮಗಳ ಹಾವಳಿ ಎಷ್ಟಿದೆಯೆಂದರೆ, ಇಂಥಾ ಟಿವಿಯಲ್ಲಿ ಇಂಥ ಜ್ಯೋತಿಷಿಯೇ ಬರುತ್ತಾನೆ ಎನ್ನುವಷ್ಟರ ಮಟ್ಟಕ್ಕೆ ಖ್ಯಾತಿಯನ್ನು ಪಡೆದಿದ್ದಾರೆ. ಇದು ನಿಜವಾಗಿ ಖ್ಯಾತಿ ಎನ್ನೋ ಭ್ರಮೆಯ ಕುಖ್ಯಾತಿ ಅಷ್ಟೇ ! ಈ ಜ್ಯೋತಿಷಿಗಳಾದರೋ ಬಾಯಿ ತೆರೆದರೆ ಸಾಕು ಸುಳ್ಳು, ತುಟಿಪಿಟಿಕ್ಕೆಂದರೆ ಸಾಕು ತಗಡು ಮಂತ್ರಗಳ ಜೊಳ್ಳನ್ನೇ ತೂರಿಬಿಡುತ್ತಾರೆ. ಸೂರ್ಯ ಮತ್ತು ಗ್ರಹಗಳಿರುವ ರಾಶಿಯನ್ನೇ ನಂಬಿರುವ ಜ್ಯೋತಿಷ್ಯ, ಪಂಚಾಂಗವನ್ನು ಪರಿಷ್ಕರಿಸುವ ಪ್ರಯತ್ನ ಕೂಡ ಮಾಡಿಲ್ಲ. ಉದಾಹರಣೆಗೆ ಉತ್ತರಾಯಣ ಆಗಸದಲ್ಲಿ ಪ್ರಾರಂಭವಾದದ್ದು ಡಿಸೆಂಬರ್ ೨೨ರಂದು, ಜನವರಿ ೧೪ರಂದು ಅಲ್ಲ! ಇನ್ನು ಕುಂಡಲಿಯೇ ತಪ್ಪಾಗಿರುವಾಗ ಅದನ್ನು ನಂಬಿದ ಫಲಜ್ಯೋತಿಷ್ಯವಂತೂ ಸುಳ್ಳಿನ ಒಂದು ಕಂತೆ. ಆದರೆ ಇಂದು, ಇಂಥ ಖದೀಮರಿಗೇ ಮಾಧ್ಯಮಗಳಲ್ಲಿ ಮೊದಲ ಪ್ರಾಶಸ್ತ್ಯ ದೊರೆಯುತ್ತಿರುವುದು ನಿಜವಾಗಿಯೂ ನಮ್ಮ ನಾಡಿನ ದುರಂತ. ಹೀಗೆ ನಿರಂತರ ಸುಳ್ಳು ಹೇಳಿ ಅನವಶ್ಯಕವಾದ ಆತಂಕವನ್ನು ಸೃಷ್ಟಿಸಿ ಹಗಲು ದರೋಡೆ ಮಾಡುತ್ತಿದ್ದಾರೆ ನಮ್ಮ ಪ್ರಕಾಂಡ-ಪ್ರಚಂಡ ಜ್ಯೋತಿಷಿಗಳು. ಈ ರೀತಿಯಲ್ಲಿ ಜ್ಯೋತಿಷಿಗಳ ಸೇವೆಗೆ ತಮ್ಮ ತನು-ಮನ-ಧನವನ್ನು ಅರ್ಪಿಸಿಕೊಂಡ ಮಾಧ್ಯಮಗಳಿಗೆ, ವಿಜ್ಞಾನಿಗಳ ನೆನಪಾದರೂ ಹೇಗೆ ತಾನೆ ಬರುತ್ತೆ ಹೇಳಿ. ಒಂದು ವೇಳೆ ವಿಜ್ಞಾನಿಗಳನ್ನು ಸ್ಟುಡಿಯೋದಲ್ಲಿ ತಂದು ಕೂರಿಸಿದ್ದೆ ಆದರೆ, ವಿಜ್ಞಾನಿಗಳು ಸತ್ಯ ಹೇಳುತ್ತಾರೆ, ನಿಜವನ್ನೇ ಪ್ರತಿಪಾದಿಸುತ್ತಾರೆ, ಜ್ಯೋತಿಷಿಗಳ ಬಂಡವಾಳ ಹೊರಗೆಡಹುತ್ತಾರೆ. ಈ ರೀತಿ ಮಾಡಿದ್ದೇ ಆದರೆ, ಜನ ತಮ್ಮ ಕಾರ್ಯಕ್ರಮವನ್ನು ಹೇಗೆ ತಾನೆ ನೋಡ್ತಾರೆ ? ತಮ್ಮ ಟಿ.ಆರ್.ಪಿ. ರೇಟ್ ಹೇಗೆ ಜಾಸ್ತಿ ಮಾಡೋಕಾಗುತ್ತೆ ?

**ನವಕರ್ನಾಟಕ ಪ್ರಕಾಶನ :** ಕನ್ನಡದಲ್ಲಿ ವಿಜ್ಞಾನವನ್ನು ಜನಪ್ರಿಯಗೊಳಿಸುವ ನಿಟ್ಟಿನಲ್ಲಿ ಹಾಗೂ ವಿಜ್ಞಾನದ ಮೂಲಕ ಕನ್ನಡ ಭಾಷೆಯನ್ನು ಬೆಳೆಸುವ ಕಾರ್ಯದಲ್ಲಿ ನಾಡಿನ ಹೆಮ್ಮೆಯ ಸಂಸ್ಥೆಯಾದ ನವಕರ್ನಾಟಕ ಪ್ರಕಾಶನವು ಯಾವತ್ತಿಗೂ ಕೂಡ ಕಟಿಬದ್ಧವಾಗಿದೆ. 'ಪುಸ್ತಕಗಳ ಮೂಲಕ ಮನುಕುಲದ ಸೇವೆ' ಎಂಬ ಧ್ಯೇಯ ವಾಕ್ಯದೊಂದಿಗೆ ಸತತ ೫೦ ವರ್ಷಗಳಿಂದ ಕನ್ನಡಿಗರ ಮನೆ-ಮನಗಳನ್ನು ಬೆಳಗುತ್ತಿದೆ. ಈವರೆಗೆ ಈ ಪ್ರಕಾಶನ ಸುಮಾರು ೨೦೦ಕ್ಕೂ ಹೆಚ್ಚು ಜನಪ್ರಿಯ ವಿಜ್ಞಾನ ಕೃತಿಗಳು ಮತ್ತು ೧೫೦ಕ್ಕೂ ಹೆಚ್ಚು ಆರೋಗ್ಯ, ವೈದ್ಯಕೀಯ ಹಾಗೂ ಮನೋವೈಜ್ಞಾನಿಕ ಕೃತಿಗಳನ್ನು ತಂದಿದ್ದು, ಇವುಗಳಲ್ಲಿ ಬಹುತೇಕ ಕೃತಿಗಳು ಅನೇಕ ಮುದ್ರಣಗಳನ್ನು ಕಂಡಿವೆ. ಸದಾ ಕಾಲ ಕನ್ನಡದ ಏಳ್ಗೆಗಾಗಿ ಅವಿರತವಾಗಿ ಶ್ರಮಿಸುತ್ತಿರುವ ನವಕರ್ನಾಟಕ ಪ್ರಕಾಶನವು ಇಂದು ಸುವರ್ಣ ಮಹೋತ್ಸವದ ಸಂಭ್ರಮದಲ್ಲಿದೆ. ಇದು ಕನ್ನಡ ನಾಡಿನ ಹೆಮ್ಮೆಯ ವಿಷಯವೂ ಹೌದು.

ವಿಜ್ಞಾನಾಸಕ್ತರಿಗೆ ಅತ್ಯಂತ ಸಹಕಾರಿಯಾಗುವ ಒಂದು ಸರ್ವಮಾನ್ಯ ವಿಜ್ಞಾನ ಶಬ್ದಕೋಶ ನಾಡಿನ ಜನರ ಬಹುದಿನಗಳ ಬೇಡಿಕೆಯಾಗಿತ್ತು. ಈ ನಿಟ್ಟಿನಲ್ಲಿ ನವಕರ್ನಾಟಕ ಪ್ರಕಾಶನವು ನಾಡಿನ ಹಿರಿಯ ವಿಜ್ಞಾನ ಬರಹಗಾರರಾದ ಜಿ. ಟಿ. ನಾರಾಯಣರಾವ್ ಅವರ ಸಂಪಾದಕತ್ವದಲ್ಲಿ 'ವಿಜ್ಞಾನ ಪದವಿವರಣ ಕೋಶ'ವನ್ನು ಹೊರತಂದಿರುವುದು ವಿಜ್ಞಾನ ಪ್ರೇಮಿಗಳ ಮೆಚ್ಚುಗೆಗೆ ಕಾರಣವಾಗಿದೆ. ಈ ಕೃತಿಗೆ ನಾಡಿನ ಜನರಿಂದ ಅತ್ಯದ್ಭುತ ಪ್ರತಿಕ್ರಿಯೆ ದೊರೆತಿರುವುದು ಇದರ ಮಹತ್ವವನ್ನು ಸಾರುತ್ತದೆ. ಹಾಗೆಯೇ, ಕನ್ನಡದಲ್ಲಿ ಈ ಹಿಂದೆ ಶಿವರಾಮ ಕಾರಂತರ ನಾಲ್ಕು ಸಂಪುಟಗಳ 'ವಿಜ್ಞಾನ ಪ್ರಪಂಚ' ಎಂಬ ವಿಜ್ಞಾನ ಕೋಶ ಜನಪ್ರಿಯ ವಿಜ್ಞಾನಕ್ಕೆ ಅವಿಸ್ಮರಣೀಯ ಸೇವೆಯನ್ನು ಸಲ್ಲಿಸಿದೆ. ಅದಾದ ಬಳಿಕ ಮೊಟ್ಟಮೊದಲ ಬಾರಿಗೆ ನವಕರ್ನಾಟಕ ಪ್ರಕಾಶನವು ಬಹುವರ್ಣದಲ್ಲಿ ನಾಲ್ಕು ಸಂಪುಟಗಳ ಜ್ಞಾನ-ವಿಜ್ಞಾನ ಕೋಶ ಹೊರತಂದಿರುವುದು ಒಂದು ಅದ್ಭುತ ದಾಖಲೆಯೇ ಸರಿ. ಇವು ಮೂರು ಮುದ್ರಣಗಳನ್ನು ಕಂಡಿರುವುದು, ನಾಡಿನ ಜನತೆ ವಿಜ್ಞಾನವನ್ನು ಕನ್ನಡದಲ್ಲಿ ಸುಂದರವಾಗಿ ಪ್ರಸ್ತುತ ಪಡಿಸಿದಾಗ, ಎಷ್ಟರ ಮಟ್ಟಿಗೆ ಅಭಿಮಾನದಿಂದ ಸ್ವೀಕರಿಸುತ್ತಾರೆ ಎನ್ನುವುದಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. ಓದುಗರ ಈ ಅತ್ಯದ್ಭುತ ಪ್ರತಿಕ್ರಿಯೆಯನ್ನು ಕಂಡ ಪ್ರಕಾಶನವು ಶೀಘ್ರದಲ್ಲಿಯೇ ೧೫,೦೦೦ ಪದಗಳ 'ವಿಜ್ಞಾನ – ತಂತ್ರಜ್ಞಾನ ಪದಸಂಪದ'ವನ್ನು ನಾಡಿಗೆ ಸಮರ್ಪಿಸಲಿದೆ. ಇದರಲ್ಲಿ ವಿಜ್ಞಾನದ ಎಲ್ಲಾ ಶಾಖೆಗಳಲ್ಲಿ ಬರುವ ಪದಗಳ ಅರ್ಥ ಹಾಗೂ ವಿವರಣೆಯನ್ನು ನೀಡಲಿದೆ. ಇದು ಕನ್ನಡ ನಾಡಿನ ಜನತೆಗೆ ನವಕರ್ನಾಟಕ ಪ್ರಕಾಶನದ ಅತ್ಯಮೂಲ್ಯ ಕೊಡುಗೆಯಾಗಲಿದೆ.

ವಿಜ್ಞಾನ ಮತ್ತು ಕನ್ನಡದ ನಡುವಿನ ಅಂತರವು ಇನ್ನು ಮುಂದೆ ದಿನಕಳೆದಂತೆ ಕಡಿಮೆಯಾಗಲಿದೆ. ವಿಜ್ಞಾನವನ್ನು ಕನ್ನಡ ಭಾಷೆಯ ಜೊತೆ-ಜೊತೆಯಲ್ಲಿ ಕೊಂಡೊಯ್ದಾಗ ಮಾತ್ರ ಕನ್ನಡ ಭಾಷೆಯು ಶ್ರೀಮಂತಗೊಳ್ಳುವುದಲ್ಲದೆ, ನಾಡಿನ ಜನರ ಆಶೋತ್ತರಗಳಿಗೆ ಸ್ಪಂದಿಸುವ ನವಚೈತನ್ಯವನ್ನು ಪಡೆದುಕೊಳ್ಳುತ್ತದೆ. ಯಾವ ಭಾಷೆಯೂ ಸಹ ತನ್ನಷ್ಟಕ್ಕೆ ತಾನು ಅಸಮರ್ಥವಲ್ಲ. ಅದು ಸಮರ್ಥರ ಬರುವಿಕೆಯನ್ನು ನಿರೀಕ್ಷಿಸುತ್ತದೆ ಎನ್ನುವ ನುಡಿಗಟ್ಟಿಗೆ ಕನ್ನಡವೂ ಸಹ ಹೊರತಲ್ಲ. ಇಂದಿನ ವಿಜ್ಞಾನ ಮತ್ತು ತಂತ್ರಜ್ಞಾನ ಯುಗದಲ್ಲಿ ನವ-ನವೀನ ಸಂಶೋಧನೆಗಳು ಪ್ರತಿನಿತ್ಯ ನಡೆಯುತ್ತಿವೆ. ಇದರಿಂದಾಗಿ ಹೊಸ ವಸ್ತುಗಳು, ವಿಜ್ಞಾನದ ಪರಿಕರಗಳು, ನಿತ್ಯಜೀವನದ ಉಪಕರಣಗಳು ಮಾರುಕಟ್ಟೆಗೆ ನಿರಂತರ ಲಗ್ಗೆಯಿಡುತ್ತಿವೆ. ಇಂಥ ಹೊಸ ವಸ್ತು-ವಿಷಯಗಳನ್ನು ಮತ್ತು ವಿಚಾರಗಳನ್ನು ವ್ಯಕ್ತಪಡಿಸಲು ನಮ್ಮ ಭಾಷೆಯನ್ನು ಸಮರ್ಥ ಮಾಧ್ಯಮವನ್ನಾಗಿಸಿದಾಗಲೇ, ಭಾಷೆಯು ಬೆಳೆಯಲು ಸಾಧ್ಯ. ಈ ಸಾಧ್ಯತೆಯು ಶುದ್ಧ ಸಾಹಿತ್ಯದಕ್ಕಿಂತಲೂ ವಿಜ್ಞಾನ ಸಾಹಿತ್ಯದಲ್ಲಿ ಅತ್ಯಧಿಕ ಅವಕಾಶಗಳನ್ನು ಕಲ್ಪಿಸಿಕೊಡುತ್ತದೆ. ನವೀನ ವಿಚಾರಗಳನ್ನು ಅಭಿವ್ಯಕ್ತಪಡಿಸುವ ಈ ಪ್ರಕ್ರಿಯೆಯಲ್ಲಿ ಹೊಸ ಪದಗಳು, ಪದಗುಚ್ಛಗಳು ಮತ್ತು ನುಡಿಗಟ್ಟುಗಳು ಹಾಗೂ ಇವನ್ನು ಉಪಯೋಗಿಸುವ ಶೈಲಿಗಳು ಸಹಜವಾಗಿಯೇ ರೂಪುಗೊಳ್ಳುತ್ತವೆ. ಇದು 'ವಿಜ್ಞಾನ ಸಾಹಿತ್ಯ'ವು ಸೃಜನಶೀಲ ಸಾಹಿತ್ಯದ ಮುಖ್ಯ ಪ್ರಕಾರವೆಂದು ನೇರವಾಗಿ ಋಜು ಮಾಡಿ ತೋರಿಸಿದೆ. ವಿಜ್ಞಾನದಲ್ಲಿನ ಪ್ರತಿಯೊಂದು ಆಂಗ್ಲ ಪದವನ್ನು ಕನ್ನಡದಲ್ಲಿ ಭಾಷಾಂತರಿಸಲು ಕಷ್ಟವಾದೀತು. ಅದಕ್ಕೆ ಅಂಥಾ ಆಂಗ್ಲ ಪದಗಳನ್ನು ಹಾಗೆಯೇ ಉಳಿಸಿಕೊಂಡು, ಸರಳವಾಗಿ ತರ್ಜುಮೆ ಮಾಡಬಲ್ಲ ಮಿಕ್ಕ ಪದಗಳಿಗೆ ಸಮಾನಾರ್ಥ ಕೊಡುವ ಹೊಸ ಪದಗಳನ್ನು ಸೃಜಿಸಬಹುದು. ಇಂಥಾ ಸಮಾನವಾದ ಅಥವಾ ಪರ್ಯಾಯ ಪದಗಳನ್ನು ಕನ್ನಡದಲ್ಲಿ ಬಳಕೆಗೆ ತಂದು, ಅದನ್ನು ಹೆಚ್ಚು ಹೆಚ್ಚು ಜನಪ್ರಿಯವಾಗುವಂತೆ ಮಾಡಿದಾಗ ಮಾತ್ರ ಕನ್ನಡದಲ್ಲಿ ವಿಜ್ಞಾನವನ್ನು ತಂದಂತಾಗುತ್ತದೆ, ಭಾಷೆಯನ್ನು ಬೆಳೆಸಿದಂತಾಗುತ್ತದೆ.



**ಎಸ್. ಮಂಜುನಾಥ**
ಅಧ್ಯಕ್ಷರು, ಮೇಡಂ ಕ್ಯೂರಿ ಅಕಾಡೆಮಿ, ನಂ. ೬೩,
ವಾರ್ಡ್-೨೨, ರೆಡ್ಡಿ ಬೀದಿ, ಬಿ.ಎಂ.ಡಿ. ಶಾಲೆ ಹಿಂಭಾಗ,
ಬಳ್ಳಾರಿ - ೫೮೩ ೧೦೧.

■ ಡಾ॥ ಎನ್. ಗಾಯತ್ರಿ

# ಸೂಜಿ-ದಾರದ ಹಾಡು ಪಾಡು

ಜಾಗತೀಕರಣದ ಅಬ್ಬರದಲ್ಲಿ ದುಡಿಯುವ ರಂಗ ಹಲವಾರು ಬದಲಾವಣೆಗಳನ್ನು ಕಂಡಿದೆ. ಕಳೆದ ಒಂದೆರಡು ದಶಕಗಳಲ್ಲಿ ಎನ್.ಜಿ.ಓ.ಗಳು ಕಾರ್ಮಿಕ ಸಂಘಟನೆಯ ಕ್ಷೇತ್ರವನ್ನು ಪ್ರವೇಶಿಸಿವೆ. ಗಾರ್ಮೆಂಟ್ ಮಹಿಳಾ ಕಾರ್ಮಿಕರನ್ನು ಸಂಘಟಿಸಲೆಂದೇ ಆಕ್ಸ್‌ಫ್ಯಾಮ್‌ನ ಯೋಜನೆಯಾಗಿ ರೂಪಿತವಾದ ನ್ಯೂ ಟ್ರೇಡ್ ಯೂನಿಯನ್ ಇನಿಷಿಯೇಟೀವ್ಸ್‌ನ ಭಾಗವಾಗಿ, ಸಿವಿಡೆಪ್‌ನ ನೇತೃತ್ವದಲ್ಲಿ ಸಂಘಟನೆ ಮತ್ತು ಜಾಗೃತಿಗೆ ತೆರೆದುಕೊಂಡ ಗಾರ್ಮೆಂಟ್ ಮಹಿಳಾ ಕಾರ್ಮಿಕರು ಒಂದು ದೊಡ್ಡ ಕಾರ್ಮಿಕ ಶಕ್ತಿಯಾಗಿ ಹೊರಹೊಮ್ಮಿದ್ದಾರೆ. ದುಡಿಯುವ ಜಾಗದಲ್ಲಿ ಈ ಮಹಿಳೆಯರಿಗೆ ಸೇವಾ ಅನಿಶ್ಚಿತತೆ ಒಂದು ಕಡೆ, ಸದಾ ಕಿರುಕುಳ ಇನ್ನೊಂದು ಕಡೆ. ಒಬ್ಬರ ಅನುಭವವು ಸಾವಿರ ಜನರ ಅನುಭವ. ಇಲ್ಲಿ ಬಿತ್ತರವಾದ ಕಥೆ ಕಾರ್ಮಿಕ ನಾಯಕಿ ರುಕ್ಮಿಣಿಯದು ಮಾತ್ರವಾಗದೆ, ಹಲವಾರು ಗಾರ್ಮೆಂಟ್ ಕಾರ್ಮಿಕ ಮಹಿಳೆಯರ ಕಥೆಗಳಾಗಬೇಕಿದೆ. ಇದರ ಮುಂದುವರಿಕೆಯಾಗಿ ಈ ರಂಗದ ಅನುಭವವನ್ನು ಮೈಗೂಡಿಸಿಕೊಂಡ ಹಲವಾರು ನಾಯಕಿಯರು ಮೈದಳೆಯಬೇಕಿದೆ ; ಸ್ವತಂತ್ರ ಶಕ್ತಿ ಮತ್ತು ಸಾಮರ್ಥ್ಯವನ್ನು ಪಡೆದುಕೊಂಡು ಹೋರಾಟದ ಬಯಲನ್ನು ವಿಸ್ತರಿಸಬೇಕಿದೆ. ಎನ್.ಜಿ.ಓ.ಗಳ ಯೋಜಿತ ಕಾರ್ಯಕ್ರಮಗಳಾಚೆ ಸಂಘಟನೆ ಬೆಳೆಯದಿದ್ದರೆ, ಇಲ್ಲಿಯವರೆಗಿನ ಸಾಧನೆಗೆ ಅರ್ಥ ಬರುವುದಿಲ್ಲ.

ಇಡೀ ವಿಶ್ವವೇ ಈ ವರ್ಷ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಶತಮಾನೋತ್ಸವವನ್ನು ಆಚರಿಸುತ್ತಿದೆ. ಈ ಮಹಿಳಾ ದಿನಾಚರಣೆಯ ಹಿಂದೆ ದುಡಿಯುವ ಹೆಣ್ಣುಮಕ್ಕಳ ಪ್ರತಿಭಟನೆ ಮತ್ತು ರಾಜಕೀಯ ಕ್ರಿಯಾಶೀಲತೆಯ ಅಂತಸ್ಸತ್ವವಿದೆ. ಅದಕ್ಕೆ ಮುಖ್ಯವಾಗಿ ಕಾರಣಕರ್ತರಾದವರು ಗಾರ್ಮೆಂಟ್ ಕಾರ್ಖಾನೆಯ ಹೆಣ್ಣುಮಕ್ಕಳು. ಇಪ್ಪತ್ತನೆಯ ಶತಮಾನದ ಆರಂಭದ ಭಾಗದಲ್ಲಿ, ವಿಶೇಷವಾಗಿ ಗಾರ್ಮೆಂಟ್ ಕಾರ್ಖಾನೆಯಲ್ಲಿ ದುಡಿಯುವ ಹೆಣ್ಣುಮಕ್ಕಳ ಅಭೂತಪೂರ್ವ ಹೋರಾಟಗಳು ಇಡೀ ಮಹಿಳಾ ಸಮುದಾಯವನ್ನು ಒಗ್ಗೂಡುವಂತೆ ಮಾಡಿದವು; ತಮ್ಮ ಹಕ್ಕುಗಳ ಬಗ್ಗೆ ಜಾಗೃತಗೊಳ್ಳುವಂತೆ ಮಾಡಿದವು. ಆ ನಂತರದಲ್ಲಿ ಇವೇ ಹಲವಾರು ಮಹಿಳಾ ಹೋರಾಟಗಳಿಗೆ ಪ್ರೇರಕ ಶಕ್ತಿಯಾದವು. ಇಷ್ಟಾದರೂ ಈ ನೂರು ವರ್ಷಗಳ ಅವಧಿಯಲ್ಲಿ ಸ್ತ್ರೀಪ್ರಧಾನವಾದ ಈ ಗಾರ್ಮೆಂಟ್ ಕಾರ್ಖಾನೆಯ ಹೆಣ್ಣುಮಕ್ಕಳ ಸ್ಥಿತಿಯೇನೂ ತುಂಬ ಆಶಾದಾಯಕವಾಗಿ ಬದಲಾಗಿಲ್ಲ. ಸಿಲಿಕಾನ್ ಸಿಟಿ ಬೆಂಗಳೂರಿನಲ್ಲಿಯೇ ಐದು ಲಕ್ಷಕ್ಕೂ ಹೆಚ್ಚು ಕಾರ್ಮಿಕರು ಇರುವ ಗಾರ್ಮೆಂಟ್ ಕಾರ್ಖಾನೆಯಲ್ಲಿ ಶೇಕಡ ೮೦ರಷ್ಟು ದುಡಿಯುವ ಹೆಣ್ಣುಮಕ್ಕಳಿದ್ದಾರೆ. ಅವರ ದುಡಿಮೆಯ ಕ್ಷೇತ್ರದ ಸ್ಥಿತಿ-ಗತಿಗಳು, ನೋವು-ನಲಿವುಗಳನ್ನು ಆ ಕ್ಷೇತ್ರದ ಕಾರ್ಮಿಕ ನಾಯಕಿ ರುಕ್ಮಿಣಿಯವರ ಮಾತುಗಳಲ್ಲೇ ಆಲಿಸೋಣ.

ನಮ್ಮ ಊರು ಮಂಡ್ಯ ಜಿಲ್ಲೆಯ ನಾಗಪುರ ತಾಲ್ಲೂಕಿನ ವಡೇರಪುರ ಅಂತ. ನಮ್ಮ ತಂದೆ, ತಾಯಿಗೆ ನಾವು ಐದು ಜನ ಮಕ್ಕಳು. ಒಬ್ಬ ಅಣ್ಣ ಮೊದಲೇ ಆಕ್ಸಿಡೆಂಟಿನಲ್ಲಿ ಸತ್ತುಹೋಗಿದ್ದರು. ಹಾಗಾಗಿ ನನಗೆ ಒಬ್ಬ ಅಣ್ಣ, ಅಕ್ಕ, ಮತ್ತೆ ಒಬ್ಬ ತಮ್ಮ ಇದಾರೆ. ಅಕ್ಕ ಹ್ಯಾಂಡಿಕ್ಯಾಪ್. ಮುಂದೆ ಅವಳಿಗೆ ಜೀವನ ಕಷ್ಟ ಆಗಬಹುದು ಅಂತ ಅವಳನ್ನು ಪಿಯುಸಿವರೆಗೆ ಓದಿಸಿದ್ದರು. ಇನ್ನು ಅಣ್ಣ,



ತಮ್ಮ ಸ್ಕೂಲಿಗೆ ಹೋಗಿ ಓದೋರು. ನಾನು ಮಾತ್ರ ಸ್ಕೂಲಿಗೆ ಹೋಗಿದ್ದು ಎರಡು ಮೂರು ತಿಂಗಳು ಮಾತ್ರ. ನನಗೆ ಫಸ್ಟ್ ಸ್ಟಾಂಡರ್ಡ್ ಓದಿದ್ದೀನೆ ಅಂತ ಸರ್ಟಿಫಿಕೇಟ್ ಇದೆ. ಅಪ್ಪ ಡ್ರಿಂಕ್ಸ್ ತೊಗೋಳೋರು. ಏನೂ ಕೆಲಸ ಮಾಡ್ತಿರಲಿಲ್ಲ ಮನೇಲಿ ತುಂಬ ಬಡತನ. ಆದರೆ ಅಮ್ಮ ಮಾತ್ರ ಹೊಲದಲ್ಲಿ ದುಡಿದು ನಮ್ಮನ್ನೆಲ್ಲಾ ಸಾಕಿದಳು. ನಮಗೆ ಹೊಲ ಇತ್ತು, ಕುರಿ, ಎಮ್ಮೆ ಎಲ್ಲಾ ಇದ್ದವು. ಅಮ್ಮನ ಜೊತೆಗೆ ಈ ಎಲ್ಲಾ ಕೆಲಸ ಮಾಡಬೇಕಿತ್ತು. ಮನೇಲಿ ಗಂಡುಮಕ್ಕಳು ಸ್ಕೂಲಿಗೆ ಹೋಗುತ್ತಿದ್ದರು. ನನಗೆ ಓದಬೇಕು, ಕಲೀಬೇಕು ಅಂತ ಎಷ್ಟೇ ಆಸೆ ಇದ್ದರೂ ಮನೆ ಕೆಲಸ, ಹೊಲದ ಕೆಲಸ ಎಲ್ಲಾ ಇದ್ದದ್ದರಿಂದ ಸ್ಕೂಲಿಗೆ ಹೋಗೋಕಾಗಲಿಲ್ಲ. ಹಂಗೂನು ಎಲ್ಲಾ ಕೆಲಸ ಮುಗಿಸಿ ಮನೇಲಿ ಅಣ್ಣ ತಮ್ಮಂದಿರ ಜೊತೆ ಸಂಜೆಯ ವೇಳೇಲಿ ಅವರು ಓದುತ್ತಾ ಇದ್ದಾಗ ಅವರ ಜೊತೆ ಕೂತು ಅಕ್ಷರ ಜೋಡಿಸಿಕೊಂಡು ಓದೋದು ಕಲಿತೆ. ಈಗ ಸ್ವಲ್ಪ ಬರಿಯೋದು ಕಲ್ತಿದ್ದೀನಿ.

ನನಗೆ ಹದಿನಾರು ವರ್ಷಕ್ಕೆ ಮದುವೆ ಆಯ್ತು. ಅಂದರೆ ೧೯೯೦ರಲ್ಲಿ. ಅದು ನನಗೆ ಆಡುವ ವಯಸ್ಸು. ಕುರಿ ಮೇಯಿಸ್ಕೊಂಡು, ಮನೆ ಕೆಲಸ ಮಾಡ್ಕೊಂಡು ಆರಾಮಾಗಿ ಇದ್ದೆ. ನನ್ನ ಗಂಡ ಪಾಂಡವಪುರದ ಮಾದೇಶ್ವರದವರು. ಅವರು ಬೆಂಗಳೂರಿನಲ್ಲಿ ಒಂದು ಚಿಕ್ಕ ಕಂಪೆನೀಲಿ ಕೆಲಸ ಮಾಡ್ತಿದ್ದರು. ಆಗ ಅವರಿಗೆ ಸಂಬಳ ಒಂದು ಮುನ್ನೂರು ಇರಬಹುದು. ೧೯೯೧ರಲ್ಲಿ ನನ್ನ ಮಗ ಹುಟ್ಟಿದ. ಬಾಣಂತನಕ್ಕೆ ಅಂತ ಊರಿಗೆ ಹೋದಾಗ ಅಲ್ಲಿ ಅಂಗನವಾಡೀಲಿ ಮೆಶೀನ್ ಹಾಕಿದ್ದರು. ಅಲ್ಲಿ ಸ್ವಲ್ಪ ಹೊಲಿಯೋದು ಕಲಿತೆ. ಅದು ಲೆಗ್ ಮೆಶೀನು. ಏನೋ ಚೂರು ಪಾರು ಬಟ್ಟೇನ ಹೊಲಿಯೋದು ಕಲಿತೆ. ಬೆಂಗಳೂರಿಗೆ ಬಂದ ಮೇಲೆ ಮನೆ ನಡೀಬೇಕಲ್ಲಾ, ಏನಾರ ಕೆಲಸ ಮಾಡೋಣ ಅಂತ ಅನ್ಕೋತಿರುವಾಗ ನಾದಿನಿ 'ನಾನು ಮಗೂನ ನೋಡ್ಕೋತೀನಿ. ನೀನು ಕೆಲಸಕ್ಕೆ ಹೋಗು' ಅಂತಂದಳು. ಮನೆ ಹತ್ತಿರ ಒಬ್ಬಳು ಗಾರ್ಮೆಂಟ್ಸ್‌ಗೆ ಹೋಗುತ್ತಿದ್ದಳು. ಅವಳು ಜೊತೆಗೆ ಕರೆದುಕೊಂಡು ಹೋದಳು. ನನ್ನ ಕೆಲಸದ ಮೊದಲ ದಿನ ಈಗಲೂ ನನಗೆ ನೆನಪಿದೆ. ಫ್ಯಾಕ್ಟರಿ ಒಳಗೆ ಹೋದ್ವಿ. ಅದೊಂದು ಉದ್ದ ಓಣಿ ತರಹದ ದೊಡ್ಡ ಹಾಲ್. ಒಳಕ್ಕೆ ಹೋದೆ. ಅಕ್ಕ ಪಕ್ಕದಲ್ಲಿ ಮೆಷಿನ್ ಮೇಲೆ ಕೂತು ಹೆಣ್ಣುಮಕ್ಕಳು ಹೊಲೀತಿದ್ದರು. ಅವರನ್ನು ನೋಡ್ಕೊಂಡು ಮುಂದೆ ನಡ್ಕೋತಾ ಹೋದೆ. ಹೋದೆ... ಅದೆಷ್ಟು ದೂರ. ಕೊನೆ ಸಾಲಿನಲ್ಲಿ ಒಂದು ಮೆಷಿನ್ ಖಾಲಿ ಇತ್ತು. ಕೂತ್ಕೋ ಅಂದರು. ನನ್ನನ್ನು ಟೈಲರ್ ಅಂತ ಪರಿಚಯ ಮಾಡಿಕೊಟ್ಟಿದ್ದರು. ಮೆಷಿನ್ ಮೇಲಿದ್ದ ಬಾಬಿನ್, ದಾರ ಎಲ್ಲಾ ಕಿತ್ತು ಹಾಕಿದರು. ಒಂದೆರಡು ಬಟ್ಟೆ ತುಂಡು ಕೊಟ್ಟು ಹೊಲಿ ಅಂತ ಹೇಳಿದರು. ನನಗೆ ಈ ಪವರ್ ಮೆಷಿನ್ ಅಭ್ಯಾಸ ಇರಲಿಲ್ಲ. ಒಂಥರಾ ಭಯ ಶುರು



ಆಯಿತು. ಕೈಯೆಲ್ಲಾ ನಡುಗುತ್ತಿತ್ತು. ನನ್ನನ್ನು ಅಲ್ಲಿ ಬಿಟ್ಟು ಹೋದ ಸೂಪರ್‌ವೈಸರ್ ಬಂದದ್ದು ಒಂದು ಘಂಟೆಯಾದ ಮೇಲೆ. ನಾನು ನಿಧಾನವಾಗಿ ಬಾಬಿನ್‌ನಲ್ಲಿ ದಾರ ಹಾಕಿದೆ. ಅಲ್ಲಿ ಆನ್, ಆಫ್ ಬಟನ್ ಎಲ್ಲಿದೆ ಅಂತ ಹುಡುಕಿಕೊಂಡು ಶುರು ಮಾಡಿದೆ. ಒಂದು ಸಲ ಕಾಲು ಒತ್ತಿದರೆ ಹೊಲಿಗೆ ಅಡ್ಡಾದಿಡ್ಡಿ ಫಾಸ್ಟಾಗಿ ಹೊರಟೇ ಹೋಯಿತು. ಹಾಗೆ ಒಂದೆರಡು ಪೀಸ್ ಬಟ್ಟೆ ಹಾಳು ಮಾಡಿದ ಮೇಲೆ ಮೆಷಿನ್ ನನ್ನ ಕಂಟ್ರೋಲ್‌ಗೆ ಬಂತು. ಆಮೇಲೆ ಹಿಂದೆ ತಿರುಗೇ ನೋಡಲಿಲ್ಲ. ಹೀಗೆ ಹದಿನೈದು ದಿನ ಕೆಲಸ ಮಾಡಿದ ಮೇಲೆ ಸಂಬಳದ ದಿನ ಬಂತು. ಎಲ್ಲರಿಗೂ ಸಂಬಳ ಕೊಟ್ಟ ಮೇಲೆ ನನ್ನ ಸರದಿ ಬಂದಾಗ ನಿನ್ನ ಹೆಸರೇ ರಿಜಿಸ್ಟರ್‌ನಲ್ಲಿ ಬರೆದಿಲ್ಲ. ಅದಕ್ಕೆ ಸಂಬಳ ಇಲ್ಲ, ಅಂದರು. ಸ್ವಲ್ಪ ಬೇಜಾರಾಯ್ತು. ಆದರೂ ಕೆಲಸ ಕಲಿತ ಹಾಗೆ ಆಯ್ತಲ್ಲ ಅಂತ ಯೋಚನೆ ಮಾಡಿ ಸಮಾಧಾನ ಮಾಡಿಕೊಂಡೆ. ಹದಿನೈದು ದಿನಕ್ಕೆ ನನಗೆ ಧೈರ್ಯ ಬಂದಿತ್ತು; ಕೆಲಸ ಕಲಿತಿದ್ದೆ. ಮಾರನೇ ದಿನ ಆ ಫ್ಯಾಕ್ಟರಿ ಬಿಟ್ಟು ಇನ್ನೊಂದು ಫ್ಯಾಕ್ಟರಿ ಹುಡುಕಿಕೊಂಡು ಹೊರಟೆ.

ಅಲಂಕಾರ್ ಫ್ಯಾಕ್ಟರಿಗೆ ಹೋದೆ. ನನಗೆ ಅನುಭವ ಇದೆ ಅಂದಿದ್ದೇ ತಡ ನನ್ನನ್ನು 'ಎ' ಕ್ಲಾಸ್ ಟೈಲರ್ ಅಂತ ಕರೆದು ೭೫೦ ರೂಪಾಯಿ ಸಂಬಳ ಫಿಕ್ಸ್ ಮಾಡಿದರು. ಐಡಿ ಕಾರ್ಡ್ ಕೊಟ್ಟರು. ನಿಜ ಹೇಳಬೇಕೆಂದರೆ, ನನಗೆ ಹೊಲಿಗೆ ತುಂಬಾ ಚೆನ್ನಾಗೇನೂ ಬರುತ್ತಿರಲಿಲ್ಲ. ಕಲಿಯೋದು ತುಂಬ ಇತ್ತು. ಆ ಫ್ಯಾಕ್ಟರಿಯಲ್ಲಿ ಗಾಯತ್ರಿ ಅಂತ ತುಂಬ ಒಳ್ಳೆಯ ಸೂಪರ್‌ವೈಸರ್ ಇದ್ದರು. ಅವರು ಚೆನ್ನಾಗಿ ಟೈಲರಿಂಗ್ ಹೇಳಿಕೊಟ್ಟರು. ಕೆಲಸ ಚೆನ್ನಾಗಿ ಕಲಿತೆ. ಮಗಳು ಹುಟ್ಟುವ ಸಮಯ ಬಂದಾಗ ಮತ್ತೆ ಫ್ಯಾಕ್ಟರಿ ಬಿಟ್ಟೆ. ನಂತರ ಬಂದು ಶಾಲಿನಿ ಎಕ್ಸ್‌ಪೋರ್ಟ್ಸ್ ಸೇರಿದೆ. ಅಲ್ಲಿ ಒಂದು ಎಂಟೋ ಹತ್ತು ತಿಂಗಳು ಕೆಲಸ ಮಾಡಿರಬಹುದು, ಅಷ್ಟರಲ್ಲಿ ಒಂದು ದಿನ ರಜ ಹಾಕಿದ್ದಕ್ಕೆ ಮಾರನೇ ದಿನ ಕೆಲಸಕ್ಕೆ ಹೋದಾಗ ಬಾಯಿಗೆ ಬಂದ ಹಾಗೆ ಸೂಪರ್‌ವೈಸರ್ ಬಯ್ದರು. 'ರಜಾ ಹಾಕೋಕೆ, ಇದು ನಿಮ್ಮಪ್ಪನ ಮನೇನಾ ? ಗೇಟ್ ತೆಗೆದಿದೆ. ಹೋಗು' ಅಂದರು. 'ಸರಿ. ಹೋಗ್ತೀನಿ, ನನ್ನ ಸಂಬಳ ಕೊಡಿ' ಅಂದರೆ ಸತಾಯಿಸಿದರು. ಎರಡು ಮೂರು ಗಂಟೆ ಕಾಲ ಆಫೀಸ್ ರೂಮ್ ಮುಂದೆ ನಿಲ್ಲಿಸಿದರೂ ಸಂಬಳ ಕೊಡಲಿಲ್ಲ. ಆಗ ಯಾರೋ ಹೊರಗಿನ ಬಯ್ಯರ್ಸ್ ಬಂದಿದ್ದರು. ಇದೇ ಸಮಯ ಅಂತ ಅವರ ಮುಂದೆ ಜೋರು ದನಿಯಲ್ಲಿ ಕೂಗೋಕೆ ಶುರು ಮಾಡಿದೆ. ತಮ್ಮ ಮರ್ಯಾದೆ ಹೋಗುತ್ತೇಂತ ತಕ್ಷಣ ನನ್ನ ದುಡ್ಡು ಕೊಟ್ಟು ಹೊರಕ್ಕೆ ಕಳುಹಿಸಿದರು. ಮತ್ತೆ ಮಾರನೇ ದಿನ ಇನ್ನೊಂದು ಫ್ಯಾಕ್ಟರಿ... ಆಗೆಲ್ಲಾ ಹಾಗೆ ಒಂದು ಫ್ಯಾಕ್ಟರಿ ಬಿಟ್ಟರೆ, ಇನ್ನೊಂದು ಹುಡುಕ್ಕೊಂಡು ಹೋಗ್ತಿದ್ವಿ. ನಾನೊಬ್ಬೇ ಅಲ್ಲ. ಎಲ್ಲರೂ ಹೀಗೇ ಮಾಡೋದು.

ಆಮೇಲೆ ೧೯೯೮ರಲ್ಲಿ ವಿದ್ಯಾ ಕ್ರಿಯೇಷನ್ಸ್ ಸೇರಿ ಅಲ್ಲಿಂದ ಇಲ್ಲಿಯವರೆಗೂ ಅಲ್ಲಿಯೇ ಕೆಲಸ ಮಾಡ್ತಿದೀನಿ. ಈ ಫ್ಯಾಕ್ಟರಿಗೆ ಸೇರಿದ ಮೇಲೆ ನಾನು ಯಾವಾಗಲೂ ಧೈರ್ಯದಿಂದ ಮಾತಾಡ್ತಿದ್ದೆ. ಯಾರಾದರೂ ಸೂಪರ್ ವೈಸರ್ ಹೆಣ್ಣುಮಕ್ಕಳನ್ನು ಕೆಟ್ಟದಾಗಿ ಬಯ್ದರೆ ಅವರ ಪರವಾಗಿ ಜಗಳ ಕಾಯ್ತಿದ್ದೆ. ಹೀಗೆ ಕೆಲಸ ಮಾಡ್ತಿದ್ದಾಗ ೨೦೦೩ರಲ್ಲಿ ಸಿವಿಡೆಪ್, ಇಂಡಿಯಾ ಅನ್ನೋರು ಬಂದು ನಮಗೆಲ್ಲಾ ಒಂದು ಪ್ಯಾಂಪ್ಲೆಟ್ ಕೊಟ್ಟು, ಚಾಮರಾಜ ಪೇಟೇಲಿ ಭಾನುವಾರದ ದಿನ ಸಭೆ ಇದೆ, ಬನ್ನಿ ಎಂದರು. ಆ ಚೀಟೀಲಿ ಗಾರ್ಮೆಂಟ್ ಕಾರ್ಮಿಕರ ಹಕ್ಕುಗಳು, ಅವರಿಗೆ ಕೊಡಬೇಕಾದ ಸೌಲಭ್ಯಗಳು, ಎಲ್ಲಾ ಬರೆದಿತ್ತು. ಕಷ್ಟಪಟ್ಟು ಮನೇಲಿ ಕೂತು ಓದ್ಕೊಂಡು ಭಾನುವಾರ ಸಭೆಗೆ ಹೋದೆ. ಆ ಸಭೆಗೆ ಲೇಬರ್ ಕಮೀಷನರ್ ಬಂದಿದ್ದರು. ಅವರು ಭಾಷಣ ಮಾಡಿದರು. ಕೆಲಸದ ಜಾಗದಲ್ಲಿ ಟಾಯ್ಲೆಟ್, ಕುಡಿಯುವ ನೀರು, ಗಾಳಿ, ಬೆಳಕು ಎಲ್ಲಾ ಇರಬೇಕು. ಎಂಟು ಗಂಟೆಗಿಂತ ಜಾಸ್ತಿ ಕೆಲಸ ಮಾಡಿಸ್ಕೋಬಾರದು, ಜಾಸ್ತಿ ಕೆಲಸಕ್ಕೆ ಓ.ಟಿ. ಕೊಡಬೇಕು, ಹೀಗೆ ಏನೇನೋ ಹೇಳ್ತಿದ್ದರು. ಅವರ ಭಾಷಣ ಮುಗೀಲಿ ಅಂತ ಕಾಯ್ತಿದ್ದೆ. ಆಮೇಲೆ ಅವರ ಹಿಂದೇನೇ ಹೋಗಿ, ಸಾರ್, ನೀವು ಇಷ್ಟೆಲ್ಲಾ ಮಾತಾಡ್ತೀರಲ್ಲಾ, ಒಮ್ಮೆ ಯಾಕೆ ನಮ್ಮ ಫ್ಯಾಕ್ಟರಿಗೆ ಬರಬಾರದು. ಅಲ್ಲಿ ಎಷ್ಟು ಕೆಟ್ಟದಾಗಿ ಬಯ್ತಾರೆ, ಗೊತ್ತಾ? ಅವರಿಗೆ ಬಂದು ಈ ವಿಷಯಗಳನ್ನು ಹೇಳಿ ಎಂದು ಪ್ರಶ್ನೆ ಮಾಡಿದಾಗ ಅವರು ನಗುತ್ತಾ ನೀವು ಯೂನಿಯನ್ ಮಾಡ್ಕೊಂಡು ಹೋರಾಟ ಮಾಡಿ ಅಂತ ಹೇಳಿದರು. ನಮಗೆ ಯೂನಿಯನ್ ಅಂತ ಅಂದ್ರೆ ಹೆದರಿಕೆ ಇತ್ತು. ಯೂನಿಯನ್ ಮಾಡ್ಕೊಂಡಿದ್ದಕ್ಕೆ ಮೌರ್ಯ ಗಾರ್ಮೆಂಟ್ಸ್ ಮುಚ್ಕೊಂಡು ಹೋಗಿದ್ದು, ಅಂತ ಎಲ್ಲರಿಗೂ ಗೊತ್ತಿತ್ತು. ಆದರೆ ಸಿವಿಡೆಪ್. ಇಂಡಿಯಾದವರು ನಮ್ಮನ್ನೆಲ್ಲಾ ಸೇರಿಸಿ ಟ್ರೈನಿಂಗ್ ಕೊಡ್ತಾ ಇದ್ದರು. ಸ್ವಸಹಾಯ ಸಂಘಗಳನ್ನು ಮಾಡಿಕೊಳ್ಳಿ ಅಂತ

ಹೇಳಿದರು. ಹಾಗೇ ಸುಮಾರು ಸಂಘಗಳನ್ನು ಮಾಡ್ಕೊಂಡ್ವಿ. ಸಾಕಷ್ಟು ದುಡ್ಡು ಉಳಿಸಿದ್ವಿ. ಆದರೂ ಇದರಿಂದ ನಮ್ಮ ತೊಂದರೆಗಳು ಇದ್ದೇ ಇದ್ದವು. ಸಿವಿಡೆಪ್‌ನವರು ನಿಮ್ಮದೇ ಮಹಿಳಾ ಸಂಘಟನೆಯನ್ನು ಮಾಡಿಕೊಳ್ಳಿ, ಅಂದರು. ಆಗ ಮುನ್ನಡೆ ಆರಂಭವಾಯಿತು. ೨೦೦೪ರ ನವೆಂಬರ್ ೧೨ರಂದು ಮೈಸೂರು ರಸ್ತೇಲಿ ೮-೧೦ ಫ್ಯಾಕ್ಟರಿಯ ಹೆಣ್ಣುಮಕ್ಕಳನ್ನು ಸೇರಿಸಿ 'ಮುನ್ನಡೆ' ಅನ್ನುವ ಸಾಂಸ್ಕೃತಿಕ ಸಂಘಟನೆಯನ್ನು ಎಲ್ಲರೂ ಸೇರಿ ಆರಂಭಿಸಿದೆವು. ಅದಕ್ಕೆ ಮೂರು ಜನ ಸಂಚಾಲಕರು ಇದ್ದರು. ನಾನೂ ಒಬ್ಬ ಸಂಚಾಲಕಿಯಾದೆ. ಪ್ರತಿ ಎರಡನೇ ಭಾನುವಾರ ಸಭೆ ಸೇರಿ ನಮ್ಮ ಸಮಸ್ಯೆಗಳನ್ನು ಚರ್ಚಿಸುತ್ತಿದ್ದೆವು.

ನಮ್ಮ ಫ್ಯಾಕ್ಟರಿಯಲ್ಲಿ ಕೃಷ್ಣಮೂರ್ತಿ ಅಂತ ಒಬ್ಬ ಪ್ರೊಡಕ್ಷನ್ ಮ್ಯಾನೇಜರ್ ಇದ್ದರು. ಎಲ್ಲಾ ಕಾರ್ಮಿಕರನ್ನು ತುಂಬ ಕೆಟ್ಟದ್ದಾಗಿ ಬಯ್ಯುತ್ತಿದ್ದರು. ಕತ್ತೆ, ಕೋತಿ, ಗೂಬೆ ಅಂತಾಲೇ ಎಲ್ಲಾ ಹೆಂಗಸರನ್ನು ಮಾತಾಡಿಸ್ತಿದ್ದದ್ದು. ಅವರು ಬಯ್ದಾಗ ತಿರುಗಿಸಿ ಉತ್ತರ ಕೊಟ್ಟರೆ ಅವರ ಗತಿ ಮುಗಿಯಿತು. ಹೆಂಗಸರಿಗೆ ಉಗಿಯೋದು, ತಳ್ಳೋದು, ಕಿವಿ ಹಿಂಡೋದು ಎಲ್ಲಾ ಮಾಡ್ತಿದ್ದ. ಒಮ್ಮೆ ನಮ್ಮ ಸಂಘಟನೆಗೆ ಮಹಿಳಾ ಆಯೋಗದ ಕಾರ್ಯದರ್ಶಿ ಕಾವೇರಿ ಅನ್ನುವವರನ್ನು ಅತಿಥಿಯಾಗಿ ಕರೆಸಿದ್ವಿ. ಅವರಿಗೆ ನಮ್ಮ ಸಮಸ್ಯೆ, ಈ ಕೃಷ್ಣಮೂರ್ತಿ ವಿಷಯ ಎಲ್ಲಾ ಹೇಳಿ, ಒಮ್ಮೆ ಫ್ಯಾಕ್ಟರಿಗೆ ದಿಢೀರನೆ ಬರಬೇಕೆಂದು ಕೇಳಿಕೊಂಡ್ವಿ. ಮಾರನೇ ದಿನಾನೇ ಅವರು ಲೇಬರ್ ಕಮೀಷನರ್ ಮಂಜುನಾಥ್ ಅವರನ್ನು ಜೊತೆಯಲ್ಲಿ ಕರೆದುಕೊಂಡು ಯಾರಿಗೂ ಮುಂಚೆ ಹೇಳದೆ ಫ್ಯಾಕ್ಟರಿಯೊಳಕ್ಕೆ ಬಂದರು. ಅಲ್ಲಿದ್ದ ಸೂಪರ್‌ವೈಸರ್ಸ್, ಪ್ರೊಡಕ್ಷನ್ ಮ್ಯಾನೇಜರ್‌ಗಳನ್ನು ಹೊರಕ್ಕೆ ಕಳಿಸಿ ಬಾಗಿಲು ಹಾಕಿ ನಮ್ಮ ಹತ್ತಿರ ಮಾತಾಡಿದರು. ಎಲ್ಲರ ಕಷ್ಟ ಕೇಳಿಕೊಂಡರು. ಕಷ್ಟ ಪರಿಹರಿಸುವ ಆಶ್ವಾಸನೆಯನ್ನೂ ಕೊಟ್ಟರು. ಮಾರನೇ ದಿನಾನೇ ಮ್ಯಾನೇಜ್‌ಮೆಂಟ್ ನವರನ್ನು ಕರೆಸಿ ಕೃಷ್ಣಮೂರ್ತಿಯನ್ನು ಮೂರು ತಿಂಗಳಲ್ಲಿ ತೆಗೆದುಹಾಕಬೇಕೆಂದು ಹೇಳಿದರು. ಹಾಗೆ ಅವರನ್ನು ತೆಗೆದುಹಾಕಿದರು ಕೂಡ.

ನಾನು ಫ್ಯಾಕ್ಟರಿಯಲ್ಲಿ ಕೆಲಸ ಮಾಡುವಾಗ ಆದಷ್ಟು ನನ್ನ ಸುತ್ತಮುತ್ತ ಇರುವ ವರ್ಕರ್ಸ್‌ನ್ನು ಯಾರೂ ಬಯ್ಯೋಕೆ ಬಿಡುತ್ತಿರಲಿಲ್ಲ. ಬಯ್ದಾಗ ಹೋಗಿ ಜಗಳ ಆಡ್ತಿದ್ದೆ. ಆಗ ನಾನು ಮುನ್ನಡೆಯ ಸಂಚಾಲಕಿಯಾಗಿ ಕೆಲಸ ಮಾಡ್ತಿದ್ದನಲ್ಲಾ, ನನಗೇನೂ ತೊಂದರೆ ಕೊಡ್ತಿರಲಿಲ್ಲ. ಹೀಗೆ ಇರುವಾಗ ೨೦೦೪ರಲ್ಲಿ ನನ್ನನ್ನು ವರ್ಕರ್ಸ್ ಟೂರ್‌ಗೆ ಅಂತ ಬ್ಯಾಂಕಾಕ್‌ಗೆ ಕರೆದುಕೊಂಡು ಹೋದರು. ಬ್ಯಾಂಕಾಕ್‌ನಲ್ಲಿ ಒಲಿಂಪಿಕ್ಸ್ ನಡೀತಲ್ಲಾ, ಅಲ್ಲಿ ಓದಿರುವ ಆಟಗಾರರಿಗೆ 'ನಿಮಗೆಲ್ಲಾ ಬಟ್ಟೆ ಹೊಲಿಯುವ ಕಾರ್ಮಿಕರು ಯಾವ ಸ್ಥಿಯಲ್ಲಿದ್ದಾರೆ' ಅಂತ ತೋರಿಸುತ್ತಾ ಗಾರ್ಮೆಂಟ್ ಕಾರ್ಮಿಕರ ಸಮಸ್ಯೆಗಳ ಬಗ್ಗೆ ವಿಚಾರ ಸಕಿರ್ಣ ಏರ್ಪಡಿಸಿದ್ದರು. ನಾನು ನಮ್ಮ ಗಾರ್ಮೆಂಟ್ಸ್‌ನವರ ಸಮಸ್ಯೆಗಳನ್ನು ಕುರಿತು ಮಾತಾಡಿದೆ. ಅದನ್ನು ಅನುವಾದ ಮಾಡೋಕೆ ಸಂಸ್ಥೆಯವರು ಮುಷರಫ್ ಅಂತ ಒಬ್ಬರು ಬದಿದ್ದರು. ಆ ಸಮ್ಮೇಳನಕ್ಕೆ ಪಾಕಿಸ್ತಾನ, ಬಾಂಗ್ಲಾದೇಶ, ಶ್ರೀಲಂಕಾದಿಂದೆಲ್ಲಾ ಗಾರ್ಮೆಂಟ್ ಮಹಿಳಾ ಕಾರ್ಮಿಕರು ಬಂದಿದ್ದರು. ಅವರು ತಮ್ಮ ದೇಶದ ಕಾರ್ಮಿಕರ ಸ್ಥಿತಿಗತಿ ಹೇಳುತ್ತಿದ್ದರೆ ನನಗೆ ಕಣ್ಣಲ್ಲಿ ನೀರು ಬರೋ ಹಾಗೆ ಆಗ್ತಿತ್ತು. ಹೆಚ್ಚು ಕಡಿಮೆ ಎಲ್ಲಾ ಕಡೇನೂ ಒಂದೇ ಪರಿಸ್ಥಿತಿ. ಅವರ ಸಂಘಟನೆಯ ಅನುಭವಗಳನ್ನು ಹಂಚಿಕೊಂಡು ಬಂದೆ.

ಅಲ್ಲಿಂದ ವಾಪಸ್ಸು ಬರೋ ಹೊತ್ತಿಗೆ ಹಿಂದಿನ ಪಿ.ಎಮ್. ಬದಲಾಗಿದ್ದರು. ನಾವು ಕೃಷ್ಣಮೂರ್ತಿಯವರ ಮೇಲೆ ದೂರು ಕೊಟ್ಟು ಓಡಿಸಿದ್ದರಿಂದ ಅಲ್ಲಿದ್ದ ಕೆಲವರಿಗೆ ಸಿಟ್ಟು ಬಂದಿತ್ತು. ಅದಕ್ಕೆ ದ್ವೇಷ ತೀರಿಸಿಕೊಳ್ಳುವವರಂತೆ ನಮಗೆಲ್ಲಾ ತುಂಬ ಕಷ್ಟ ಕೊಟ್ಟರು. ಪ್ರತಿ ಸೆಕೆಂಡಿಗೂ ಪ್ರೊಡಕ್ಷನ್ ಕೊಡಬೇಕು, ರಜಾ ಇಲ್ಲ, ಟಾಯ್‌ಲೆಟ್‌ಗೆ ಹೋಗುವಾಗ ಹಿಂದೆ ಸೆಕ್ಯೂರಿಟಿಯವರನ್ನು ಕಳುಹಿಸುತ್ತಿದ್ದರು. ನಾವು ಸಮಯ ವೇಸ್ಟ್ ಮಾಡಬಾರದು, ಅಂತ. ದೊಡ್ಡ ದೊಡ್ಡ ಹೊಸ ಮೆಷೀನ್‌ಗಳನ್ನು ತಂದು ಏನೂ ಟ್ರೈನಿಂಗ್ ಕೊಡದೆ ಹೊಲಿಯಿರಿ ಅಂತಿದ್ದರು. ನಮ್ಮ ಜೊತೇಲಿ ಕೆಲಸ ಮಾಡೋರನ್ನು ನಮ್ಮ ವಿರುದ್ಧ ಎತ್ತಿ ಕಟ್ಟುತ್ತಿದ್ದರು. ಎಲ್ಲರಿಗೂ ಕೇಳಿಸೋ ಹಾಗೆ ಮೈಕ್‌ನಲ್ಲಿ ಅನೌನ್ಸ್ ಮಾಡೋದು - ಇಂಥವರು... ಪ್ರೊಡಕ್ಷನ್ ಕೊಡುತ್ತಿಲ್ಲ, ಅವರಿಂದ ಕ್ವಾಲಿಟಿ ಬರುತ್ತಿಲ್ಲ, ಇಂಪ್ರೂವ್ ಮಾಡ್ಕೊಳ್ಳದಿದ್ದರೆ ಕೆಲಸದಿಂದ ತೆಗೆದುಹಾಕ್ತೀವಿ, ಅಂತ ಹೇಳೋರು. ಅಲ್ಲದೆ, ಮೈಕ್‌ನಲ್ಲಿಯೇ 'ಏನು ತಿನ್ತೀರಾ ಹೊಟ್ಟೆಗೆ? ನಿಮ್ಮಪ್ಪ ಬಂಡವಾಳ ಹಾಕಿದಾನಾ? ನಿಮ್ಮಪ್ಪ ಸಂಬಳ ಕೊಡ್ತಾನಾ?' ಅಂತ ನಮ್ಮನ್ನು ಬಯ್ಯುತ್ತಿದ್ದರು. ನಾನು ನೋಡ್ತಿದ್ದೆ. ತಡೆಯೋಕೆ ಆಗಲಿಲ್ಲ. ಒಂದು ದಿನ ತಿರುಗಿಬಿದ್ದೆ. ಆಗ ನನ್ನ ಸುತ್ತ ಕೆಲಸ ಮಾಡ್ತಿದ್ದವರೆಲ್ಲಾ 'ರುಕ್ಮಿಣಿಯಕ್ಕ, ನೀವು ಒಳ್ಳೇದು ಮಾಡಿದಿರಿ' ಅಂತ ಹೇಳ್ತಿದ್ದರು.

ಹೀಗೆ ಇರುವಾಗ ಅನ್ನಿಸಿತು, ನಮ್ಮದು 'ಮುನ್ನಡೆ' ಸಾಮಾಜಿಕ ಸಂಘಟನೆ, ಆದರೆ ನಮ್ಮ ಕೆಲಸ, ಪಿ.ಎಫ್, ಓ.ಟಿ., ಇಂತದ್ದೆಲ್ಲ ಚರ್ಚೆ ಮಾಡೋಕೆ ಯೂನಿಯನ್ ಇದ್ದರೆ ಒಳ್ಳೇದು ಅಂತ. ನಾವು ಲೇಬರ್ ಕಮೀಷನರ್ ಹತ್ತಿರ ಹೋದಾಗೆಲ್ಲಾ, ಅವರು 'ನೀವು ಯೂನಿಯನ್ ಏಕೆ ಮಾಡ್ಕೋಬಾರದು', ಅಂತ ಹೇಳ್ತಿದ್ದರು. ಹಾಗೂ ಹೀಗೂ ೨೦೦೬ರ ಮಾರ್ಚ್ ತಿಂಗಳಲ್ಲಿ 'ಗಾರ್ಮೆಂಟ್ ಅಂಡ್ ಟೆಕ್ಸ್‌ಟೈಲ್ ವರ್ಕರ್ಸ್ ಯೂನಿಯನ್' ರಿಜಿಸ್ಟರ್ ಮಾಡ್ಕೊಂಡ್ವಿ. ನನ್ನನ್ನು ಅದರ ಜನರಲ್ ಸೆಕ್ರೆಟರಿ ಅಂತ ಮಾಡಿದರು. ನಾನು ದಿನಾ ೨೦-೩೦ ಜನಾನ ಮೆಂಬರ್‌ಶಿಪ್ ಮಾಡಿಸ್ತಿದ್ದೆ. ಫ್ಯಾಕ್ಟರಿಯಲ್ಲಿ ನನ್ನನ್ನು ಇವತ್ತು ಈ ಬ್ಯಾಚ್‌ನಲ್ಲಿದ್ದರೆ, ಮುಂದಿನ ವಾರ ಮತ್ತೊಂದು ಬ್ಯಾಚ್‌ಗೆ ಹಾಕೋರು. ನಾನು ಯೂನಿಯನ್ ಮೆಂಬರ್‌ಶಿಪ್ ಮಾಡಿಸ್ತಿದ್ದನಲ್ಲ, ಅದಕ್ಕೆ. ನನಗೋ ಖುಷೀನೇ. ಒಂದೊಂದು ಬ್ಯಾಚ್‌ನಲ್ಲಿ ಅಷ್ಟಷ್ಟು ಜನಾನ ಮೆಂಬರ್‌ಶಿಪ್ ಮಾಡಿಸ್ತಿದ್ದೆ. ಒಮ್ಮೆ ಮಾತ್ರ ಸೂಪರ್‌ವೈಸರ್ ಬಂದು 'ಮೇಲಕ್ಕೆ ಹೋಗು' ಅಂದ. 'ನಾನು ಹೋಗಲ್ಲ, ಈಗಷ್ಟೇ ಅಲ್ಲಿಂದ ಬಂದಿದ್ದೀನಿ' ಅಂದೆ. 'ಸರಿ ಮನೆಗೆ ಹೋಗು' ಅಂದ. 'ಹಾಗಂತ ಬರೆದುಕೊಡು. ಸುಮ್ಮನೆ ಹೋಗಲ್ಲ, ನಾನು ೮ ವರ್ಷ ಸರ್ವೀಸ್ ಮಾಡಿದೀನಿ' ಅಂತ ಹಠ ಮಾಡಿದೆ. ಅವನಿಗೆ ಭಯ ಬಂತು. ಹೆಡ್ ಆಫೀಸ್‌ಗೆ ಫೋನ್ ಮಾಡಿದ. ಎಲ್ಲರನ್ನೂ ಕರೆಸಿದ. ಎಚ್.ಆರ್., ಜಿ.ಎಮ್. ಎಲ್ಲರೂ ಬಂದರು. 'ಏನು ಸಮಸ್ಯೆ?' ಅಂತ ಕೇಳಿದರು. 'ನನಗೇನೂ ಸಮಸ್ಯೆ ಇಲ್ಲ, ಅವರಿಗೇ ಸಮಸ್ಯೆ' ಎಂದೆ. ಎಲ್ಲ ವಿಷಯ ವಿಚಾರಿಸಿದ ಅವರು, ಅವನಿಗೆ ಬಯ್ದು, 'ನಿನ್ನ ಕೆಲಸ ಮಾಡ್ಕೊಂಡು ಹೋಗಮ್ಮ' ಅಂತಂದ್ರು.

ಮಾರನೇ ದಿನ ವಿಜಯಲಕ್ಷ್ಮಿ ಶೆಟ್ಟಿ ಅಂತ ಲೀಗಲ್ ಆಫೀಸರ್ ಬಂದ್ರು. ನನ್ನ ಹತ್ತಿರ ಕರೆದು, 'ಫ್ಯಾಕ್ಟರಿ ಅನ್ನ ಕೊಡ್ತಿದೆ. ಯೂನಿಯನ್ ಮಾಡಬಾರದು. ಫ್ಯಾಕ್ಟರಿ ಮುಚ್ಚಿದ್ರೆ ಮನೆಗೆ ಹೋಗ್ತೀರಿ. ಇದೇನು ಗವರ್ನಮೆಂಟ್ ಕೆಲಸಾನಾ ಯೂನಿಯನ್ ಮಾಡೋಕೆ' ಅಂತ ನನಗೆ ಬುದ್ಧಿವಾದ ಹೇಳೋಕೆ ಬಂದ್ರು. ಯೂನಿಯನ್ ಕೆಲಸ ಬಿಟ್ಟುಬಿಡು, ನಿನ್ನನ್ನು ಸೂಪರ್‌ವೈಸರ್ ಮಾಡಿಸ್ತೀನಿ. ೧೫,೦೦೦ ರೂಪಾಯಿ ಸಂಬಳ ಕೊಡಿಸ್ತೀನಿ, ಅಂತೆಲ್ಲ ಹೇಳಿದರು. ಆಗ ನಾನು 'ನನಗೊಬ್ಬಳಿಗೆ ೧೫,೦೦೦ ಕೊಡಿಸಿದರೆ ಆಗಲ್ಲ. ಎಲ್ಲಾ ಕಾರ್ಮಿಕರಿಗೆ ಕೊಡಿಸ್ತೀರಾ? ಅದು ನಿಮ್ಮ ಕೈಯಲ್ಲಿ ಆಗಲ್ಲ. ಸುಮ್ಮನೆ ನಿಮ್ಮ ಕೆಲಸ ನೋಡ್ಕೊಂಡು ಹೋಗಿ' ಅಂತಂದೆ. ಕೂಡಲೇ ಅಲ್ಲೇ ಇದ್ದ ನಾಗರಾಜ್, ಪ್ರೊಡಕ್ಷನ್ ಮ್ಯಾನೇಜರ್‌ಗೆ, ''ನೀವು ಮುಂದಿನ ಸ್ಟೆಪ್ ತೊಗೋಳೋದೆ ಒಳ್ಳೆಯದು. ಇವರು ನಮ್ಮ





ಮಾತಿಗೆ ಬಗ್ಗೋರಲ್ಲಾ'' ಅಂತ ಹೇಳಿ ಹೊರಟೇ ಹೋದರು.

ಅದಾದ ಮಾರನೇ ದಿನದಿಂದ ನನಗೆ ಕಾಟ ಕೊಡೋದು ಜಾಸ್ತಿಯಾಯಿತು. ಗಂಟೆಗೊಮ್ಮೆ ೨೦೦ ಪೀಸ್ ಪ್ರೊಡಕ್ಷನ್ ಕೊಡಬೇಕು ಅಂತ ಜೀವ ತೆಗೆಯುತ್ತಿದ್ದರು. ಒಟ್ಟಿನಲ್ಲಿ ನನಗೆ ಮಾಡೋಕಾಗದಷ್ಟು ಕೆಲಸ ಕೊಟ್ಟು ಮನೆಗೆ ಕಳುಹಿಸಬೇಕು ಅಂತ ಪ್ಲಾನ್ ಮಾಡಿದ್ದರು. ಆದರೂ ನಾನು ಸೋಲದೆ ಅವರು ಕೊಟ್ಟಷ್ಟು ಕೆಲಸ ಮಾಡ್ಕೊಂಡೇ ಬಂದೆ. ಒಮ್ಮೆ ನನ್ನ ಮುಂದೆ ಕೆಲಸ ಮಾಡುತ್ತಿದವಳನ್ನು ಸೂಪರ್‌ವೈಸರ್ ಬಂದು 'ಗೂಬೆ' ಅಂತ ಬಯ್ದ. ಏಕೆ ಸುಮ್ಮನೆ ನೋಡ್ತಿದೀಯ 'ನೀನೇ ಗೂಬೆ' ಅಂತನ್ನು ಅಂದೆ. ಅವಳು ಹಾಗೆ ತಿರುಗಿಸಿ ಅಂದು ನನ್ನ ಬಳಿ ನಿಂತ್ಕೊಂಡಳು. ಸರಿ, ಅವನಿಗೆ ಕೋಪ ಬಂತು. 'ಇವಳಿಂದ ಹೆಚ್ಕೊಂಡಿದೀರಾ. ನಿಮಗೆಲ್ಲಾ ಏನು ಮಾಡಬೇಕು ಅಂತ ನನಗೆ ಗೊತ್ತು' ಅಂದರು. ಮಾರನೇ ದಿನ, ಬೆಳಗಿನಿಂದಾನೆ ಕೆಲಸ ಮಾಡಿದ್ದೆ. ಸಂಜೆ ನಾಲ್ಕು ಗಂಟೆಗೆ ಕ್ಯಾಬಿನ್‌ಗೆ ಬರೋಕೆ ಮೈಕ್‌ನಲ್ಲಿ ಅನೌನ್ಸ್ ಮಾಡಿಸಿ ಎಲ್ಲರ ಮುಂದೆ ನನಗೆ ಸಸ್ಪೆನ್ಷನ್ ಆರ್ಡರ್ ಕೊಟ್ಟರು. ನಾನು ಗಲಾಟೆ ಮಾಡಬಹುದು, ಅಂತ ಕ್ಯಾಮರಾ ಎಲ್ಲ ಇಟ್ಟುಕೊಂಡು ಸಿದ್ಧವಾಗಿದ್ದರು. ಆದರೆ ನಾನೇನೂ ಗಲಾಟೆ ಮಾಡಲಿಲ್ಲ. ನಾನು ಇದಕ್ಕೆ ಸಿದ್ಧವಾಗಿದ್ದೆ. ನನ್ನ ಸಸ್ಪೆಂಡ್ ಮಾಡಿದ್ದಕ್ಕೆ ಅವರು ಕೊಟ್ಟ ಕಾರಣ, ನಾನು ಕಾರ್ಮಿಕರನ್ನು ಸೇರಿಸ್ಕೊಂಡು ಬಡ್ಡಿ ವ್ಯವಹಾರ ಮಾಡ್ತಿದೀನೀಂತ. ಮೊದಲ ಆರು ತಿಂಗಳು ಶೇ. ೫೦ ಆರು ತಿಂಗಳಾದ ಮೇಲೆ ಶೇ. ೭೫ ಸಂಬಳ ಕೊಡ್ತಿದ್ದರು. ನನ್ನ ಸಸ್ಪೆನ್ಷನ್ ವಿರೋಧಿಸಿ ಗಾರ್ಮೆಂಟ್ ಕಾರ್ಮಿಕರ ಪ್ರತಿಭಟನೆ ಹೆಚ್ಚಾದಂತೆ ಗ್ಯಾಪ್ ಬ್ರಾಂಡ್ ಕಂಪೆನಿ, ಯೂನಿಯನ್ ಮತ್ತು ಮ್ಯಾನೇಜ್‌ಮೆಂಟಿನ ನಡುವೆ ಒಪ್ಪಂದ ಆಗಿ ನಾನು ಫ್ಯಾಕ್ಟರಿಯೊಳಗೆ ಬರಬಾರದು ಮತ್ತು ನನ್ನ ಯೂನಿಯನ್ ಕೆಲಸಕ್ಕೆ ನನಗೆ ಪ್ರತಿ ತಿಂಗಳೂ ಕೊಡುತ್ತಿದ್ದ ಸಂಬಳ ಕೊಡುವುದಾಗಿ ಒಪ್ಪಂದವಾಯಿತು. ಅಂದಿನಿಂದ ಯೂನಿಯನ್ನಿನ ಕಾರ್ಯದರ್ಶಿಯಾಗಿ ಕೆಲಸ ಮಾಡ್ಕೊಂಡು ಬರ್ತಿದೀನಿ.

ನನ್ನ ಫ್ಯಾಕ್ಟರಿಯ ಕತೆ ಇದಾದರೆ, ಹೊರಗಿನ ಚಿಕ್ಕಪುಟ್ಟ ಫ್ಯಾಕ್ಟರಿಗಳಲ್ಲಿ ಪರಿಸ್ಥಿತಿ ಏನೂ ಭಿನ್ನವಾಗಿಲ್ಲ. ಇನ್ನೂ ಕೆಟ್ಟದಾಗಿ ಇದೆ. ಒಂದು ಫ್ಯಾಕ್ಟರಿಯಲ್ಲಿ ತುಂಬಿದ ಬಸುರಿಗೆ ರಜೆ ಕೊಡದೆ, ಆಕೆ ಫ್ಯಾಕ್ಟರಿಯ ಬಾಗಿಲ ಬಳಿ ಮಗುವನ್ನು ಹೆರಬೇಕಾಗಿ ಬಂತು. ಹೊರಗಿನ ಮಹಿಳಾ ಸಂಘಟನೆಗಳು ಬಂದು ಅವಳಿಗೆ ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕಾಯಿತೇ ಹೊರತು ಫ್ಯಾಕ್ಟರಿಯವರು ಯಾವ ಜವಾಬ್ದಾರಿಯನ್ನೂ ತೆಗೆದುಕೊಳ್ಳಲಿಲ್ಲ. ಇನ್ನು ಕೆಲವು ಸ್ವಲ್ಪ ವರ್ಷದ ಹಿಂದೆ ಗೋಕುಲ್‌ದಾಸ್ ಎಕ್ಸ್‌ಪೋರ್ಟ್ಸ್‌ನಲ್ಲಿ ಕೆಲಸ ಮಾಡುತ್ತಿದ್ದ ರೇಣುಕ ಅನ್ನುವ ಹುಡುಗಿಯನ್ನು ಮ್ಯಾನೇಜರ್ ಮತ್ತು ಜನರಲ್ ಮ್ಯಾನೇಜರ್ ಅತಿ ಸಣ್ಣ ಕಾರಣಕ್ಕೆ ಕೆಟ್ಟದಾಗಿ ಶಿಕ್ಷಿಸಿದ್ದರು. ಅದರಿಂದ ಅವಮಾನ ಆಗಿ ಅವಳು ನೇಣು ಹಾಕಿಕೊಂಡು ಸತ್ತಿದ್ದಳು. ಮತ್ತೊಬ್ಬಳು 'ಅಮ್ಮು' ಅನ್ನುವವಳು ಸೂಪರ್‌ವೈಸರ್ ತುಂಬ ಕೆಟ್ಟದಾಗಿ ಬಯ್ದರು ಅಂತ ಹೇಳಿ ಫ್ಯಾಕ್ಟರಿಯ ಟಾಯ್‌ಲೆಟ್‌ನಲ್ಲಿಯೇ ನೇಣು ಹಾಕಿಕೊಂಡು ಸತ್ತಿದ್ದಳು. ಇಂತಹ ಸಂದರ್ಭಗಳಲ್ಲೆಲ್ಲಾ ಹೊರಗಿನ ಮಹಿಳಾ ಸಂಘಟನೆಗಳ ಸಹಕಾರದಿಂದ ಗಾರ್ಮೆಂಟ್ ಮಹಿಳಾ ಕಾರ್ಮಿಕರ ಟ್ರೇಡ್ ಯೂನಿಯನ್ ಹೋರಾಟ ಮಾಡುತ್ತಲೇ ಬಂದಿದೆ. ಹೋದ ತಿಂಗಳು ಅಂತರರಾಷ್ಟ್ರೀಯ ಮಹಿಳಾದಿನದಂದೇ ಒಂದು ಘಟನೆ ನಡೆಯಿತು. ಮೈಸೂರು ರಸ್ತೆಯ ಚಾಯ್ಸ್ ಅಪೆರಲ್‌ನಲ್ಲಿ ಕೆಲಸ ಮಾಡುತ್ತಿದ್ದ ಆರತಿ ಅನ್ನುವ ಕಾರ್ಮಿಕಳು ಊರಿಗೆ ಹೋಗಿದ್ದಳು. ಕಾಲು ಗಾಯವಾದ ಕಾರಣ ರಜ ತೊಗೊಂಡಿದ್ದಳು. ಫ್ಯಾಕ್ಟರಿಗೆ ಬರಲಾಗಲಿಲ್ಲ. ಆಮೇಲೆ ಬಂದರೆ, 'ಕೆಲಸ ಇಲ್ಲ. ಹೋಗು. ಇದೇನು ನಿಮ್ಮಪ್ಪನ ಮನೆಯಾ ?' ಅಂತೆಲ್ಲಾ ಕೆಟ್ಟದಾಗಿ ಉಗಿದಿದ್ದಕ್ಕೆ ಅವಳು ಬೇಜಾರು ಮಾಡಿಕೊಂಡು ಚೀಟಿ ಬರೆದಿಟ್ಟು, ರೈಲ್ವೇ ಹಳಿದು ಮೇಲೆ ಮಲಗಿ ಆತ್ಮಹತ್ಯೆ ಮಾಡಿಕೊಂಡಳು. ಆಮೇಲೆ ನಾವು 'ಮುನ್ನಡೆ'ಯವರು ಮತ್ತು ಅಲ್ಲಿನ ಇತರ ಸಂಘಟನೆಗಳೆಲ್ಲಾ ಸೇರಿ ಮೂರುದಿನ ಹೋರಾಟ ಮಾಡಿ ಅವರ ಕುಟುಂಬಕ್ಕೆ ಪರಿಹಾರ ದೊರಕಿಸಿಕೊಟ್ವಿ. ಇನ್ನು ಗಾರ್ಮೆಂಟ್ ಹೆಣ್ಣುಮಕ್ಕಳನ್ನು ಹೆಚ್ಚು ಹೆಚ್ಚು ಸಂಘಟಿಸಬೇಕು, ಅವರಲ್ಲಿ ಆತ್ಮವಿಶ್ವಾಸ ತುಂಬಬೇಕು ಮತ್ತು ಅವರ ಹಕ್ಕುಗಳ ಬಗ್ಗೆ ತಿಳಿ ಹೇಳಬೇಕು. ಇವೇ ಈಗ ನಮ್ಮ ಮುಂದಿರುವ ಮುಖ್ಯ ಕೆಲಸ. ಅದಕ್ಕೆ ನಾವು ಎಲ್ಲರ ಸಹಾಯ ತೆಗೆದುಕೊಂಡು ಮುಂದುವರಿಯಬೇಕು, ಅಂತ ನಿರ್ಧಾರ ಮಾಡಿದೀವಿ.

– ಜಾಗತೀಕರಣದ ಅಬ್ಬರದಲ್ಲಿ ದುಡಿಯುವ ರಂಗ ಹಲವಾರು ಬದಲಾವಣೆಗಳನ್ನು ಕಂಡಿದೆ. ಕಳೆದ ಒಂದೆರಡು ದಶಕದಲ್ಲಿ ಎನ್.ಜಿ.ಓ.ಗಳು ಕಾರ್ಮಿಕ ಸಂಘಟನೆಯ ಕ್ಷೇತ್ರವನ್ನು ಪ್ರವೇಶಿಸಿವೆ. ಗಾರ್ಮೆಂಟ್ ಮಹಿಳಾ ಕಾರ್ಮಿಕರನ್ನು ಸಂಘಟಿಸಲೆಂದೇ ಆಕ್ಸ್‌ಫ್ಯಾಮ್‌ನ ಯೋಜನೆಯಾಗಿ ರೂಪಿತವಾದ ನ್ಯೂ ಟ್ರೇಡ್ ಯೂನಿಯನ್ ಇನಿಷಿಯೇಟೀವ್ಸ್‌ನ ಭಾಗವಾಗಿ, ಸಿವಿಡೆಪ್‌ನ ನೇತೃತ್ವದಲ್ಲಿ ಸಂಘಟನೆ ಮತ್ತು ಜಾಗೃತಿ ತೆರೆದುಕೊಂಡ ಗಾರ್ಮೆಂಟ್ ಮಹಿಳಾ ಕಾರ್ಮಿಕರು ಒಂದು ದೊಡ್ಡ ಕಾರ್ಮಿಕ ಶಕ್ತಿಯಾಗಿ ಹೊರಹೊಮ್ಮಿದ್ದಾರೆ. ಇಲ್ಲಿ ಬಿತ್ತರವಾದ ಕಥೆ ಕಾರ್ಮಿಕ ನಾಯಕಿ ರುಕ್ಮಿಣಿಯದು ಮಾತ್ರವಾಗದೆ, ಹಲವಾರು ಗಾರ್ಮೆಂಟ್ ಕಾರ್ಮಿಕ ಮಹಿಳೆಯರ ಕಥೆಗಳಾಗಬೇಕಿದೆ. ಇದರ ಮುಂದುವರಿಕೆಯಾಗಿ ಈ ರಂಗದ ಅನುಭವವನ್ನು ಮೈಗೂಡಿಸಿಕೊಂಡ ಹಲವಾರು ನಾಯಕಿಯರು ಮೈದಳೆಯಬೇಕಿದೆ; ಸ್ವತಂತ್ರ ಶಕ್ತಿ ಮತ್ತು ಸಾಮರ್ಥ್ಯವನ್ನು ಪಡೆದುಕೊಂಡು ಹೋರಾಟದ ಬಯಲನ್ನು ವಿಸ್ತರಿಸಬೇಕಿದೆ. ಎನ್.ಜಿ.ಓ.ಗಳ ಯೋಜಿತ ಕಾರ್ಯಕ್ರಮಗಳಾಚೆ ಸಂಘಟನೆ ಬೆಳೆಯದಿದ್ದರೆ, ಇಲ್ಲಿಯವರೆಗಿನ ಸಾಧನೆಗೆ ಅರ್ಥ ಬರುವುದಿಲ್ಲ.

**ಡಾ|| ಎನ್. ಗಾಯತ್ರಿ**
ನಂ. ೨೦೧, ಸ್ಕೈಲೈನ್ ಗೋಲ್ಡನ್ ರೇಸ್, ಛತ್ರಂ ಬ್ಲಾಕ್
ಗವೀಪುರ, ಬೆಂಗಳೂರು - ೫೬೦ ೦೧೯

## ಮಹಾಕಾವ್ಯವೂ ಮತ್ತು ಸೊಳ್ಳೆಯೂ

ಮಿರ ಮಿರ ಮಿರುಗುವ
ದಪ್ಪ ರಟ್ಟಿನ
ದೊಡ್ಡ ಗ್ರಂಥ

ನಡುವೆ
ಎರಡು
ಹಾಳೆಗಳು

ಅಲ್ಲಿ
ಅದೆಷ್ಟೋ
ಶತಮಾನಗಳಿಂದೆಂಬಂತೆ
ಸೊಳ್ಳೆಯೊಂದು
ಅಪ್ಪಚ್ಚಿಯಾಗಿದೆ

ಕೈ
ಕಾಲು
ರೆಕ್ಕೆಗಳ ಸಹಿತ

ತನ್ನ ಛಾಪು
ಮೂಡಿಸಿದೆ
ಮೀಸೆಯೂ ಅದರೊಟ್ಟಿಗೆ !

ಅದೇ ಹಾಳೆಯ
ಎಡ ಬಲಕೂ
ತೊಡೆ ತಟ್ಟುತ್ತಲೇ
ಉಸುರುತ್ತಿರುವ
ಮಹೋನ್ನತ ಪಾತ್ರಗಳಂತೆ



ಎ. ಹರಿನಾಥ ಬಾಬು ಸಿರುಗುಪ್ಪ, ಉಪ ಖಜಾನಾಧಿಕಾರಿ, ಉಪ ಖಜಾನೆ, ಗಂಗಾವತಿ - ೫೮೩ ೨೨೭, ಕೊಪ್ಪಳ ಜಿಲ್ಲೆ

ಎರಡು ದಶಕಗಳ ತ್ವರಿತಗತಿಯ ಆರ್ಥಿಕ ಪ್ರಗತಿಯ ಹಾದಿಯಲ್ಲಿ ಭಾರತದ ನಗರ ಆರ್ಥಿಕತೆ ತೃಪ್ತಿಕರವಾದ ರೀತಿಯಲ್ಲಿ ಸಾಗಿದೆಯಾದರೂ, ಇತ್ತೀಚಿನ ಆಹಾರ ವಸ್ತುಗಳ ಕಳವಳಕಾರಿ ಬೆಲೆ ಏರಿಕೆ ನಗರವಾಸಿಗಳು ಎದುರಿಸಬೇಕಾಗಿರುವ ಆಹಾರ ಅಭದ್ರತೆ ಕುರಿತು ಎಚ್ಚರಿಕೆ ಗಂಟೆಯನ್ನು ಬಾರಿಸಿದೆ. ೧೯೯೩-೯೪, ೧೯೯೯-೨೦೦೦ ಮತ್ತು ೨೦೦೪-೦೫ರ ರಾಷ್ಟ್ರೀಯ ಸಮೀಕ್ಷೆಯ ಫಲಿತಾಂಶಗಳು ಹೇಳುವಂತೆ, ೧೯೯೩-೯೪ ಮತ್ತು ೧೯೯೯-೨೦೦೦ದಲ್ಲಿ ೧೯೮೭-೮೮ರಿಂದ ೧೯೯೩-೯೪ರವರೆಗೆ ನಗರಪ್ರದೇಶಗಳಲ್ಲಿ ಉದ್ಯೋಗದ ಪ್ರಮಾಣದ ದರ ಇಳಿಮುಖವಾಗಿತ್ತು. ಆದರೆ ೧೯೯೯-೨೦೦೦ದಿಂದ ೨೦೦೪-೦೫ರಲ್ಲಿ ತೀವ್ರತರ ಸುಧಾರಣೆಯೂ ಕಂಡುಬಂದಿತ್ತು. ಯೋಜನಾರಹಿತವಾದ ನಗರ ಪ್ರದೇಶಗಳ ಬೆಳವಣಿಗೆ ಮೂಲಭೂತ ಸೌಲಭ್ಯಗಳಿಲ್ಲದ (ವಸತಿ, ಕುಡಿಯುವ ನೀರು, ಶೌಚಾಲಯ ಇತ್ಯಾದಿ) ಕೊಳಚೆ ಪ್ರದೇಶಗಳ ಬೆಳವಣಿಗೆಗೆ ಅವಕಾಶ ನೀಡಿದೆ. ತತ್ಪರಿಣಾಮವಾಗಿ ಆಹಾರ ಅಭದ್ರತೆ, ಸುರಕ್ಷಿತ ಕುಡಿಯುವ ನೀರಿನ ಕೊರತೆ ಮುಂತಾದ ಸಮಸ್ಯೆಗಳು ಉದ್ಭವಿಸಿವೆ.

# ಭಾರತದಲ್ಲಿ ಆಹಾರ ಭದ್ರತೆ – ಹೀಗೊಂದು ಚಿಂತನೆ

ಶತಮಾನಗಳಿಂದಲೂ ಜಗತ್ತಿನ ಶ್ರೀಮಂತ ಹಾಗೂ ಡರಾಷ್ಟ್ರಗಳ ನಡುವೆ ಆರ್ಥಿಕ ಅಂತರ ಮುಂದುವರಿಯುತ್ತಲೇ ಇದೆ ಎಂದರೆ ಅತಿಶಯೋಕ್ತಿ ಎನಿಸಲಾರದು. ತ್ತೀಚಿನ ಅವಧಿಯಲ್ಲಿ ಜಾಗತಿಕ ಆಹಾರ ವಸ್ತುಗಳಲ್ಲಿನ ಲೆ ಏರಿಕೆ ಈ ಅಂತರವನ್ನು ಇನ್ನಷ್ಟು ಹೆಚ್ಚಿಸಿದೆಯೆಂದೇ ಳಬಹುದು. ಜಗತ್ತಿನ ಶೇಕಡ ೭೦ರಷ್ಟು ಜನರು ಡರಾಷ್ಟ್ರಗಳಲ್ಲಿ ವಾಸಿಸುತ್ತಿದ್ದು ವಿಶ್ವದ ಸಂಪನ್ಮೂಲಗಾದ ನೀರು, ನೀರಾವರಿ ಭೂಮಿ ಹಾಗೂ ಶಕ್ತಿ ಸಪನ್ಮೂಲಗಳಲ್ಲಿ ಶೇಕಡ ೪೦ಕ್ಕಿಂತಲೂ ಕಡಿಮೆ ಮಾಣದಲ್ಲಿ ಬಳಸಿಕೊಳ್ಳಲು ಸಾಧ್ಯವಾಗಿದೆ. ಪಾಶ್ಚಿಮಾತ್ಯ ಷ್ಟ್ರಗಳು ಇಳಿಮುಖವಾಗುತ್ತಿರುವ ಜನನ ದರಗಳಿಂದಾಗಿ ಹಾರ ವಸ್ತುಗಳಲ್ಲಿ ಸ್ವಾವಲಂಬನೆಯತ್ತ ಸಾಗುತ್ತಿವೆ. ದ್ದರಿಂದ ಅನೇಕ ಚಿಂತಕರು ಹೆಚ್ಚುತ್ತಿರುವ ಆಹಾರ ಸ್ತುಗಳ ಬೆಲೆಗೆ ಭಾರತ ಮತ್ತು ಚೀನಾಗಳನ್ನೇ ಹೊಣೆಗಾರರನ್ನಾಗಿಸುತ್ತಿದ್ದಾರೆ. ಇತ್ತೀಚಿನ ವಿಶ್ವಸಂಸ್ಥೆಯ ಶಮಾನದ ಅಭಿವೃದ್ಧಿ ಗುರಿಗಳು ಎಂಬ ವರದಿಯ ಪ್ರಕಾರ ಭಾರತ ತನ್ನ ಬಡತನದ ಪ್ರಮಾಣವನ್ನು ೧೯೧೧ರಲ್ಲಿದ್ದ ಶೇಕಡ ೫೧ರಿಂದ ೨೦೧೫ರ ವೇಳೆಗೆ ಶೇಡ ೨೫ಕ್ಕೆ ಕಡಿಮೆ ಮಾಡುವ ಸಾಮರ್ಥ್ಯವನ್ನು ಹೊದಿದೆ. ಇದಕ್ಕಾಗಿ ತಲಾ ಆಹಾರ ಲಭ್ಯತೆಯ ಪ್ರಮಾಣವನ್ನು, ಪೌಷ್ಟಿಕತೆ ಪ್ರಮಾಣವನ್ನು ಹೆಚ್ಚಿಸಬೇಕಿದೆ. ಇದರಿಂದ ಉಂಟಾಗಬಹುದಾದ ಹೆಚ್ಚಿದ ಆಹಾರ ಬೇಡಿಕೆ ಮತ್ತು ಆಹಾರ ಬೆಲೆ, ಹಣದುಬ್ಬರವನ್ನು ಸಮರ್ಥವಾಗಿ ಎದುರಿಸಬೇಕಿದೆ. ದಿನೇ ದಿನೇ ಹೆಚ್ಚುತ್ತಿರುವ ಜನಸಂಖ್ಯೆಯನ್ನು ನಿಯಂತ್ರಿಸಲಾಗದ ಸ್ಥಿತಿಯಲ್ಲಿರುವ ಭಾರತ ಸಾಮಾಜಿಕ ಒತ್ತಡಗಳು, ವಿಘಟನೆ, ಆಹಾರ ಕೊರತೆ ಹಾಗೂ ಪರಿಸರ ವಿನಾಶದಂತಹ ಸಮಸ್ಯೆಗಳನ್ನು ಅನಿವಾರ್ಯವಾಗಿ ಅನುಭವಿಸಬೇಕಾಗಿದೆ.

ಭಾರತವು ಪ್ರಸ್ತುತ ಅವಧಿಯಲ್ಲಿ ಒಂದು ವಿರೋಧಾಭಾಸದ ಸನ್ನಿವೇಶದಲ್ಲಿ ಸಿಕ್ಕಿಹಾಕಿಕೊಂಡಿದೆ ಎಂದೇ ಹೇಳಬಹುದು. ಏಕೆಂದರೆ, ಒಂದೆಡೆ ಅಪಾರವಾದ ಹಸಿವು, ಮತ್ತೊಂದೆಡೆ ಹೆಚ್ಚುತ್ತಿರುವ ಆಹಾರ ವಸ್ತು ಸಂಗ್ರಹಣೆ. ಭಾರತದ ಆಹಾರ ನಿಗಮ ೬೨ ಮಿಲಿಯನ್ ಟನ್ನುಗಳಷ್ಟು ಆಹಾರ ದಾಸ್ತಾನು ಹೊಂದಿದೆ. ಆದರೆ ವಾರ್ಷಿಕವಾಗಿ ಆಹಾರ ಭದ್ರತೆ ಒದಗಿಸಲು ಅವಶ್ಯವಿರುವ ಆಹಾರ ಸಂಗ್ರಹಣೆ ಕೇವಲ ೨೦ ಮಿಲಿಯನ್ ಟನ್ನುಗಳಷ್ಟು ಮಾತ್ರ. ಆದರೂ, ಒಂದು ಅಂದಾಜಿನಂತೆ ೨೦೦ ಮಿಲಿಯನ್ ಜನರು ಪೂರ್ತಿ ಆಹಾರ ಪಡೆಯಲು ಸಾಧ್ಯವಾಗಿಲ್ಲ. ಹಾಗೆಯೇ ೫೦ ಮಿಲಿಯನ್ ಜನರು ಹಸಿವೆಯಿಂದ ನರಳುತ್ತಿದ್ದಾರಲ್ಲದೆ, ಸಾವನ್ನಪ್ಪುತ್ತಿದ್ದಾರೆ. ಈ ವಿಪರ್ಯಾಸಕ್ಕೆ ಸದ್ಯದಲ್ಲಿರುವ ನೀತಿಯ ದೋಷಗಳು ಹಾಗೂ ಕಾರ್ಯಾನುಗತಗೊಳಿಸುವಲ್ಲಿನ ತೊಡಕುಗಳೇ ಕಾರಣವಾಗಿವೆ.

ಎರಡು ದಶಕಗಳ ತ್ವರಿತಗತಿಯ ಆರ್ಥಿಕ ಪ್ರಗತಿಯ ಹಾದಿಯಲ್ಲಿ ಭಾರತದ ನಗರ ಆರ್ಥಿಕತೆ ತೃಪ್ತಿಕರವಾದ ರೀತಿಯಲ್ಲಿ ಸಾಗಿದೆಯಾದರೂ, ಇತ್ತೀಚಿನ ಆಹಾರ ವಸ್ತುಗಳ ಕಳವಳಕಾರಿ ಬೆಲೆ ಏರಿಕೆ ನಗರವಾಸಿಗಳು ಎದುರಿಸಬೇಕಾಗಿರುವ ಆಹಾರ ಅಭದ್ರತೆ ಕುರಿತು ಎಚ್ಚರಿಕೆ ಗಂಟೆಯನ್ನು ಬಾರಿಸಿದೆ. ೧೯೯೩-೯೪, ೧೯೯೯-೨೦೦೦ ಮತ್ತು ೨೦೦೪-೦೫ರ ರಾಷ್ಟ್ರೀಯ ಸಮೀಕ್ಷೆಯ ಫಲಿತಾಂಶಗಳು ಹೇಳುವಂತೆ, ೧೯೯೩-೯೪ ಮತ್ತು ೧೯೯೯-೨೦೦೦ದಲ್ಲಿ ೧೯೮೭-೮೮ರಿಂದ ೧೯೯೩-೯೪ರವರೆಗೆ ನಗರಪ್ರದೇಶಗಳಲ್ಲಿ ಉದ್ಯೋಗದ ಪ್ರಮಾಣದ ದರ ಇಳಿಮುಖವಾಗಿತ್ತು. ಆದರೆ ೧೯೯೯-೨೦೦೦ದಿಂದ ೨೦೦೪-೦೫ರಲ್ಲಿ ತೀವ್ರತರ ಸುಧಾರಣೆಯೂ ಕಂಡುಬಂದಿತ್ತು. ಯೋಜನಾರಹಿತವಾದ ನಗರಪ್ರದೇಶಗಳ ಬೆಳವಣಿಗೆ ಮೂಲಭೂತ ಸೌಲಭ್ಯಗಳಿಲ್ಲದ (ವಸತಿ, ಕುಡಿಯುವ ನೀರು, ಶೌಚಾಲಯ ಇತ್ಯಾದಿ) ಕೊಳಚೆ ಪ್ರದೇಶಗಳ ಬೆಳವಣಿಗೆಗೆ ಅವಕಾಶ ನೀಡಿದೆ. ತತ್ಪರಿಣಾಮವಾಗಿ ಆಹಾರ ಅಭದ್ರತೆ, ಸುರಕ್ಷಿತ ಕುಡಿಯುವ ನೀರಿನ ಕೊರತೆ ಮುಂತಾದ ಸಮಸ್ಯೆಗಳು ಉದ್ಭವಿಸಿವೆ.

ಆಗಸ್ಟ್ ತಿಂಗಳಲ್ಲಿ ರೋಮ್‌ನಲ್ಲಿ ನಡೆದ ವಿಶ್ವ ಸಂಸ್ಥೆಯ ಆಹಾರ ಮತ್ತು ಕೃಷಿ ಸಂಸ್ಥೆಯ ಸಭೆಯಲ್ಲಿ,

ಡಾ|| ಜಯಂತಿ ಜೆ.

ಹೆಚ್ಚುತ್ತಿರುವ ಸಟ್ಟಾ ವ್ಯಾಪಾರ ಹಾಗೂ ಪರಿಸರ ಮಾಲಿನ್ಯಗಳು ವಿಶ್ವ ಎದುರಿಸಬೇಕಾಗಿರುವ ಆಹಾರ ಅಭದ್ರತೆಗೆ ಕಾರಣ ಎಂಬ ವಿಚಾರದತ್ತ ಗಮನ ಸೆಳೆಯಲಾಯಿತು. ಈ ಸಮಸ್ಯೆಯಿಂದ ಪಾರಾಗಲು ಕ್ರಿಮಿನಾಶಕಗಳು ಹಾಗೂ ಬೃಹತ್ ಯಂತ್ರಗಳಿಂದ ಹೊರತಾದ ಕೃಷಿ ವಿಧಾನಗಳ ಬಳಕೆಯ ಮೂಲಕ ಆಹಾರ ಧಾನ್ಯಗಳನ್ನು ಬೆಳೆಯುವತ್ತ ಗಮನಹರಿಸಲು ಕರೆ ನೀಡಲಾಗಿದೆ.

ಭಾರತದಲ್ಲಿ ೧೯೫೧ರಲ್ಲಿ ಪಂಚವಾರ್ಷಿಕ ಯೋಜನೆಗಳನ್ನು ಅಳವಡಿಸಿಕೊಂಡಂದಿನಿಂದ ಆಹಾರದಲ್ಲಿ ಸ್ವಾವಲಂಬನೆ ಸಾಧಿಸುವುದು ಒಂದು ಪ್ರಮುಖ ಗುರಿಯಾಗಿದೆ. ಆಹಾರದಲ್ಲಿ ಬಾಹುಳ್ಯ ಸಾಧಿಸಿರುವ ರಾಷ್ಟ್ರಗಳು ಆಹಾರದ ಬಾಹುಳ್ಯವನ್ನೇ, ಆಹಾರ ಕೊರತೆಯನ್ನು ಎದುರಿಸುತ್ತಿರುವ ರಾಷ್ಟ್ರಗಳನ್ನು ತಮ್ಮ ಆಜ್ಞೆಯಂತೆ ನಡೆಸಿಕೊಳ್ಳಲು ಅಸ್ತ್ರವಾಗಿ ಬಳಸುತ್ತಿರುವುದು ಸರ್ವವೇದ್ಯ ಸಂಗತಿಯಾಗಿದೆ. ೧೯೬೫ ಹಾಗೂ ೧೯೬೬ರಲ್ಲಿ ಭಾರತ ತೀವ್ರತರ ಬರಗಾಲಕ್ಕೆ ತುತ್ತಾಗಿದ್ದಾಗ ಅಮೆರಿಕಾದ ಆಗಿನ ಅಧ್ಯಕ್ಷರಾಗಿದ್ದ ಲಿಂಡನ್ ಜಾನ್‌ಸನ್ ಭಾರತಕ್ಕೆ ಸರಿಯಾದ ಪಾಠ ಕಲಿಸುವ ದೃಷ್ಟಿಯಿಂದ ಪಿಎಲ್ ೪೮೦ ಯೋಜನೆಯ ಅಡಿಯಲ್ಲಿ ಭಾರತಕ್ಕೆ ನೀಡಲಾಗುತ್ತಿದ್ದ ಮಾಸಿಕ ಆಹಾರದ ನೆರವನ್ನು ನಿರ್ಬಂಧಿಸಿದ್ದರು. ಇದರ ಉದ್ದೇಶ ವಿಯೆಟ್ನಾಂ ಮೇಲಿನ ಅಮೆರಿಕಾದ ದಾಳಿಯನ್ನು ಭಾರತ ವಿರೋಧಿಸದಂತೆ ಮಾಡುವುದೇ ಆಗಿತ್ತು. ಆಗಿನ ಪ್ರಧಾನಿಯಾಗಿದ್ದ ಶ್ರೀಮತಿ ಇಂದಿರಾ ಗಾಂಧಿಯವರು ಜಾರಿಗೆ ತಂದ ಬೀಜ-ನೀರು-ರಸಗೊಬ್ಬರ ನೀತಿ ಭಾರತದಲ್ಲಿ ಹಸಿರು ಕ್ರಾಂತಿಗೆ ದಾರಿಮಾಡಿಕೊಟ್ಟಿತು. ಇದರ ಪರಿಣಾಮವಾಗಿ ಭಾರತ ೧೯೭೬ರಲ್ಲಿ ಆಹಾರ ಧಾನ್ಯಗಳಲ್ಲಿ ಸ್ವಾವಲಂಬನೆ ಸಾಧಿಸಲು ಸಾಧ್ಯವಾಯಿತು. ೧೯೯೭-೨೦೦೨ರವರೆಗಿನ ೯ನೇ ಪಂಚವಾರ್ಷಿಕ ಯೋಜನೆ ಭಾರತದಲ್ಲಿ ಬರಗಾಲದ ಹೊಡೆತಕ್ಕೆ ತುತ್ತಾಗದ ರೀತಿಯಲ್ಲಿ ಆಹಾರ ಭದ್ರತೆ ವ್ಯವಸ್ಥೆಯ ನಿರ್ಮಾಣಕ್ಕೆ ಆದ್ಯತೆ ನೀಡಿತು. ೯ನೇ ಯೋಜನೆ ರಾಷ್ಟ್ರೀಯ ಮಟ್ಟದಲ್ಲಿ ಹಾಗೂ ಸ್ಥಳೀಯ ಮಟ್ಟದಲ್ಲಿ ಆಹಾರ ಭದ್ರತೆಯ ಉದ್ದೇಶವನ್ನು ಹೊಂದಿತ್ತು. ಇದಕ್ಕಾಗಿ ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಜಾರಿಗೆ ತರಲು ನಿರ್ಧರಿಸಲಾಯಿತು. ಅಲ್ಲದೆ ದ್ವಿಮುಖ ಬೆಲೆ ನೀತಿಯನ್ನೂ ಜಾರಿಗೆ ತರಲಾಯಿತು. ೧೦ನೇ ಯೋಜನೆ ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಪುನರ್‌ರಚಿಸಲು ಕಾರ್ಯಸೂಚಿಯನ್ನು ಜಾರಿಗೆ ತಂದಿತು.

ಭಾರತದಲ್ಲಿ ಆಹಾರ ಭದ್ರತೆ ವ್ಯವಸ್ಥೆ ೪ ಮುಖ್ಯ ಅಂಶಗಳನ್ನು ಒಳಗೊಂಡಿದೆ. ಅವುಗಳೆಂದರೆ :

೧. ಹೆಚ್ಚುತ್ತಿರುವ ಜನಸಂಖ್ಯೆಯ ಅಗತ್ಯತೆಗಳನ್ನು ಪೂರೈಸಲು ಸ್ವದೇಶೀ ಉತ್ಪಾದನೆಯನ್ನು ಹೆಚ್ಚಿಸುವುದು ಹಾಗೂ ಅಧಿಕ ಪ್ರಮಾಣದ ಜನರಲ್ಲಿ ಕಂಡುಬರುತ್ತಿರುವ ಅಪೌಷ್ಟಿಕತೆಯನ್ನು ಹೋಗಲಾಡಿಸುವುದು.
೨. ಆಹಾರ ವಸ್ತುಗಳ ಸಂಗ್ರಹಣೆ ಮತ್ತು ದಾಸ್ತಾನಿಗೆ ಕನಿಷ್ಠ ಬೆಂಬಲ ಬೆಲೆ ನೀಡುವುದು.
೩. ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಜಾರಿಗೆ ತರುವುದು.
೪. ನೈಸರ್ಗಿಕ ವಿಕೋಪಗಳಿಂದಾಗುವ ತಾತ್ಕಾಲಿಕ ಆಹಾರ ಕೊರತೆ ನೀಗಿಸಲು ಕಾಪು ದಾಸ್ತಾನನ್ನು ಕಾಯ್ದುಕೊಳ್ಳುವುದು ಹಾಗೂ ಆಹಾರದ ಕೊರತೆಯ ಸಮಯದಲ್ಲಿ ವ್ಯಾಪಾರಸ್ಥರು ಕೃತಕವಾಗಿ ಬೆಲೆ ಏರಿಕೆ ಉಂಟುಮಾಡದಂತೆ ಕಾಪು ದಾಸ್ತಾನು ಮೂಲಕ ನೋಡಿಕೊಳ್ಳುವುದು.

ಭಾರತದಲ್ಲಿ ಇತ್ತೀಚಿನ ಅವಧಿಯಲ್ಲಿ ಜಾರಿಗೆ ಬಂದ ಸಕಾಲಿಕ ಕ್ರಮಗಳಿಂದಾಗಿ ಆಹಾರ ಬೆಲೆ, ಹಣದುಬ್ಬರ ಶೇಕಡ ೨೦ರಿಂದ ಸುಮಾರು ಶೇಕಡ ೧೪ರ ವರೆಗೆ ಕಡಿಮೆಯಾಗಿರುವುದು ಸಂತಸದ ವಿಷಯ. ಪಾಂಡಿಚೆರಿ ಸರ್ಕಾರದ ಸೆಕ್ರೆಟೇರಿಯಟ್‌ನ ಮುಖ್ಯ ಕಾರ್ಯದರ್ಶಿ ನೀಡಿರುವ ಆಹಾರ ಭದ್ರತೆ ಸಮಸ್ಯೆ ಕುರಿತಾದ ಈ ಕೆಳಕಾಣಿಸಿದ ಪರಿಹಾರಗಳೂ ಚಿಂತನಾಯೋಗ್ಯವಾಗಿವೆ :



ತರಬೇತಿ ಪಡೆದವರು ಉದ್ಧಾರ ಆಗ್ತಾರೋ ಏನೋ ಗೊತ್ತಿಲ್ಲಯ್ಯ... ತರಬೇತಿ ನೀಡುವವರ ನಿರುದ್ಯೋಗ ಸಮಸ್ಯೆ ಪರಿಹಾರವಾದದ್ದು ಸತ್ಯ...

೧. ಪ್ರಸ್ತುತ ಇರುವ ವೆಚ್ಚದಾಯಕ, ಅದಕ್ಷ ಹಾಗೂ ಭ್ರಷ್ಟ ಸಾಂಸ್ಥಿಕ ವ್ಯವಸ್ಥೆಯ ಬದಲು ಮಿತವ್ಯಯಕಾರಿಯಾದ, ಗುಣಮಟ್ಟದ ಆಹಾರ ವಸ್ತುಗಳ ಪೂರೈಕೆಯನ್ನು ಪಾರದರ್ಶಕವಾಗಿ ಕೈಗೊಳ್ಳುವ ವ್ಯವಸ್ಥೆಯೊಂದನ್ನು ರೂಪಿಸಬೇಕಿದೆ.
೨. ಬೆಲೆ ಏರಿಳಿತಗಳಿಂದ ಪಾರಾಗಲು ಹಾಗೂ ಸಣ್ಣ ರೈತರು ನಷ್ಟದಾಯಕ ಮಾರಾಟ ಕೈಗೊಳ್ಳುವುದನ್ನು ತಪ್ಪಿಸಲು, ಅಭಿವೃದ್ಧಿ ಹೊಂದಿದ ಮಾಹಿತಿ ವ್ಯವಸ್ಥೆ ಜಾರಿಗೆ ತರಬೇಕಿದೆ. ಬೆಳೆ ವಿಮೆ ವ್ಯವಸ್ಥೆಯನ್ನು ಹೆಚ್ಚು ಭದ್ರಗೊಳಿಸಬೇಕಿದೆ.
೩. ಆಹಾರ ವಸ್ತುಗಳ ಅಂತರರಾಜ್ಯ ವ್ಯಾಪಾರದ ಮೇಲಿನ ನಿರ್ಬಂಧ ರದ್ದತಿ, ದಾಸ್ತಾನು, ರಫ್ತು ಹಾಗೂ ಸಾಂಸ್ಥಿಕ ಹಣಕಾಸು ಪೂರೈಕೆ ಇತ್ಯಾದಿಗಳ ಬಗ್ಗೆ ಪುನರ್‌ಚಿಂತನೆ ಅಗತ್ಯವಿದೆ.
೪. ಉತ್ಪಾದನೆ ಹಾಗೂ ಅನುಭೋಗದ ನಡುವಣ ಅಂತರ ಕಡಿಮೆ ಮಾಡಲು, ಪೂರೈಕೆ ಅಸ್ಥಿರತೆ ತಡೆಯಲು, ಸಂಪನ್ಮೂಲ ಬಳಕೆಯಲ್ಲಿ ದಕ್ಷತೆ ಹೆಚ್ಚಿಸಲು ಹಾಗೂ ಸೂಕ್ತ ಪ್ರದೇಶಗಳಲ್ಲಿ ಬೆಳೆಯಲು ಆಹಾರ ವಸ್ತುಗಳಲ್ಲಿ ಮುಕ್ತ ವ್ಯಾಪಾರ ಅಗತ್ಯವಿದೆ.
೫. ಪಡಿತರ ವ್ಯವಸ್ಥೆಯಲ್ಲಿ ಬದಲಾವಣೆ ತರುವ ಅಗತ್ಯವಿದೆ. ಇದಕ್ಕಾಗಿ ಅವಶ್ಯಕತೆಗೆ ಅನುಗುಣವಾಗಿ ಬಡವರಿಗೆ ಆಹಾರ ವಿತರಿಸಲು ಆಹಾರ ಕೂಪನ್ನುಗಳನ್ನು ವಿತರಿಸಬೇಕಾಗಿದೆ.
೬. 'ಅನ್ನಕ್ಕಾಗಿ ಕೆಲಸ' ಯೋಜನೆಯನ್ನು ಪರಿಷ್ಕರಿಸಬೇಕಿದೆ.
೭. ಬಡವರ ಸಂಖ್ಯೆ ಆಧರಿಸಿ ರಾಜ್ಯಗಳಿಗೆ ಕೇಂದ್ರ ಸರ್ಕಾರ ಅನುದಾನ ನೀಡ ಬಹುದು. ರಾಜ್ಯ ಸರ್ಕಾರಗಳು ಗ್ರಾಮೀಣ ಸಂಸ್ಥೆಗಳಿಗೆ ಮೂಲಭೂತ ಸೌಕರ್ಯ ನಿರ್ಮಾಣಕ್ಕಾಗಿ ಇದನ್ನು ವಿತರಿಸಬಹುದು.
೮. ಭಾರತದ ಆಹಾರ ನಿಗಮವನ್ನು ಹಂತಹಂತವಾಗಿ ಕೊನೆಗೊಳಿಸಿ, ದಾಸ್ತಾನು ಕಾರ್ಯವನ್ನು ವಿಕೇಂದ್ರೀಕರಿಸಿ, ಜಿಲ್ಲೆಯ ಪ್ರತಿ ಗ್ರಾಮದಲ್ಲೂ ಆಹಾರವಸ್ತು ಬ್ಯಾಂಕು ಗಳನ್ನು ಸ್ಥಾಪಿಸಿ, ಆಹಾರ ಕೂಪನ್ನುಗಳ ಮೂಲಕ ಸಬ್ಸಿಡಿ ದರದಲ್ಲಿ ಜನರಿಗೆ ಆಹಾ ವಿತರಿಸಬಹುದು. ಆಹಾರ ಕೂಪನ್ನುಗಳಿಗೆ ಸೂಕ್ತ ಸಂಖ್ಯೆ ನೀಡಬೇಕು.
೯. ಆಹಾರ ವಸ್ತು ಸಂಗ್ರಹಣೆ ಸೌಲಭ್ಯವನ್ನು ಎರಡು ವರ್ಷಗಳಲ್ಲಿ ಗ್ರಾಮೀ ಅಭಿವೃದ್ಧಿ ಯೋಜನೆ ಅಡಿಯಲ್ಲಿ ಸ್ಥಾಪಿಸಬಹುದು. ಆರಂಭದಲ್ಲಿ ಇದಕ್ಕಾ ಭಾರತೀಯ ಆಹಾರ ನಿಗಮದಿಂದ ಧಾನ್ಯ ಸಂಗ್ರಹವನ್ನು ಬಳಸಿಕೊಳ್ಳಬಹುದು ಸಾಂಸ್ಕೃತಿಕವಾಗಿ ಒಪ್ಪಿಗೆ ಇದ್ದರೆ ಬಾಜ್ರ ಮತ್ತು ರಾಗಿ, ನವಣೆ ಹಾಗೂ ದ್ವಿದ ಧಾನ್ಯಗಳನ್ನು ಸಂಶೋಧನೆ ಮಾಡಬಹುದು.
೧೦. ಆಹಾರ ಬ್ಯಾಂಕುಗಳ ಮೇಲ್ವಿಚಾರಣೆಯನ್ನು ಸಮುದಾಯಕ್ಕೆ ವಹಿಸಬಹುದು ಇದರಿಂದ ಆಡಳಿತ ವೆಚ್ಚತಗ್ಗಿಸಬಹುದು. ಭ್ರಷ್ಟಾಚಾರ ನಿವಾರಿಸಬಹುದು.
೧೧. ಆಹಾರ ಬ್ಯಾಂಕುಗಳಲ್ಲಿ ಧಾನ್ಯ ಕಳಪೆಯಾಗಿದ್ದು, ಹೆಚ್ಚು ಬೆಲೆ ಎನಿಸಿದರೆ ಜನರು ಮು ಮಾರುಕಟ್ಟೆಯಲ್ಲಿ ತಮ್ಮ ಆಹಾರ ಕೂಪನ್ನು ಬಳಸಿ ಧಾನ್ಯ ಕೊಳ್ಳುವ ಅವಕಾ ನೀಡುವುದರ ಮೂಲಕ ಆಹಾರ ಬ್ಯಾಂಕು ಕಾರ್ಯಾಚರಣೆಯಲ್ಲಿ ದಕ್ಷ ಹೆಚ್ಚಿಸಬಹುದಾಗಿದೆ.
೧೨. ಆಹಾರ ವಸ್ತುಗಳ ಚಿಲ್ಲರೆ ವ್ಯಾಪಾರಿಗಳಿಗೆ ಆಹಾರ ಕೂಪನ್ನಿಗೆ ಪುನರ್‌ಧನ ಅವಕಾ ನೀಡಲು ಪ್ರತ್ಯೇಕವಾದ ನಿಧಿಯೊಂದನ್ನು ಸ್ಥಾಪಿಸುವ ಅಗತ್ಯವಿದೆ.
೧೩. ಕಠಿಣ ಸನ್ನಿವೇಶ ಎದುರಿಸಲು ರಾಜ್ಯಮಟ್ಟದಲ್ಲೂ ಕಾಪು ದಾಸ್ತಾನು ಕಾಯ್ದುಕೊಳ್ಳಬೇಕು.
೧೪. ಕೃಷಿ ಉತ್ಪಾದಕತೆ ಹೆಚ್ಚಿಸಲು ಸರ್ಕಾರ ಮೂಲಭೂತ ಸೌಕರ್ಯ, ಸೂಕ್ತ ತಂತ್ರಜ್ಞಾ ಬಳಕೆ, ಹಣಕಾಸು ಸೌಲಭ್ಯ ಪೂರೈಕೆ ಮುಂತಾದುವುಗಳಲ್ಲಿ ಹೂಡಿಕೆ ಕೈಗೊಳ್ಳಬೇಕು.

ಅಕ್ಕಿ ಮತ್ತು ಗೋಧಿ ಬೆಳೆಯನ್ನೇ ಪ್ರಮುಖವಾಗಿಸುವ ಬದಲು ನಿರ್ದಿಷ್ಟ ಪ್ರದೇಶದ ಹೆಚ್ಚು ಅವಶ್ಯವಿರುವ ಬೆಳೆಗೆ ಆದ್ಯತೆ ನೀಡಬಹುದು. ನೀರಾವರಿಗೆ ಹೆಚ್ಚು ಆದ್ಯತೆ ನೀ ಖಾಸಗಿ ಹೂಡಿಕೆಯನ್ನು ಪ್ರೇರೇಪಿಸಬಹುದು.

ಮೇಲೆ ವಿವರಿಸಿದ ಉತ್ತಮ ಸಲಹೆಗಳಲ್ಲಿ ಕೆಲವನ್ನಾದರೂ ಕಾಳಜಿ ವಹಿಸಿ ಜಾರಿ ತಂದಿದ್ದೇ ಆದರೆ ಮುಂಬರುವ ಐದಾರು ವರ್ಷಗಳಲ್ಲಿ ಆಹಾ ಭದ್ರತೆಯ ಸಮಸ್ಯೆಗೆ ಸೂಕ್ತ ಪರಿಹಾರ ನಿಸ್ಸಂದೇಹವಾ ದೊರೆಯುತ್ತದೆಂಬ ಆಶಯ ನಿಷ್ಫಲವಾಗಲಾರದ ಮತ್ತೊರ್ವ ಚಿಂತಕರು ಹೇಳುವಂತೆ ರಾಜ್ಯ ಸರ್ಕಾರಗಳ ಹೆಚ್ಚಿನ ಉತ್ಪಾದಕತೆಗಾಗಿ ಸಂಪನ್ಮೂಲ ಬಳಸಲು ಹೆಚ ಸ್ವಾಯತ್ತತೆ ನೀಡಬೇಕಿದೆ. ಸಂಯುಕ್ತವಾದ ಸೌಹಾರ್ದಯ ಒಪ್ಪಂದ ಮಾರುಕಟ್ಟೆ ವ್ಯವಸ್ಥೆ ಹಾಗೂ ಅಂತರರಾ ಸಂಗ್ರಹಣಾ ಕಾನೂನುಗಳ ಸಂಯೋಜನೆ ವಿವಿಧ ರಾಜ್ಯಗಳ್ ಅಭಿವೃದ್ಧಿಪರ ರೈತರಿಗೆ ವರದಾನವಾಗಲಿದೆ. ತಂಪು ಸರಪ ಮೂಲಭೂತ ಸೌಕರ್ಯ ಅಭಿವೃದ್ಧಿಗೊಳಿಸಿ, ಆಹಾರ ಪೂಕ ಸರಪಣಿ ಯಲ್ಲಾಗುವ ಅಪವ್ಯಯಗಳನ್ನು ತಡೆಯಬಹುದಾಗಿ.

ಡಾ|| ಜಯಂತಿ ಜೆ.
ಸಹ ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಳೆಹೊನ್ನೂರು

# ಗಂಗವ್ವ ಗಂಗಾಮಾಯಿ

ಡಾ॥ ಸಬಿಹಾ ಭೂಮೀಗೌಡ

**ಹೊ**ರಗೆ ಕಚೇರಿಯ ಜೀಪ್ ಬಂದು ನಿಂತ ಸದ್ದು, ಪಟಪಟನೆ ಬಾಗಿಲು ತೆರೆದು ಹಾಕಿದ ಸದ್ದು, ಮನೆಯೊಳಗೆ ದಡದಡನೆ ಬರುತ್ತಿರುವವರ ಕಾಲ ಸದ್ದು ಕೇಳುತ್ತಿದ್ದಂತೆ, ನನ್ನ ವಾಚನ್ನು ನೋಡಿಕೊಂಡು, ಮಾಡುತ್ತಿದ್ದ ಕೆಲಸವನ್ನು ಚುರುಕುಗೊಳಿಸಿದೆ. ಲೀನಾ ಓಡೋಡಿ ಬಂದು ''ಸರೂ, ನಿನ್ದು ಪ್ಯಾಕಿಂಗ್ ಆಯ್ತೇನೇ ? ಅವ್ರೆಲ್ಲಾ ಬಂದಾಯ್ತು... ಬೇಗ ಬೇಗ'' ಎಂದಳು. ''ಇನ್ನೇನು ಮುಗ್ದೇಬಿಡ್ತು ... ನಮ್ಗೆ ಹೇಳಿದ್ದೇ ಅರ್ಧ ಗಂಟೆ ಮೊದ್ಲು. ಅಷ್ರಲ್ಲಿ ಪ್ಯಾಕಿಂಗ್ ಅಂದ್ರೆ...'' ಎನ್ನುತ್ತ, ಬ್ಯಾಗಿಗೆ ಹಾಕಲು ಇನ್ನೂ ಏನನ್ನು ಮರೆತಿದ್ದೇನೆ ಎಂದು ನೆನಪಿಸಿಕೊಳ್ಳತೊಡಗಿದೆ. ಒಳಗೆ ಬರುತ್ತ ರಫೀಕ್ 'ಲೀನಾ are you ready ?' ಎಂದುದು, 'O...Yes' ಅವಳು ಉತ್ತರಿಸಿದ್ದು ಎಲ್ಲ ಕೇಳುತ್ತಿತ್ತು. ಮಂಜುಳಾ ಎಲ್ಲಿದ್ದಾಳೋ ಎಂದು ಯೋಚಿಸುತ್ತಿದ್ದಂತೆ, ''ಏನೇನು ಒಯ್ಯಬೇಕು ಅಂತಾನೇ ಹೊಳೀತಿಲ್ಲ ಸರೂ... ಅಲ್ಲಿ ನಾವು ಹೋಗುವಲ್ಲಿ ಏನು ಇರುತ್ತೆ ಇರಲ್ಲ ಅಂತ ಊಹಿಸೋದೂ ಕಷ್ಟ... ಹತ್ತು ಲೀಟರ್ ನೀರಿನ ಕ್ಯಾನ್‌ಗೆ ಹೇಳಿದ್ದೀನಿ, ಶಾಲು, ಸ್ವೆಟರ್ ಇಟ್ಕೊಂಡಿದ್ದೀನಿ... ದಾರೀಲೇ ಏನಾದ್ರೂ ಸ್ನ್ಯಾಕ್ಸ್ ಕಟ್ಟಿಸ್‌ಕೊಂಡ್ರಾಯ್ತು.... ಓನರ್‌ಗೆ ನಾವು ಒಂದ್‌ವಾರ ಇರಲ್ಲ ಅಂತ ಹೇಳಿದ್ದೀನಿ.... ಇನ್ನೇನು'' ಎಂದವಳು ನಾನು ಸಿದ್ಧಪಡಿಸಿದ ಬ್ಯಾಗ್ ನೋಡಿ ಅಚ್ಚರಿಗೊಂಡಳು. ''ಇದೇನೇ ? ನಾವು ಹೋಗ್ತಿರೋದು ಆಫೀಸ್ ಡ್ಯೂಟಿಗಾ ಅಥ್ವಾ... ಒಂದ್ ವಾರಕ್ಕೆ ಇಷ್ಟು ದೊಡ್ಡ್ ಬ್ಯಾಗಾ ? ಏನೇನು ತುಂಬ್ಸಿದ್ದೀ ? ಸರಳವಾಗಿ ನನ್ನ್ ಹಾಗೆ ಎರಡು ಚೂಡಿದಾರ್ ಸೆಟ್ ಸಾಕಾಗ್ತಿತ್ತಲ್ಲ... ನೀನೋ ನಿನ್ನ ಆ ಕಾಟನ್ ಸೀರೇನೋ... ಅದನ್ನ ಹ್ಯಾಗೆ ಮ್ಯಾನೇಜ್ ಮಾಡ್ತೀಯೋ... ಒಂದೂ ತಿಳಿಯಲ್ಲ,'' ಎಂದು ಗೊಣಗಿದಳು.

ಅಷ್ಟರಲ್ಲಿ ಹೊರಗೆ ನವೀನ್ ಮತ್ತು ರಫೀಕ್ ಲಗೇಜನ್ನು ಜೀಪಿಗೆ ತುಂಬುತ್ತಿದ್ದರು. ಟೈಮಾಯ್ತು ಟೈಮಾಯ್ತು ಎಂಬುದೇ ಅವರ ಗೊಣಗಾಟ. ಇಷ್ಟು ಅವಸರ ಮಾಡಿದ್ರೆ, ಬೇಕಾದ್ದನ್ನೇ ಬಿಟ್ಟುಹೋದ್ರೆ ಎಂಬುದೇ ನಮ್ಮ ಆತಂಕ. ಕೊನೆಯ ಬಾರಿಗೆ ಬ್ಯಾಗ್‌ನ ಝಿಪ್ ತೆರೆದು ಪೆನ್ನ್, ಲೆಟರ್‌ಪ್ಯಾಡ್, ಮೊಬೈಲ್, ಕನ್ನಡಕ ಹೀಗೆ ಎಲ್ಲವೂ ಇವೆ ಎಂದು ಖಚಿತಪಡಿಸಿಕೊಂಡು ಹೊರಬಾಗಿಲಿಗೆ ಬೀಗ ಹಾಕಿದೆ.

''ಉತ್ತರ ಕರ್ನಾಟಕದ ಅತಿವೃಷ್ಟಿ ಪೀಡಿತ ಪ್ರದೇಶಗಳ ಬಗ್ಗೆ ವರದಿ ಮಾಡಬೇಕೆಂದು ಹೊರಟಿದ್ದೆವು. ಪತ್ರಿಕೆಯದೇ ವಾಹನವನ್ನು ನವೀನ್ ಗೊತ್ತುಮಾಡಿದ್ದ. ಓಲುಜಾನಲ್ಲಿ ಕೆಲಸ ಮಾಡುವ ಲೀನಾ, ಅಧ್ಯಾಪಕಿ ಮಂಜುಳಾ, ಸಮಾಜಸೇವೆ ಭಾಗದ ರಫೀಕ್ ನಮ್ಮ ಜೊತೆಗೂಡಿದ್ದರು. ಎಲ್ಲರ ಹೊಟ್ಟೆಯೂ ಚುರುಗುಟ್ಟುತ್ತಿತ್ತು. ಹೋಟೆಲ್‌ನಲ್ಲಿ ಊಟ ಮುಗಿಸಿ ಹೊರಟೆವು. ದಾರಿ ಉದ್ದಕ್ಕೂ ವಿವಿಧ ಪತ್ರಿಕೆಗಳಲ್ಲಿ ಈವರೆಗೆ ಬಂದ ವರದಿಗಳ ವಿಶ್ಲೇಷಣೆ ನಡೆಯುತ್ತಿತ್ತು. ಉತ್ತರ ಕರ್ನಾಟಕದ ಯಾವ ಭಾಗಕ್ಕೆ ಹೋದರೂ ಎರೆಮಣ್ಣು. ಅದು ಸಾಧಾರಣ ಮಳೆಗೇ ಕೊಚ್ಚೆ ಆಗುತ್ತೆ. ಈಗ ಇಂಥಾ ಜಡಿಮಳೆಗೆ ಹೇಗಿರುತ್ತೋ... ಆ ದೇವ್ರಿಗೇ ಪ್ರೀತಿ.''

ಒಂದೊಂದು ಊರಿನ ಬಹುತೇಕ ಮನೆಗಳು ಕುಸಿದಿವೆ. ಊರು ಅನ್ನೋದು ಹಾಳೂರು ಆಗಿದೆ. ತಮ್ಮ ತಮ್ಮ ಮನೇಲಿ ಸುಖವಾಗಿ ಇದ್ದವ್ರು ಈಗ ಗಂಜಿ ಕೇಂದ್ರದಲ್ಲಿ ಊಟ ತಿಂಡಿಗೆ ದೇಹಿ ಅಂತ ನಿಲ್‌ಬೇಕಾದ ಸ್ಥಿತಿಗೆ ಒಗ್ಗಿಕೋಬೇಕಂದ್ರೆ ಸುಲಭದ ಮಾತಲ್ಲ.

''ಗಂಜಿ ಕೇಂದ್ರಗಳು ಬರೀ ಗಂಜಿ ಕೇಂದ್ರ ಆಗಿದ್ದ್ರೆ ನಡೀತಿತ್ತು. ಅವು ಈಗಂತೂ ಪುಢಾರಿಗಳ, ಸಮಯಸಾಧಕರ ಕೇಂದ್ರ ಆಗಿವೆ. ಅಲ್ಲಿಗೆ ಬಂದದ್ದನ್ನ ಫಲಾನುಭವಿಗಳಿಗೆ ಸರಿಯಾಗಿ ಹಂಚಿದ್ರೆ ಅದೇ ಅವ್ರು ಮಾಡೋ ದೊಡ್ಡ್ ಉಪಕಾರ.



''ಅದೆಲ್ಲಾ ಸುಳ್‌ಬಿಡು... ಇದ್ರಲ್ಲಿ ಒಂದ್‌ಪಾಲು ಜನರಿಗೆ ಮುಟ್ಟಿದ್ರೆ ಒಂಬತ್ತು ಪಾಲು ನಡುವಿನವ್ರ ಪಾಲಾಗಿರತ್ತೆ. ನೋಡಿಲ್ವಾ ತಾವು ಹಂಚೋದ್ರ ಫೋಟೋ ಹೊಡ್ಸಿಕೊಳ್ಳೋಕೆ ಎಲ್ರೂ ಹೇಗೆ ಮುಗಿಬಿದ್ದಿರ್ತಾರೆ ಅಂತ.''

''ವಿಮಾನದಿಂದ ಆಹಾರದ ಪ್ಯಾಕೆಟ್ ಎಸೀತಾ ಇರ್ತೋವಾಗ, ಜನ್ರು ಹೇಗೆ ಅದ್ರ ಹಿಂದಿಂದೆ ಓಡಾಡ್ತಿರ್ತಾರೆ ಅಂತ ಟೀವೀಲಿ ನೋಡುವಾಗ ಸಂಕ್ಟ ಆಗತ್ತೆ... ಅಲ್ಲೂ ಬಲವಿದ್ದವರೇ ಬದ್ಕೋತ್ತಾರೆ. ಉಳಿದವ್ರು ಮುಖಮುಖ ನೋಡ್ಬೇಕು ಅಷ್ಟೇ...''

''ಹೌದು... ಅಂಥಾ ಗುಂಪಲ್ಲಿ ಹುಡುಗರು, ಗಂಡಸ್ರು ಇವ್ರೇ ಹೆಚ್ಚಾಗಿ ಕಾಣೋಕೆ ಸಿಗೋದು. ಹೆಂಗಸ್ರು ಹಿಂದೇನೇ ಉಳ್ದಿರ್ತಾರೆ... ಪಾಪ, ಈ ಮಳೇಲಿ, ಅಪರಿಚಿತ ಜಾಗ್ದಲ್ಲಿ ಹೆಂಗಸ್ರ ಪಾಡು ಎಷ್ಟ್ ಕಷ್ಟ ಇರ್ಬಹುದ್ದು?...''

''ಒಂದ್ ನಿಮಿಷ ಅಲ್ಲೇ ಮೆಡಿಕಲ್ ಶಾಪ್ ಹತ್ರ ನಿಲ್ಲಿಸ್ಪ,'' ಎಂದಳು ಲೀನಾ. ಎಲ್ರೂ ಯಾಕೆ ಎಂದು ಅವಳನ್ನೇ ನೋಡಿದರೂ, ಏನೂ ಮಾತಾಡದೆ, ಇಳಿದಳು. ಬರುವಾಗ ದೊಡ್ಡ ಪ್ಯಾಕೆಟ್ ಒಂದನ್ನು ತಂದಿದ್ದಳು. ಆಗಲೂ ಅದೇನು ಎಂಬ ನಮ್ಮ ಕುತೂಹಲಕ್ಕೆ ಅವಳದು ನಿರುತ್ತರ... ಉದ್ದಕ್ಕೂ ಜಿಟಿಜಿಟಿ ಮಳೆ ಪ್ರಯಾಣವನ್ನು ಪ್ರಯಾಸವಾಗಿಸಿತ್ತು. ನಾವು ಸಂಜೆಯಾಗುವಷ್ಟರಲ್ಲಿ ಗದಗನ್ನು ತಲುಪಿ, ಒಂದು ಹೋಟೆಲ್ ಹಿಡಿದು, ವಿಶ್ರಾಂತಿಗೆ ಧಾವಿಸಿದೆವು. ರಫೀಕ್ ಮತ್ತು ನವೀನ್ ಮಾತ್ರ ತಮ್ಮ ಕ್ಯಾಮರಾ ಹಿಡಿದುಕೊಂಡು, ಊರೊಳಗೆ ಕೆಲವು ಮಾಹಿತಿ ಪಡೆಯಲು ತೆರಳಿದರು. ರಾತ್ರಿ ಹತ್ತಾದರೂ ಅವರಿಬ್ಬರು ಹಿಂದಿರುಗದಾಗ ಗಾಬರಿಯಾಯಿತು. ಮೊಬೈಲ್‌ಗೆ ಕರೆ ಮಾಡಿದರೆ, please check the service ಎಂದೇ ಬರುತ್ತಿತ್ತು. ಕೊನೆಗೆ ನಾವು ಮೂವರೂ ನಾಳೆ ನಸುಕಿನಿಂದ ನಮ್ಮ ಕೆಲಸದಲ್ಲಿ ತೊಡಗುವುದೆಂದು ಉಂಡು ಮಲಗಲು ಹೊರಟೆವು.

ಹಿಡಿದ ಮಳೆ ಇನ್ನೂ ಬಿಟ್ಟಿರಲಿಲ್ಲ... ವಾಚು ನೋಡಿಕೊಂಡರೆ ಗಂಟೆ ಏಳಾಗಿತ್ತು. ಗಡಿಬಿಡಿಯಲ್ಲಿ ಅವರಿಬ್ಬರನ್ನೂ ಎಬ್ಬಿಸಿ, ಬೇಗಬೇಗನೆ ಸಿದ್ಧರಾದೆವು. ಆಗಲೇ ಸಿದ್ಧರಾಗಿ ನಿಂತಿದ್ದ ರಫೀಕ್, ನವೀನ್ ಆ ದಿನದ ಕಾರ್ಯಕ್ರಮವನ್ನು ವಿವರಿಸಿದರು. ಅಲ್ಲಿಂದ ಹದಿನಾರು ಕಿ.ಮೀ. ದೂರದಲ್ಲಿ ದೋಣಿ ಎಂಬ ಊರು. ಅದರ ಅಕ್ಕಪಕ್ಕದ ಹಳ್ಳಿಗಳಿಗೆ ನಮ್ಮ ಭೇಟಿ ನಿರ್ಧಾರವಾಗಿತ್ತು. ಎರಡು ತಂಡವಾಗಿ ನಾವು ಹೋಗಿ ಮಾಹಿತಿ ಪಡೆದುಬರಲು ನಿರ್ಧರಿಸಿದೆವು.

''ಹೋಗುವ ಮುಂಚೆ ಹೊಟ್ಟೆ ತುಂಬ ತಿಂದುಬಿಡಿ. ಅಲ್ಲಿ ನಿಮ್ಗೆ ಏನೂ ಸಿಗೋದಿಲ್ಲ. ಎಲ್ರ ಬ್ಯಾಗಲ್ಲೂ ನೀರಿನ ಬಾಟ್ಲಿ ಇಟ್ಕೊಳ್ಳಿ. ಆದಷ್ಟು ರಫ್ ಅ್ಯಂಡ್ ಟಫ್ ಚಪ್ಪಲ್ ಬಳಸಿ... ಬರೀ ಕೊಚ್ಚೆ...ಕೆಸರು... ಕಾಲು ಹೂತು ಹೋಗತ್ತೆ,'' ಎಂದು ಎಚ್ಚರಿಸಿದರು.

''ಲೀನಾನ ಡ್ರೆಸ್ ಸರಿ, ಮಂಜುಳಾನ ಚೂಡೀದಾರ್ ಕೂಡಾ ಪರ್ವಾಗಿಲ್ಲ... ನೀನು ಈ ಕಾಟನ್ ಸೀರೇಲಿ ಮ್ಯಾನೇಜ್ ಮಾಡೋದು ಕಷ್ಟ... ಯಾಕ್ ನೀನೂ ಬದ್ಲಾಯಿಸಬಾರದು,'' ಎಂದ ನವೀನ್.

''ಇಲ್ಲಿಲ್ಲ.. ನಾನು ಇದ್ರಲ್ಲೇ ಕಂಫರ್ಟಬಲ್. ಅಲ್ದೆ ಹೆಂಗಸ್ರ ಜೊತೆ ಮಾತಾಡ್‌ಬೇಕಾದ್ರೆ, ಅವ್ರು ಫ್ರೀಯಾಗಿ ಮಾಹಿತಿ ನೀಡ್‌ಬೇಕಾದ್ರೆ, ಇಂಥಾ ಡ್ರೆಸ್ ಸಹಕಾರಿ,'' ಎಂದೆ.

## ಬೆಂಗಳೂರು



ಅಂದು ಉದ್ಯಾನವನಗಳ
ಬೀಡಾಗಿದ್ದ ಕೆಂಪೇಗೌಡ
ನಿರ್ಮಿಸಿದ ನಗರಿ
ಇಂದು ಕಪ್ಪು ಹೊಗೆಯನು
ಹೊರಸೂಸುವ ವಾಹನಗಳು
ತುಂಬಿರುವ ರಾಜ್ಯದ
ರಾಜಧಾನಿಯ ನವಿಲುಗರಿ

ಎನ್. ಶ್ರೀನಿವಾಸ್
ಪ್ರಥಮ ದರ್ಜೆ ಸಹಾಯಕ, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ವಿ.ಸಿ.ಫಾರಂ, ಮಂಡ್ಯ

ಹತ್ತು ಕಿಲೋಮೀಟರ್ ಕ್ರಮಿಸಲು ಒಂದು ಗಂಟೆ ಬೇಕಾಯ್ತು. ನಿರ್ದಿಷ್ಟ ಜಾಗದಲ್ಲಿ ವಾಹನ ನಿಲ್ಲಿಸಲು ಹೇಳಿದೆವು. ನಮ್ಮ ವಾಹನ ನಿಲ್ಲುವ ಮೊದಲೇ ಒಂದಷ್ಟು ಹುಡುಗರ ಗುಂಪು ಓಡಿಬಂದು ಮುತ್ತಿಗೆ ಹಾಕಿತು. ಅವರ ನಿರೀಕ್ಷೆ ಹೊತ್ತ ಮುಖಗಳನ್ನು ನೋಡಿದಾಗ, ಒಮ್ಮೆಲೇ ಪೆಚ್ಚಾಯಿತು. ನಾವು ನಮ್ಮ ಹೊಟ್ಟೆಯ ಬಗ್ಗೆ ಮಾತ್ರ ತಲೆ ಕೆಡಿಸಿಕೊಂಡಿದ್ದೆವು. ಹೀಗಾಗಿ ಅವರನ್ನು ಬರಿಗೈಯಲ್ಲಿ ಎದುರುಗೊಳ್ಳುವುದು ಹೇಗೆ ಎಂಬ ಅಳುಕು ನಮ್ಮನ್ನು ಕಾಡಿತು. ಅಷ್ಟರಲ್ಲಿ ಮಂಜುಳಾ ''ಒಂದಷ್ಟು ಬ್ರೆಡ್ ಮತ್ತು ಸ್ನ್ಯಾಕ್ಸ್ ಪ್ಯಾಕೆಟ್ ಇದೆ. ಅವ್ರಿಗೆ ಕೊಟ್ಟುಬಿಡುವ,'' ಎಂದಳು.

''ಅದೊಂದು ಮಾತ್ರ ಮಾಡ್ಬೇಡಾ,'' ಎಂಬ ರಫೀಕ್ ಮಾತಿಗೆ ಅಚ್ಚರಿಗೊಂಡೆವು. ''ಹೀಗೆ ಎಷ್ಟು ಜನ್ರಿಗೆ ಕೊಡ್ತೀರಿ? ಅವ್ರಿಗೆ ನಾವು ಬಂದದ್ ವಿಷಯ ತಿಳಿಸೋಣ. ಇಲ್ಲಾಂದ್ರೆ... ಒಬ್ರಿಗೆ ಕೊಟ್ಟದ್ದು ಗೊತ್ತಾದ್ರೆ ನಾವು ಪರಿಹಾರಕಾರ್ಯದವ್ರು ಅಂತ ತಿಳ್ದು, ತಾರತಮ್ಯ ಮಾಡಿದ್ವಿ ಅಂತ ಕಲ್ಲು ಹೊಡೆದಾರು,'' ಎಂದು ಎಚ್ಚರಿಸಿದ.

ತುಂಬ ಪ್ರಯಾಸದಿಂದ ಅವರಿಗೆ ನಾವು ಬಂದ ಉದ್ದೇಶವನ್ನು ಮನವರಿಕೆ ಮಾಡಿಕೊಟ್ಟು, ಅವರ ಸಹಾಯದಿಂದ ಬೀದಿಬೀದಿಯ ಸರ್ವೇಗೆ ಎರಡು ತಂಡವಾಗಿ ಹೊರಟೆವು. ಹಾಳೂರು ಪದದ ನಿಜವಾದ ಅರ್ಥದ ಅನುಭವವಾಯಿತು. ಅಂತಹ ಜಿನಿಗುಟ್ಟುವ ಮಳೆಯಲ್ಲೂ ಅರೆಬರೆ ಮೈಮುಚ್ಚುವ ಉಡುಗೆಯ ಜನರನ್ನು, ಬಟ್ಟೆಯ ಬಣ್ಣ ಯಾವುದೆಂದು ಹೇಳಲೂ ಆಗದಂಥ ರೀತಿಯ ಉಡುಗೆಯ ಒಡೆಯರನ್ನೂ, ಕಂಕುಳಲ್ಲಿ ಕೂಸುಗಳನ್ನೂ, ಕಣ್ಣುಗಳಲ್ಲಿ ನಿರಾಶೆಯ ಕಾರ್ಮೋಡಗಳನ್ನೂ, ಮನದಲ್ಲಿ ದುಗುಡಗಳ ಮೂಟೆಯನ್ನೂ ಹೊತ್ತ ಹೆಂಗಸರನ್ನು ನೋಡುತ್ತ ಸಾಗಿದೆವು... ''ಅಗೋ... ಅಲ್ಲಿ... ಯಾರದು? ಯಾಕೆ ಹಾಗೆ ಆ ಮುರಿದುಬಿದ್ದ ಮನೇ ಮುಂದೆ ಕೂತಿದ್ದಾರೆ?''

''ಅವ್ವಾರ, ಅವ್ರೀ ಆ ಮನಿ ಒಡಿಯ. ಮೊನ್ನೆ ನಡುರಾತ್ರ್ಯಾಗ ಆ ಮನೀ ಕುಸೀತ್ರಿ... ಒಂದಷ್ಟ್ ಮಂದಿ ಪಾರಾದ್ರೀ... ಅವ್ನ ವಯಸ್ಸಾದ ತಂದಿ ಮಾತ್ರ...''

''ಅಯ್ಯೋ ಪಾಪ... ಮತ್ತೆ.''

''ಇನ್ನೂ ಕುಸ್ದಿರೋ ಮನೀ ಗ್ವಾಡಿ ಮಣ್ಣ ತಗಿಯಾಕ ಟ್ಯಾಕ್ಟರ್ ಬಂದಿಲ್ರೀ. ಹಿಂಗಾಗಿ ಎಲ್ಲಾ ಹಂಗಂಗ ಐತಿ. ... ಅವ ಅದ ಹೊಟ್ಬ್ಯಾನಿ ಹಚ್ಕೊಂಡು ಯಾರು ಎಷ್ಟು ಹೇಳಿದ್ರೂ ಆ ಜಾಗ ಬಿಟ್ಟು ಬರಾಕ ಒಲ್ಲ...''

''ಉಳ್ದವ್ರು...''

''ಅಲ್ಲಿ ಗಂಜಿ ಕೇಂದ್ರದಾಗ ಅದಾರ್ರೀ. ಹೇಣ್ತಿ ಯಾಡ್ ತಿಂಗ್ನ ಬಾಣಂತಿ... ಈ ಥಂಡಿಗೆ ಅಕೀಗೂ ಜ್ವರ ಹಿಡ್ಕೊಂಡೈತ್ರಿ. ಹಿರೇಮಗ ಎಂಟ್ ವರ್ಷದವ ಅದಾನ್‌ರೀ.''

ಹೊರಗಿನ ಯಾವ ವಿದ್ಯಮಾನದ ಅರಿವೂ ಇಲ್ಲದಂತೆ ಗಲ್ಲಕ್ಕೆ ಕೈಹಚ್ಚಿಕೊಂಡು, ಸಣ್ಣ ದಿಬ್ಬದ ಮೇಲೆ ಹನಿಗಣ್ಣಾಗಿ ಕುಂತ ಅವನನ್ನು ಮಾತಾಡಿಸಲು ನವೀನ್ ಆ ಕಡೆ ಸಾಗಿದ. ನಾವು ಮುಂದೆ ಹೊರಟೆವು.

ಗಂಜಿ ಕೇಂದ್ರದ ಸುತ್ತ ದೊಡ್ಡ ಗುಂಪೇ ಸೇರಿತ್ತು. ಎಲ್ಲರೂ ಮಾತಾಡುವವರೇ. ಯಾರು ಯಾರಿಗೆ ಏನನ್ನು ಹೇಳುತ್ತಿದ್ದಾರೆ ಎಂಬುದು ಮಾತ್ರ ಯಾರ ಅರಿವಿಗೂ ಬರುತ್ತಿರಲಿಲ್ಲ. ಕುರಿದೊಡ್ಡಿಯಂತೆ ಜನರನ್ನು ಸಣ್ಣ ಶಾಲೆಯಲ್ಲಿ ತುಂಬಿದ್ದು ಕಣ್ಣಿಗೆ ಬಿದ್ದಿತು...

''ಏನಮ್ಮಾ, ನಿಮ್ದು ಯಾವೂರು? ಇಲ್ಲಿಂದ ಎಷ್ಟ್ ದೂರ?... ನೀವು ಎಷ್ಟ್ ಜನ ಇಲ್ಲಿದ್ದೀರಿ...''

''ಐ... ತಗೀ ತಂಗಿ... ಅದ್ನೆಲ್ಲಾ ಕಟ್ಗೊಂಡು ನೀನೇನ್ ಮಾಡೀ... ನಮ್ ಪಾಡು ಆ ದೇವ್ರಿಗೇ ಪ್ರೀತಿ. ಇದ್ನೆಲ್ಲಾ ನೋಡಾಕಂತಽ ಆತ ಉಳ್ಸ್ಯಾನಲ್ಲ ನನ್ನ.''

''ಇಲ್ಲೆ ಈ ಖೋಲ್ಯಾಗ ಎಷ್ಟ್ ಮಂದಿ ಅದೀರಬೇ... ನಾವು ಹೀಂಗ... ಇಲ್ಲಿಂದ ಬಂದೀ. ಇಲ್ಲೀ ವ್ಯವಸ್ಥಾ ಸರಿ ಅದಾವಾ ಇಲ್ಲೋ... ಏನೇನ್ ಮಾಡ್ಬೇಕು ಅಂತ ಸರ್ಕಾರ್ಕ ವರದಿ ಮಾಡ್ತೀವಿ... ನೀವ್ ತುಸು ಮಾಹಿತಿ ಕೊಟ್ರ ಬೇಸ್ಯಾಗ್ತದ.''

''ನಮ್ ಪಾಡ್ ಕಟ್ಕೊಂಡ್ ನೀವ್ ಏನ್ ಮಾಡೀರಿ? ಹೋಗ್ರತ್ತ... ದಿನಾ ಇದಽ ಆಗೈತಿ. ಅಲ್ಲಿಂದ ಬಂದೀ ಇಲ್ಲಿಂದ ಬಂದೀ ಅಂತಾರ... ಅದೇನೋ ಬರೀತೀವಿ... ಎಲ್ಲಾ ಸುದ್ದಾ ಮಾಡ್ತೀವಿ, ಅನುಕೂಲ ಮಾಡಿಸ್ತೀವಿ ಅಂತಾರ... ಮತ್ತ ಮಾಡೋದಽ ಮಾಡೂದು.''

ಅವಳ ಸಿಟ್ಟು, ಅಸಹನೆಗೆ ಹಿಂಜರಿಯದೆ ಮತ್ತೆ,

''ಈ ಖೋಲ್ಯಾಗ ಎಷ್ಟ್ ಮಂದಿ ಅದೀರಬೇ ?''

''ಎಷ್ಟ್ ಅಂತ ಏನ್ ಹೇಳ್ಲ್ಯವ್ವ... ಕಾಲ್ ಚಾಚಿ ಪಾಡಾಗಿ ಮಕ್ಕೊಳಾಕ ಸುದ್ಧಾ ಜಾಗ ಇರಂಗಿಲ್ಲನೋಡು...''

''ಎಲ್ಲಾರೂ ನಿಮ್ಮ್ ಮನೀಯವ್ರs ಅದೀರ್ರಾ ?''

''ಇಂಥಾ ಹೊತ್ನಾಗ ಯಾರ್ ಯಾರ್ ಮನೀ ಮಂದಿ ಅನ್ನಾಕ ಆದ್ದಾ? ನನ್ನು, ನನ್ನ್ ಒಣಿದೂ, ಆಚೀ ಬೀದೀದೂ ಹೀಂಗ ನಾಕ್ ಸಂಸಾರ ಅದೀವಿ...''

''ಯವ್ವಾ... ಇಂಥ ಸಾಲ್ಯಾಗ ನಿಮ್ಗ ಜಳಕಕ್ಕ ಎಲ್ಲೆ ವ್ಯವಸ್ಥಾ ಮಾಡ್ಯಾರಾ ?'' – ಈ ಪ್ರಶ್ನೆ ಕೇಳುತ್ತಿದ್ದಂತೆ ಅವಳ ಸಿಟ್ಟು ನೆತ್ತಿಗೇರಿತು ಅನಿಸುತ್ತದೆ. ಕೂತಿದ್ದಾಕೆ ದಿಢೀರನೆ ಎದ್ದಾಗ, ನಾವು ಎರಡು ಹೆಜ್ಜೆ ಹಿಮ್ಮೆಟ್ಟಿದೆವು. ಅವಳು ಸೀದಾ ನನ್ನ ಕೈಡಿದುಕೊಂಡು, ಶಾಲೆಯ ಹಿಂಭಾಗಕ್ಕೆ ದರದರನೆ ಎಳೆದುಕೊಂಡುಹೋದಳು. ಲೀನಾ ನನ್ನನ್ನು ಗಾಬರಿಯಿಂದ ಅನುಸರಿಸಿದಳು.

''ಇದs ನೋಡು ನಾವು ಜಳ್ಕ ಮಾಡೂ ಜಾಗ,'' ಎಂದಳು. ನಾವಿಬ್ಬರೂ ಕಕ್ಕಾಬಿಕ್ಕಿಯಾದೆವು. ಬಟ್ಟಾಂ ಬಯಲಿನಲ್ಲಿ ನಿಂತಿದ್ದೆವು.

''ನಮ್ಮ್ ಮಾನ ಮರ್ಯಾದಿ ಎಲ್ಲಾ ಆ ಗಂಗಮ್ಮನs ಕೊಟ್ಕೊಂಡ್ ಹೋಗ್ಯಾಳ. ರಾತ್ರಿ ಬ್ಯಾರೆ ಗಂಡಸ್ರ ಜೋಡಿ ಒಂದs ಖೋಲ್ಯಾಗ ಮಲ್ಕೋಬೇಕು. ನಸುಕು ಹರಿಯೂ ಮುಂದನs ಎದ್ದುಬಿದ್ದು ಸಂಡಾಸ್‌ಕ ಹೋಗಿ ಬರ್ಬೇಕು... ದಾರ್ಯಾಗ ಏನೇನ್ ತುಳೀತೀವೋ ಯಾರಿಗ್ ಗೊತ್ತು... ಅಷ್ಟs ಜಲ್ದಿ ಬಂದು ನಾಕ್ ಚರಿಗಿ ಮೈಮ್ಯಾಲ ಹಾಕ್ಕೋಬೇಕು. ಮತ್ತೆ ಅದs ನಾತ ಬರೂ ಸೀರೀ ಉಟ್ಕೋಬೇಕು... ಒಂದ್ ದಿವ್ಸ ಈ ಮೈಲೆ ಇನ್ನೊಂದ್ ದಿವ್ಸ್ ಇನ್ನೊಂದ್ ಮೈಲೆ ಅದ ಸೀರಿ ಉಟ್ಗೋತೀವಿ. ಇದು ಬಿಟ್ರ ಇನ್ನೊಂದು ಸೀರಿ ಅಷ್ಟ... ಅಯ್ಯ... ನನ್ನ್ ಪಾಡ್ ಇರ್ಲಿ, ಇನ್ನೂ ಬೇಜಾನ್ ಮಂದಿ ಏನೇನ್ ಪಾಡ್ ಪಡ್ತಾರ... ಅದ್ರಾಗ ನಮ್ದು ಒಂದಿಷ್ಟ್ ಅನುಕೂಲ ಅನ್ಬೇಕು.''

''ಯವ್ವಾ... ನಾವು ಬಂದಿರೂದ ಇದ್ನ ತಿಳ್ಕೊಳ್ಳಾಕ. ಇವತ್ತಿನ ಮಟ್ಗಿ ನಿನ್ನ್ ಊಟ ತಿಂಡೀದು ನಾವ್ ನೋಡ್ಕೋತೀವಿ... ನಿಮ್ಗ ವ್ಯವಸ್ಥಾ ಸರಿ ಮಾಡಾಕ ಬರೀತೀವಿ. ನೀನು ನಮ್ ಜೋಡಿ ಬಂದು, ಅದ... ಇನ್ನೂ ಪಾಡ್‌ಪಡ್ತಾರ ಅಂಧ್ಯಲ್ಲ ಅವ್ರ ಹತ್ರ ಕರ್ಕೊಂಡು ಹೋಗವ್ವ.''

''ನಿನ್ ಮಾತ್ ನೋಡಿದ್ರ ನಮ್ಮ್ ಕಡೇಕಿ ಅನಸ್ತೈತ. ಈಕಿ ಯಾರು ?''

''ನಾವೆಲ್ಲಾರೂ ಬ್ಯಾಂಬ್ಯಾರೇ ಉದ್ಯೋಗದಾಗ ಇರೋರು... ಈಕಿ ಲೀನಾ. ಜನರ ಜೋಡೀ ಕೆಲ್ಸ ಮಾಡೋಕಿ. ಬಡ ಹೆಣ್ಮಕ್ಳಿಗೆ ಸ್ವಂತ ಉದ್ಯೋಗಕ್ಕ ಹಚ್ಚೋಕಿ.... ಈಗ ನಮ್ಮನ್ನ ಕರ್ಕೊಂಡ್ ಹೋಗ್ತೀಯಾ... ಅಂದ್ಹಂಗ ನಿನ್ ಹೆಸ್ರ ಕೇಳ್ಲಿಲ್ಲ...''

''ಹೆಸರ್ ಕಟ್ಗೊಂಡ್ ಏನ್ ಮಾಡೀಯವ್ವs... ದಾನವ್ವ ಅಂತ ಇಟ್ಟಾರ. ಬರ್ರಿ... ಆ ಕಡೆ ಒಂದ್ ಬಾಲ್‌ವಾಡಿ ಐತಿ. ಅಲ್ಲಿ ಒಂದಷ್ಟು ಮಂದಿ ಅದಾರ...,'' ಎನ್ನುತ್ತ ಮುಂದೆ ನಡೆದಳು. ನಾವು ಅವಳ ನೆರಳಾದೆವು.

ಕಾಲಿಟ್ಟಲ್ಲೆಲ್ಲ ಕೆಸರು. ಚಪ್ಪಲಿಗಳು ಕೆಸರಲ್ಲಿ ಹೂತು ಹೋಗಿ, ಒಂದೊಂದು ಹೆಜ್ಜೆ ಇಡುವುದೇ ಪ್ರಯಾಸ ವಾಗುತ್ತಿತ್ತು. ಕುಳಿರ್ಗಾಳಿ ಬೀಸಿದಾಗ ಅಂತರಂಗದಿಂದ ನಡುಕ ಹುಟ್ಟುತ್ತಿತ್ತು.

''ಏ... ಒಚ್ಚು ಬಾಗ್ಲು ಒಚ್ಚು...,'' ಎಂಬ ಮಾತು ಕಿವಿಗೆ ಬಿದ್ದೊಡನೆ ನಾವು ಅಲ್ಲೇ ನಿಂತೆವು.

''ರತ್ನವ್ವ... ನಾನಬೇ... ದಾನವ್ವ ಇರೂ ಬಾಗ್ಲ ಒಚ್ಚ್‌ಬ್ಯಾಡ'' ಎಂದಾಗ, ತೆರೆದಿದ್ದ ತಟ್ಟನ್ನು ಮುಚ್ಚಲೆತ್ನಿಸಿದ ಆ ದನಿಯ ಒಡತಿ ರತ್ನವ್ವ ಪ್ರತ್ಯಕ್ಷಳಾದಳು. ಅವಳೊಡನೆ ಮಾತಾಡುತ್ತ ಒಳಗೆ ಇಣುಕಿದೆವು. ರತ್ನವ್ವಳ ಮಗಳು ಹಸಿಮೈ ಬಾಣಂತಿ ಬರಿ ನೆಲದ ಮೇಲೆ ಕೌದಿಯಂಥದ್ದು ಹಾಸಿಕೊಂಡು ನಡುಗುತ್ತ ಮಲಗಿದ್ದಳು. ಐದು ದಿನದ ಅವಳ ಮಗು ಬಟ್ಟೆಯ ಉಯ್ಯಾಲೆಯಲ್ಲಿ ಮಲಗಿತ್ತು. ಜ್ವರ ಮತ್ತು ತೀವ್ರ ರಕ್ತಸ್ರಾವದಿಂದ ಬಾಣಂತಿ ಬಳಲಿದ್ದಳು. ಅವಳಿಗೆ ಯಾವುದೇ ವೈದ್ಯಕೀಯ ಸೌಲಭ್ಯಗಳೂ ತಲುಪಿರಲಿಲ್ಲ. ಲೀನಾ ಅವಳ ಆರೋಗ್ಯ ವಿಚಾರಿಸುತ್ತ, ತನ್ನ ಬ್ಯಾಗಿನಿಂದ ಕೆಲವು ಮಾತ್ರೆ ಮತ್ತು ಔಷಧಿ ಬಾಟಲಿ ಗಳನ್ನು ತೆಗೆದು, ಅವುಗಳನ್ನು ಹೇಗೆ ತೆಗೆದುಕೊಳ್ಳ ಬೇಕೆಂದು ವಿವರಿಸುತ್ತಿದ್ದಳು. ಕೋಣೆಯ ಒಳಗೆಲ್ಲ ಕಣ್ಣಾಡಿಸಿದೆವು. ಕಿಟಕಿಗಳಿಗೆ ಶಟರ್ ಇರಲಿಲ್ಲ. ಕುಳಿರ್ಗಾಳಿ ಬಾರದಿರಲಿ ಎಂದು ಮಾಡಿದ್ದ ಪ್ಲಾಸ್ಟಿಕ್ ಚೀಲದ ತೆರೆಯೂ ಕಿತ್ತುಹೋಗಿತ್ತು... ಒಂದು ಮೂಲೆ ಇರುವುದರಲ್ಲೇ ಬೆಚ್ಚಗಿದೆ ಎಂದು ಬಾಣಂತಿಗೆ ಬಿಟ್ಟುಕೊಟ್ಟಿದ್ದರು. ಒಂದು ಚೀಟಿ ಬರೆದು ಲೀನ ಹುಡುಗನ ಕೈಯಲ್ಲಿ ಕೊಟ್ಟು, ಜೀಪ್ ಡ್ರೈವರಿಗೆ ಕೊಡಲು ಹೇಳಿದಳು. ಸ್ವಲ್ಪ ಹೊತ್ತಿನಲ್ಲಿ ಡ್ರೈವರ್ ಒಂದು ಕಂಬಳಿ ಮತ್ತೊಂದು ಪ್ಯಾಕೆಟ್ ತಂದುಕೊಟ್ಟ. ಕಂಬಳಿಯ ಉಡುಗೊರೆಗೆ ಕಣ್ತುಂಬಿ ಕೊಂಡಳು ಬಾಣಂತಿ. ಆದರೆ ಸ್ಯಾನಿಟರಿ ನ್ಯಾಪ್‌ಕಿನ್ ಬಳಸುವುದು ಗೊತ್ತಿಲ್ಲದ ಆಕೆ ಮುಖಮುಖ ನೋಡಿದಳು.

ಪಕ್ಕದ ಕೋಣೆಯಲ್ಲಿ ಮೂವರು ಯುವತಿಯರು ಮೂರು ದಿನಗಳಿಂದ ಏನನ್ನೂ ತಿಂದಿಲ್ಲ, ಕುಡಿದಿಲ್ಲ ಎಂಬ ವಿದ್ಯಮಾನ ಕಿವಿಗೆ ಬಿತ್ತು. ಅವರನ್ನು ಭೇಟಿಯಾಗಲು ಹೋದೆವು. ಕಳಕವ್ವ, ಲಲಿತವ್ವ, ಬೇಬವ್ವ ಕಳೆದ ಮೂರು ದಿನಗಳಿಂದ ಯಾರೊಡನೆಯೂ ಮಾತಾಡದೆ, ಕೂತಲ್ಲಿಂದ ಏಳದೆ, ಏನನ್ನೂ ತಿನ್ನದೆ ಇದ್ದಾರೆ ಎಂದಾಗ ಕಾರಣ ನಿಗೂಢ ಎನಿಸಿತು. ಯಾರಿಗೂ ನಿರ್ದಿಷ್ಟ ಕಾರಣ ಗೊತ್ತಿರಲಿಲ್ಲ. ನಾವು ಆ ಕೋಣೆಯ ಹೊಸ್ತಿಲಲ್ಲಿ ನಿಲ್ಲುತ್ತಿದ್ದಂತೆ, ''ಬರ್‌ಬ್ಯಾಡಿ ಬರ್‌ಬ್ಯಾಡಿ'' ಎಂದು ಕಿರುಚಿಕೊಂಡರು. ಸೂಕ್ಷ್ಮವಾಗಿ ನೋಡಿದಾಗ, ಅವರೊಂದು ಸೀರೆಯನ್ನು ಮೂಟೆಯಂತೆ ಮಾಡಿಕೊಂಡು ಕೂತದ್ದು ಕಂಡಿತು. ನಮ್ಮ ಜೊತೆಜೊತೆಗೇ ದೊಡ್ಡ ಹಿಂಡೇ ಸೇರಿದ್ದು ನಮ್ಮ ಗಮನಕ್ಕೂ ಬಂದು, ದಾನವ್ವನ ಕಿವಿಯಲ್ಲಿ ಪಿಸುಗುಟ್ಟಿದೆ. ಅವಳು ಸುತ್ತಲಿನ ಎಲ್ಲ ಚಿಳ್ಳೆಪಿಳ್ಳೆಗಳನ್ನೂ ಓಡಿಸಿದಳು. ಹೆಂಗಸರು ನಮ್ಮನ್ನು ಅನುಮಾನದಿಂದ ನೋಡುತ್ತ ಮೂಲೆ ಸೇರಿದರು. ಕೊನೆಗೆ ನಾವು ಮೂವರೇ ಆದಾಗ, ಆ ಹುಡುಗಿಯರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವ ಪ್ರಯತ್ನ ಮಾಡಿದೆವು.

''ಯಾಕಮ್ಮ ಊಟ ಮಾಡ್ತಿಲ್ಲ?''

''.....''

''ಏನಾದ್ರೂ ಗಾಬ್ರಿ ಬಿದ್ದಿದ್ದೀರಾ ?''

''.....''

''ನಿಮ್ಮನ್ ನೋಡಿದ್ರೆ ಈಗ್ಲೋ ಆಗ್ಲೋ ಸುಸ್ತಾಗಿ ಬೀಳೋ ಹಾಗೆ ಆಗಿದ್ದೀರಿ. ಯಾಕೆ ಈ ಹಟ ಮಾಡ್ತೀರೀ ?

''.....''

''ನೀವು ನಿಮ್ಮ್ ಸಮಸ್ಯೆ ಹೇಳಿದ್ರೆ... ಏನಾದ್ರೂ ಸಹಾಯ ಮಾಡ್ಬಹುದು. ಇಲ್ಲಿದ್ದಾರಲ್ಲಾ, ಲೀನಾ ಅಂತ. ಅವ್ರಿಗೆ ಇಲ್ಲಿನ್ ಅಧಿಕಾರಿಗಳೆಲ್ಲ ಗೊತ್ತು,'' ಎಂದು

## ಎಂಥಾ ವಿಸ್ಮಯ !



* ಆಫ್ರಿಕದ ಒಂದು ಮಾದರಿ ಇರುವೆಗಳು ೨೦ ದಶಲಕ್ಷ ಸಂಖ್ಯೆಯಲ್ಲಿ ಜೊತೆಗೂಡಿ ಬಾಳುತ್ತಿರುತ್ತವೆ.
* ಅತ್ಯಂತ ಸಣ್ಣ ಆಂಟಿಲೋಪ್ (ಹುಲ್ಲೆ) ಮರಿ ಎಷ್ಟು ಚಿಕ್ಕದಾಗಿರುತ್ತದೆಂದರೆ ಅದನ್ನು ನಮ್ಮ ಅಂಗೈ ಮೇಲೆ ಇರಿಸಿಕೊಳ್ಳಬಹುದು.
* ಜಿರಾಫೆಯ ಕತ್ತು ತುಂಬ ಉದ್ದ ಎಂಬುದು ಗೊತ್ತಷ್ಟೆ. ಆದರೆ ಅದರ ಆ ಉದ್ದ ಕತ್ತಿನಲ್ಲಿ ಎಷ್ಟು ಮೂಳೆಗಳಿರುತ್ತವೆ ಗೊತ್ತೆ? – ನಮ್ಮ ಕತ್ತಿನಲ್ಲಿರುವಷ್ಟೆ - ಏಳು ಮೂಳೆಗಳು !
* ಧ್ರುವೀಯ ಕರಡಿಗಳು ಬೆಳ್ಳಗೆ ಕಾಣುತ್ತವಷ್ಟೆ. ಆದರೆ ಅದರ ಮೈ ಬಣ್ಣವೇನೂ ಬಿಳಿಯದಲ್ಲ. ಅದರ ಮೈಮೇಲೆ ತುಂಬಿರುವ ಕೂದಲುಗಳು ತೆಳುವಾಗಿದ್ದು ಅವುಗಳ ಟೊಳ್ಳು ನಳಿಕೆಗಳು ಗಾಳಿಯಿಂದ ಕೂಡಿದ್ದು ಬೆಳ್ಳಗೆ ಕಾಣುತ್ತವೆ.
* ಜಲಚರ ಸ್ತನಿ ನೀರು ನಾಯಿಗಳು ಸಮುದ್ರದಲ್ಲಿ ನೀರಿನ ಮೇಲೆ ನಿದ್ರಿಸುವಾಗ ತೇಲಿಹೋಗದಿರಲೆಂದು ತಮ್ಮ ಮೈಸುತ್ತ ಸಮುದ್ರದ ಹುಲ್ಲು ಜೊಂಡುಗಳನ್ನು ಸುತ್ತಿ ಕೊಂಡಿರುತ್ತವೆ.
* ದೈತ್ಯಾಕಾರದ ಬಿಳಿ ಷಾರ್ಕ್ ಮೀನು ಸದಾ ಈಜುತ್ತಲೇ ಇರಬೇಕು. ಇಲ್ಲದಿದ್ದರೆ ಅದು ನೀರಿನಲ್ಲಿ ಮುಳುಗಿಹೋಗುತ್ತದೆ.
* ಜೇನುಹುಳುಗಳ ಕಣ್ಣುಗುಡ್ಡೆಗಳ ಮೇಲೂ ಕೂದಲು ಬೆಳೆದಿರುತ್ತದೆ !
* ಕೆಲವು ಜಾತಿಯ ಕೋತಿಗಳ ಗ್ರಾಹಕ ಬಾಲವು ಅವಕ್ಕೆ ಒಂದು ಹೆಚ್ಚಿನ ಕೈ ಆಗಿ ನೆರವಾಗುತ್ತದೆ.
* ಕೆಲವು ಬಗೆಯ ಜೇಡರ ಹುಳುಗಳು ಮೀನುಗಳನ್ನು ಹಿಡಿದು ತಿನ್ನಬಲ್ಲವು.

ವಿವಿಧ ಮೂಲಗಳಿಂದ: ಕೆ. ಎಲ್. ಗೋಪಾಲಕೃಷ್ಣ ರಾವ್

ಸಣ್ಣದೊಂದು ಸುಳ್ಳು ಹೇಳಿದೆ.

''ಹಂಗಾ ? ಖರೇನಾ ?''

ಮಾತಾಡಿದವರು ಯಾರೆಂದು ನೋಡಿದೆ. ೧೬-೧೭ರ ಆಸುಪಾಸಿನ ಲಲಿತ ಮೌನ ಮುರಿದಿದ್ದಳು. ಅವಳಿಗೆ ಧೈರ್ಯ ಹೇಳಿ ಮಾತಾಡಿಸತೊಡಗಿದೆವು.

''ನಿಂಗೆ ಹಸಿವೆ ಆಗ್ತಿಲ್ವಾ? ನೀರು ಕುಡೀದೆ ಹೇಗಿರ್ತಿ? ನಿನ್ ತಾಯಿ ಎಷ್ಟ್ ನೊಂದ್‌ಕೊಂಡಿದ್ದಾರೆ.''

''ಅವ್ರಿಗೆ ಗೊತ್ತು.''

''ಏನ್?''

''ಯಾಕ್ ಉಣ್ತಿಲ್ಲ ಅಂತ.''

ಈಗ ಬೆರಗಿನಿಂದ ಅವಳ ತಾಯಿಯತ್ತ ನೋಡಿದೆವು. ನೀರು ಕುಡಿದರೆ, ಊಟ, ತಿಂಡಿ ತಿಂದರೆ ಪ್ರಕೃತಿ ಕರೆಯನ್ನು ತಡೆಯುವುದು ಹೇಗೆ ಎಂಬುದಕ್ಕಾಗಿ ಅವಳು ಹಟ ಹಿಡಿದದ್ದು ತಿಳಿದು ದಂಗಾಗಿಹೋದೆವು.

''ಯಾಕ, ಇಲ್ಲಿ ಸಂಡಾಸ್ ಇಲ್ಲೇನ್ ? ಹೋಗ್ಲಿ ಹೆಣ್ಮಕ್ಕಿಗೆ ಬಯಲ್ ಕಡೆ ಹೋಗಾಕ ಜಾಗಾನೂ ಇಲ್ವಾ ?''

''ಆ ಸುದ್ದಿ ಯಾಕ್ ಎತ್ತ್‌ತೀರಿ ? ಬಯಲ್ ಕಡೆ ಹೋಗಾಕ್ ಬಯಲ್ ಎಲ್ಲೈತಿ ? ಎಲ್ಲಿ ನೋಡಿದ್ರೂ ಗಂಗವ್ವನs. ಆಕಿ ಮುನಿದ್ರ ನಾವ್ ಬದ್ಕಾಕ ಆದ್ದಾ?''

''ಅಲ್ಲ ದಾನವ್ವ, ಹಂಗಂದ್ರೆ...''

''ಹೊರ್ಗಿಂದ ನೋಡ್ ಹೋದ್ರ ಏನ್ ಬಂತು... ಈ ಕಡೆ ಬರ್ರಿ... ಇಲ್ಲಿ ನೋಡ್ರೀ... ಇದs ಬಯಲು.''

ನಮ್ಮ ಎದೆ ಧಸಕ್ಕೆಂದಿತು. ಕೆರೆ, ಹಳ್ಳ, ತಿಟ್ಟು, ಬಯಲು ಎಲ್ಲ ಒಂದೇ ಆಗಿಬಿಟ್ಟಿವೆ. ಅದರ ತುಂಬೆಲ್ಲ ಊರಿನ ಎಲ್ಲರ, ಎಲ್ಲ ವಿಧದ ಕಸ-ಕೊಳೆಗಳೂ ತೇಲುತ್ತಿವೆ. ಹೊಟ್ಟೆಯೊಳಗಿಂದ ಎಲ್ಲವೂ ಎದ್ದುಬಂದಂತಾಯ್ತು. ''ಮತ್ತೆ... ಮತ್ತೆ ನೀವೆಲ್ಲ...'' ಎಂದು ಮಾತನ್ನು ನುಂಗಿಕೊಂಡೆವು.

''ಮೊದಲ ದಿನ ಸೊಂಟದಮಟ ನೀರಿತ್ತು, ಈಗ ಮೊಣಕಾಲಮಟ ಇಳಿದೈತಿ. ಅಲ್ಲೇ ಕತ್ಲಾಗ ಎಲ್ಲಾ ನಿಂತ್ಕೊಂಡ. ಬ್ಯಾರೆ ದಾರಿ ಏನಿತ್ತು ?''

''ಮೂವರೂ ಅದ್ಕs ಹಿಂಗ ಕುಂತಾರಾ ?...''

''ಇಲ್ಲ... ಇನ್ನಿಬ್ರು ಮುಟ್ಟಾಗ್ಯಾರ. ಈ ಚಳೀ ಮಳೀಗೆ, ಎಷ್ಟ್ ಬಟ್ಟೀ ಬದ್ಲಾಯಿಸ್ತಾರ ? ಎಲ್ಲಂತ ಬದಲಾಯಿಸ್ತಾರ ? ಎಲ್ರೂ ಇದ್ದದ್ ಇದ್ದಂಗ ಮನೀ ಬಿಟ್ಟು ಬಂದೀವಿ. ಅವ್ರು ಇವ್ರು ಸಹಾಯ ಮಾಡಿದ್ರೂ... ಈಗ ಎಲ್ಲಾರೂ ನೈಲಾನ್ ಪತ್ಲ ಉಡೂಕ ಶುರುಮಾಡಿ, ಇಂಥಾ ಹೊತ್ನಾಗ ಅದು ಉಪಯೋಗಕ್ಕೆ ಬರತ್ತಾ? ಒಗದ್ ಅರಿವೀ ಒಣಗ್ಸುದಾದ್ರೂ ಎಲ್ಲೆ? ಸೀರೀನ ಉಂಡಿ ಮಾಡ್‌ಮಾಡ್ಕೊಂಡು ಅದ್ರ ಮ್ಯಾಲೇ ಕುಂತಾರ.''

''ಲೀನಾ... ಯಾಕೋ ಎಲ್ಲಾ ನೋಡ್ತಾ, ಕೇಳ್ತಾ, ನಂಗೆ ಭಯದಿಂದ ಹೊಟ್ಟೆ ಒಳ್ಗೆ ಒಂಥರಾ ಆಗ್ತಾ ಇದೆ. ಟಾಯ್ಲೆಟ್‌ಗೆ ಹೋಗ್ಬೇಕಾಗಿ ಬಂದ್ರೆ ಏನೇ ಮಾಡೋದು... ಮೊದ್ಲು ಇಲ್ಲಿಂದ ಏಳುವ... ಏನ್ ರಿಪೋರ್ಟ್ ಮಾಡೋದು, ಅದನ್ನ ಹೋಟೆಲ್‌ನಲ್ಲಿ ಮಾಡೋಣ ನಡಿ,'' ಎಂದೆ.

ನರಕಕ್ಕೆ ಹೋಗಿ ಬಂದಂತಾಯ್ತು... ನಡಿ ಹೋಗೋಣ... ಇಲ್ಲಿಯ ಡಿ.ಸಿ. ಲೇಡಿ ಇರ್ಬೇಕಲ್ಲಾ? ಅವ್ರೇನು ಇಲ್ಲಿಗೆ ಬಂದಿದ್ದಾ ಇಲ್ವಾ ಅಂತ ಅನುಮಾನ ಆಗುತ್ತೆ... ಮಹಿಳಾ ಅಧಿಕಾರಿ ಇದ್ರೆ, ಮಹಿಳೆಯರ ಕಷ್ಟ ಅರ್ಥಮಾಡ್ಕೋತಾರೆ ಅನ್ಕೋತೀ... ಇಲ್ಲಿ ನೋಡಿದ್ರೆ... ಎಂದವಳೇ, ಮೂವರೂ ಕೂಗಿಕೊಳ್ಳುತ್ತಿದ್ದರೂ ಸೀದಾ ಕೋಣೆಯ ಒಳಗೆ ಹೋಗಿ, ಅವರಿಗೆ ಸ್ಯಾನಿಟರಿ ನ್ಯಾಪ್ಕಿನ್ ಬಳಸುವುದನ್ನು ತಿಳಿಸಿದಳು. ಬ್ಯಾಗಿನಿಂದ ಮಾತ್ರೆಯೊಂದನ್ನು ತೆಗೆದು ಲಲಿತಳ ಕೈಗೆ ಕೊಟ್ಟು, ''ತಗೋ, ಇದನ್ನ ತಗೊಂಡ್ರೆ ನಿನ್ನ ಸಮಸ್ಯೆ ಪರಿಹಾರ ಆಗುತ್ತೆ. ಮೊದ್ಲು ಒಂದಿಷ್ಟು ನೀರು ಕುಡಿ, ಈ ಬ್ರೆಡ್ ತಿನ್ನು... ಇವ್ರಿಗೆ ಒಂದಿಷ್ಟು ಕಾಫಿ ಏನಾದ್ರೂ ಸಿಕ್ಕೀತಾ ನೋಡ್ರಿ ದಾನಮ್ಮ,'' ಎಂದಳು. ಲೀನಾಳ ಸಮಯಪ್ರಜ್ಞೆಗೆ, ಮುಂದಾಲೋಚನೆಗೆ ತಲೆಬಾಗಿದೆ.

ಸಮಯ ಸಾಕಷ್ಟಾಗಿತ್ತು. ಭಾರವಾದ ಮನದೊಂದಿಗೆ ಜೀಪಿನತ್ತ ಮುಖ ಮಾಡಿದೆವು. ಅತ್ತ ರಫೀಕ್, ನವೀನ್, ಮಂಜುಳಾ ನಮಗಾಗಿ ಕಾಯುತ್ತಿದ್ದರು. ಅವರು ಮುರಿದುಬಿದ್ದ ಮನೆಯ ಪುರುಷರ ಜೊತೆ ನಡೆಸಿದ ಮಾತುಕತೆಯ ವಿವರ ನೀಡುತ್ತಿದ್ದರು. ಮಳೆನೀರು ಸೋರಿ ಚೀಲದಲ್ಲಿದ್ದ ಜೋಳ, ಗೋಧಿ ಮೊಳಕೆ ಬಂದದ್ದನ್ನು ಕಂಡು ಹೌಹಾರಿದವರ ಕತೆ, ಮುರಿದುಬಿದ್ದ ಮನೆಯ ಜಂತಿಗಳನ್ನೇ ಮುರಿದುಕೊಂಡು ಹೋದುದನ್ನು ಕಂಡು ಹಳಹಳಿಸಿದವರ ಕತೆ, ಜೀವಮಾನದ ಶ್ರಮದ ಫಲವಾದ ಮನೆ ಮುರಿದುಬಿದ್ದಾಗ ಕುಸಿದುಹೋದವರ ಕಥೆ... ಹೀಗೇ ನೂರಾರು ಇದ್ದವು.

''ಸ್ವಚ್ಛತೆ ಬಗ್ಗೆ, ಜನರ ಖಾಸಗೀತನದ ಬಗ್ಗೆ ಒಂದಿಷ್ಟು ಸೂಕ್ಷ್ಮತೆ ನಮ್ಮ ವ್ಯವಸ್ಥೆಗೆ ಇಲ್ಲ. ಎಲ್ಲಿ ನೋಡಿದ್ರೂ ಕಸ.ಕಸ...ಕಸ. ಎಷ್ಟೋ ಮಂದಿ ಊಟ ಇಲ್ದೆ ಕಾಲ ಕಳ್ದಿದ್ದಾರೆ, ಎಷ್ಟೋ ಮಂದಿ ಮಲ್ಗಾಗ ಒಣ ಜಾಗ ಇಲ್ದೆ ಕುಂತೇ ಬೆಳಕು ಮಾಡಿದ್ದಾರೆ. ಒಂದು ವಾರದಿಂದಾ ಪರಿಹಾರ ಕೇಂದ್ರಗಳು ದುಡೀತಾ ಇದ್ರೂ ಈ ಅಧ್ವಾನವಲ್ಲಾ'' ಎಂದಳು ಮಂಜುಳಾ.

''ಅದಷ್ಟು ಸುಲಭಾ ಅಲ್ಲ, ಇಂಥ ಬಿಕ್ಕಟ್ಟುಗಳು ಬಂದಾಗ ಹ್ಯಾಗೆ ಕಾರ್ಯಾಚರಿಸಬೇಕು ಎಂಬ ಬಗ್ಗೆ ಯಾರಿಗೂ ಸಿದ್ಧತೆಗಳಾಗ್ಲಿ, ತರಬೇತಿಗಳಾಗ್ಲಿ ಇಲ್ಲ. ಯಾರೋ ಒಂದಷ್ಟು ಉತ್ಸಾಹಿಗಳು ಮುಂದೆ ಬರ್ತಾರೆ, ತಮಗೆ ತಿಳಿದ್ದಾಗೆ ಕಾರ್ಯಾಚರಿಸ್ತಾರೆ...''

''ಸರಕಾರಿ ಅಧಿಕಾರಿಗಳು ಏನ್ ಮಾಡ್ತಾ ಇರ್ತಾರ್ರೀ ?''

''ಎಲ್ರೂ ಕೆಟ್ಟವ್ರು ಇರೋದಿಲ್ಲ... ಅವ್ರನ್ನ ಅವರ ವಿವೇಚನೆ ಪ್ರಕಾರ ಕೆಲ್ಸ ಮಾಡ್ಲಿಕ್ಕೆ ರಾಜಕೀಯದ ಮಂದಿ ಬಿಡ್ಬೇಕಲ್ಲ. ನೋಡಿಲ್ವಾ, ಅಲ್ಲಿ ಒಂದು ಪಕ್ಷದವರು ಪರಿಹಾರ ಕೇಂದ್ರದ ಮುಖಂಡತ್ವ ವಹಿಸಿಕೊಂಡು, ತಮ್ಮ ಬೆಂಬಲಿಗರಿಗೆ ಮಾತ್ರ ಆದ್ಯತೆ ಮೇಲೆ ಅನುಕೂಲ ಮಾಡಿಕೊಡ್ತಿರೋದನ್ನ.''

''ಅವ್ರು ಕುಡಿಯೋ ನೀರು ನೋಡ್ಬೇಕಿತ್ತು ನೀನು... ಕೆಂಪಗೆ... ಅದನ್ನ ಕುಡ್ದು ಬದ್ಕೋಕ್ ಇದೆನಾ? ಅಲ್ಲಿ ಹರೀತಿರೋ ಮಳೆ ನೀರ್ಗೂ, ಕುಡಿಯೋ ನೀರ್ಗೂ ವ್ಯತ್ಯಾಸಾನೇ ಇರ್ಲಿಲ್ಲ. ಹೈಜೀನಿಕ್ ಬಗ್ಗೆ ಮಾತಾಡೋಹಂಗೆನೇ ಇಲ್ಲ.''

ಹಾಗೆ ಹೇಳುತ್ತಿದ್ದಂತೆ ದಾನವ್ವನ ಮಾತು ನೆನಪಾಯಿತು. ಮಳೆನೀರಲ್ಲೇ ನಿಂತು ಕೊಂಡು, ಅಲ್ಲೇ ಎಲ್ಲವೂ ನಡೆಸಬೇಕಾಗಿ ಬಂದ ಜನ, ಅದು ಗೊತ್ತಿದ್ದೂ ಸುತ್ತಮುತ್ತ ಅದೇ ನೀರಲ್ಲಿ ಓಡಾಡಬೇಕಾದ ಸ್ಥಿತಿ ನೆನಪಾಗಿ ಮೈ ಜುಂ ಎಂದಿತು.

ಸಂಜೆ ಡಿ.ಸಿ. ಜೊತೆಗಿನ ಸಂದರ್ಶನವನ್ನು ಪ್ರಯಾಸದಿಂದ ನವೀನ್ ನಿಗದಿ ಮಾಡಿದ್ದ. ಅಲ್ಲಿ ಚರ್ಚಿಸಬೇಕಾದ ವಿಚಾರಗಳ ಕುರಿತು ಎಲ್ಲ ಮಾತಾಡಿಕೊಳ್ಳುತ್ತಿದ್ದೆವು. ಜೀಪ್ ಸ್ಟಾರ್ಟ್ ಆಯಿತು. ದೂರದಲ್ಲಿ ದಾನವ್ವನ ಮುಖ ಕಂಡ ತಕ್ಷಣ, ಜೀಪಿಂದ ಇಳಿದು, ಬ್ಯಾಗ್ ತುಂಬ ತುಂಬಿದ್ದ ಎಲ್ಲ ಕಾಟನ್ ಸೀರೆಗಳನ್ನೂ ಒಂದು ಚೀಲಕ್ಕೆ ಹಾಕಿ ದಾನವ್ವನ ಕೈಗಿತ್ತು, ''ನನಗಿಂತ ನಿಮಗ ಇವುಗಳ ಅಗತ್ಯ ಭಾಳ ಅದ... ತಗೋ ದಾನವ್ವ. ನೀನೇ ಯಾರಿಗೆ ಬೇಕೋ ನೋಡಿ ಕೊಡು'' ಎಂದೆ. ಅವಳು ಮಾತಿಲ್ಲದೆ ಗಂಜಿ ಹಾಕಿ ಇಸ್ತ್ರಿ ಮಾಡಿದ್ದ ಸೀರೆಗಳನ್ನೇ ನೋಡುತ್ತಿದ್ದಳು. ಜೀಪು ಮುಂದಕ್ಕೆ ಚಲಿಸುತ್ತಿದ್ದಂತೆ ಕೊನೆಯ ಬಾರಿಗೆ ಹಿಂತಿರುಗಿ ನೋಡಿದೆ. ಕಣ್ಣು ಮಿಟುಕಿಸುವಷ್ಟರಲ್ಲಿ ಅಲ್ಲೇ ನಿಂತಿದ್ದ ಪಡ್ಡೆ ಹುಡುಗರು ದಾನವ್ವನ ಕೈಯ ಚೀಲದಿಂದ ಒಂದೊಂದು ಸೀರೆಯನ್ನು ಕಸಿದುಕೊಂಡು, ಮುದುರಿ ಕಂಕುಳಿಗೇರಿಸಿ ಓಡುತ್ತಿದ್ದರು.



ಡಾ|| ಸಬಿಹಾ ಭೂಮೀಗೌಡ
ಕನ್ನಡ ಪ್ರಾಧ್ಯಾಪಕರು, ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳ ಗಂಗೋತ್ರಿ, ಮಂಗಳೂರು - ೫೭೪ ೧೯೯

ಇಂದು ಕೇಂದ್ರ ಸರ್ಕಾರವು ನಮ್ಮ ಸಾರ್ವಜನಿಕ ವಲಯದಲ್ಲಿ ಪ್ರಧಾನ ಪಾತ್ರ ವಹಿಸುತ್ತಿದೆ. ಜಿಲ್ಲಾ ಕಚೇರಿಗೋ, ಇತರ ರಾಜ್ಯ ಸರ್ಕಾರಿ ಇಲಾಖೆಗೋ ನಾವು ಹೋಗುವುದು ಅಪರೂಪಕ್ಕೊಮ್ಮೆ ಮಾತ್ರ, ಆದರೆ ಅಂಚೆ ಕಚೇರಿ, ರೈಲ್ವೆ, ಆದಾಯ ತೆರಿಗೆ, ಬ್ಯಾಂಕ್‌ಗಳೊಂದಿಗೆ ದಿನನಿತ್ಯ ವ್ಯವಹರಿಸಿವುದು ಅನಿವಾರ್ಯ ಎನಿಸಿದೆ. ಇಲ್ಲಿಯ ನೌಕರರಿಗೆ ಕನ್ನಡ ಬಾರದಿದ್ದರೆ, ನಮೂನೆಗಳು ಕನ್ನಡದಲ್ಲಿರದಿದ್ದರೆ ಕನ್ನಡಿಗರನ್ನು ಅನಾಥಪ್ರಜ್ಞೆ ಕಾಡುತ್ತದೆ. ಇಲ್ಲೆಲ್ಲಾ ಕನ್ನಡವನ್ನು ವ್ಯವಹಾರ ಭಾಷೆಯಾಗಿ ಮಾಡಲು ಏನು ಪ್ರಯತ್ನ ನಡೆದಿದೆ, ಎಂದಾಗ ನಿರಾಸೆಯಾಗುತ್ತದೆ.

# ಸಾರ್ವಜನಿಕ ವಲಯ - ಕನ್ನಡ ಬಳಕೆ

ರಾ. ನಂ. ಚಂದ್ರಶೇಖರ

ಸಾರ್ವಜನಿಕ ವಲಯದ ವ್ಯಾಪ್ತಿ ವಿಸ್ತಾರವಾದದ್ದು. ರೈಲ್ವೆ, ಬ್ಯಾಂಕ್, ಅಂಚೆ, ಉದ್ಯಮ, ಆದಾಯ ತೆರಿಗೆ, ಸೇವಾ ತೆರಿಗೆ, ಸೀಮಾ ಸುಂಕದಂತಹ ಹಲವು ಇಲಾಖೆಗಳು ಕೇಂದ್ರ ಸರ್ಕಾರದ ಸಾರ್ವಜನಿಕ ವಲಯಗಳು. ರಾಜ್ಯ ಸರ್ಕಾರದಡಿ ಬರುವ ಸಾರಿಗೆ, ಸಹಕಾರಿ ಬ್ಯಾಂಕ್, ನಿಗಮ, ಮಂಡಳಿ, ಕಾರ್ಖಾನೆಗಳೂ ಸಾರ್ವಜನಿಕ ವಲಯದ ವ್ಯಾಪ್ತಿಗೆ ಬರುತ್ತವೆ. ಇದರಾಚೆಗೆ ಅಂಗಡಿ, ವಾಣಿಜ್ಯ ವಲಯಗಳೂ ಸೇರುತ್ತವೆ. ಸಾರ್ವಜನಿಕರು ವ್ಯವಹರಿಸುವ ಎಲ್ಲ ವಲಯಗಳೂ ಇದರಲ್ಲಿ ಸೇರುತ್ತವೆ. ಇಷ್ಟೊಂದು ವಿಸ್ತಾರವಾದ ವಲಯದಲ್ಲಿ ಕನ್ನಡದ ಬಳಕೆ ಬಗ್ಗೆ ವಿವೇಚಿಸುವುದು ಅಷ್ಟು ಸುಲಭವಲ್ಲ.

ಸಾರ್ವಜನಿಕ ವಲಯದಲ್ಲಿ ಕನ್ನಡ ಬಳಕೆ ಬಗ್ಗೆ ವಿವೇಚಿಸಬೇಕಿರುವುದೇ ವಿಷಾದದ ಸಂಗತಿ. ಕರ್ನಾಟಕದಲ್ಲಿ ಸಾರ್ವತ್ರಿಕವಾಗಿ ಕನ್ನಡ ಭಾಷೆಗೆ ಸಿಗಬೇಕಿದ್ದ ಸ್ಥಾನ-ಮಾನಗಳು ದೊರೆತಿದ್ದರೆ, ಕನ್ನಡ ಭದ್ರವಾಗಿ ನೆಲೆಯೂರುತ್ತಿತ್ತು. ಆಗ ಇಂತಹ ಚರ್ಚೆಯ ಅವಶ್ಯಕತೆಯೇ ಇರುತ್ತಿರಲಿಲ್ಲ. ಜನ ತಂತಮ್ಮ ಭಾಷೆಯಲ್ಲಿ ವ್ಯವಹರಿಸುವುದು ಸಹಜ ಕ್ರಿಯೆ. ಆದರೆ, ಅದಕ್ಕೆ ಅವಕಾಶ ನಿರಾಕರಿಸುವುದು ಅಷ್ಟೇ ಅಸಹಜ, ಅನ್ಯಾಯ. ನೆಲದ ಭಾಷೆ ಸಾರ್ವತ್ರಿಕವಾಗಿದ್ದುದಕ್ಕೆ ಇತಿಹಾಸದಲ್ಲಿ ಹಲವು ಪುರಾವೆಗಳಿವೆ. ಆಂಗ್ಲರ ಆಗಮನಕ್ಕೆ ಮುನ್ನ ಕನ್ನಡವು ನಾಡಿನ ಎಲ್ಲ ರಂಗಗಳಲ್ಲೂ ಸಾರ್ವತ್ರಿಕವಾಗಿ ಬಳಕೆಯಾಗುತ್ತಿತ್ತು.

ಆಂಗ್ಲರ ಆಗಮನದೊಂದಿಗೆ ಬೃಹತ್ ಕೈಗಾರಿಕೆ, ರೈಲುಗಳೂ ಬಂದವು. ಅವರ ಯಂತ್ರ-ತಂತ್ರ ಸಂಸ್ಥೆಗಳನ್ನು ಒಪ್ಪಿಕೊಂಡ ನಾವು ಅನಿವಾರ್ಯವಾಗಿ ಅವುಗಳ ನಿರ್ವಹಣೆಗೆ ಇಂಗ್ಲಿಷನ್ನು ಅಪ್ಪಿಕೊಳ್ಳುವುದು ಅನಿವಾರ್ಯವಾಯಿತು. ಶಿಕ್ಷಣದಲ್ಲಿ ಇಂಗ್ಲಿಷ್ ಪ್ರವೇಶದೊಡನೆ ಅದರ ಬಳಕೆ ಪ್ರತಿಷ್ಠೆಯ ಪ್ರತೀಕವಾಯಿತು. ಪಶ್ಚಿಮದ ಸಂಪರ್ಕದಿಂದ ತಂತ್ರಜ್ಞಾನ, ವ್ಯವಹಾರ ಪದ್ಧತಿಗಳು, ವಿಚಾರಗಳು ನಮ್ಮ ಜ್ಞಾನದ ಕ್ಷಿತಿಜವನ್ನು ವಿಸ್ತರಿಸಿದ್ದಲ್ಲದೆ ಬದುಕಿಗೆ ಹೊಸ ಆಯಾಮವನ್ನು ತಂದುಕೊಟ್ಟವು. ದುರಂತವೆಂದರೆ ನಾವು ಅವರಿಂದ ಪಡೆದ ಜ್ಞಾನವನ್ನು ಅವರ ಭಾಷೆಯಲ್ಲೇ ಸ್ವೀಕರಿಸಿದ್ದರಿಂದ ನಿಧಾನವಾಗಿ ಕನ್ನಡಿಗರಲ್ಲಿ ನಮ್ಮ ಭಾಷೆಗೆ ಹೊಸ ವಿಚಾರಗಳನ್ನು ಅಳವಡಿಸಿಕೊಳ್ಳುವ ಸಾಮರ್ಥ್ಯ ಇಲ್ಲವೆಂಬ ಕೀಳರಿಮೆ ಬೆಳೆಯಿತು. ಅಂದು ಇಡೀ ತಂತ್ರಜ್ಞಾನವನ್ನು ಕನ್ನಡದಲ್ಲಿ ತರುವುದು, ಅಭಿವ್ಯಕ್ತಿಸುವುದು, ಪಾರಿಭಾಷಿಕ ಪದಗಳನ್ನು ಸೃಷ್ಟಿಸುವುದು ಸುಲಭದ ಕೆಲಸವಾಗಿರಲಿಲ್ಲ.

ಆದರೆ, ಹೊಸ ಸಂಗತಿಗಳನ್ನು ಕನ್ನಡೀಕರಿಸುವ ಯತ್ನ ಮಾಡದೆ ಸಾರಾಸಗಟಾಗಿ ಇಂಗ್ಲಿಷ್ ಪದಗಳನ್ನು ಸ್ವೀಕರಿಸಿದ್ದರಿಂದ ಕನ್ನಡ ತಾಂತ್ರಿಕವಾಗಿ ಬೆಳೆಯುವುದು ಕಷ್ಟವಾಯಿತು. ಇದು ಸಾಲದೆಂಬಂತೆ, ಅನ್ಯ ಪ್ರಾಂತೀಯರ ಮಿತಿಮೀರಿದ ವಲಸೆಯಿಂದ ಕನ್ನಡ ಇನ್ನಷ್ಟು ಕುಗ್ಗಿಹೋಯಿತು. ಹೊಸ ಬಗೆಯ ವ್ಯಾವಹಾರಿಕ ಜಗತ್ತಿಗೆ ಕನ್ನಡವನ್ನು ಅಳವಡಿಸದೆ ಹೋದ ಪರಿಣಾಮ, ಎಲ್ಲೆಡೆ ಇಂಗ್ಲಿಷ್ ಕಾಣುವಂತಾಯಿತು. ಕನ್ನಡಿಗರೂ ಅದಕ್ಕೆ ಒಗ್ಗಿಕೊಂಡ ಪರಿಣಾಮವೇ ಕನ್ನಡದ ಇಂದಿನ ದುಃಸ್ಥಿತಿಗೆ ಕಾರಣವಾಗಿದೆ.

ದೇಶದಲ್ಲಿ ದೇಸಿ, ಪಾಶ್ಚಾತ್ಯ ಎಂಬ ಎರಡು ಧಾರೆಗಳು ರೂಪು ತಳೆದವು. ಪಾರಂಪರಿಕವಾಗಿ ವ್ಯಾಪಾರ-ವ್ಯವಹಾರಗಳಲ್ಲಿ ಕನ್ನಡ ಉಳಿದುಕೊಂಡಿತು. ಅಲ್ಲಿಯೂ ಈಗ ಇಂಗ್ಲಿಷ್ ನುಸುಳಿದೆ. ನಾಮಫಲಕ, ಪ್ರದರ್ಶನ ಫಲಕಗಳಲ್ಲಿ ಇಂಗ್ಲಿಷ್ ರಾರಾಜಿಸುತ್ತಿದೆ. ಕೇಂದ್ರ ಸರ್ಕಾರದ ಕಚೇರಿ, ಉದ್ಯಮಗಳಲ್ಲಿ ತ್ರಿಭಾಷಾ ಸೂತ್ರದನ್ವಯ ಕನ್ನಡಕ್ಕೆ ಆದ್ಯತೆಯಿರಬೇಕು. ಆದರೆ ಅಲ್ಲಿ ಹಿಂದಿ, ಇಂಗ್ಲಿಷ್ ಪ್ರಧಾನವಾಗಿ, ಕಾಟಾಚಾರಕ್ಕೆಂಬಂತೆ ಕನ್ನಡ ಸ್ಥಾನ ಗಳಿಸಿದೆ. ಉದ್ಯಮಗಳಲ್ಲಿ ಇಂಗ್ಲಿಷ್ ಸಾರ್ವಭೌಮ ಭಾಷೆಯಾಗಿತ್ತು. ಈಗ ಅಲ್ಲಿಯೂ ಹಿಂದಿಯನ್ನು ಪ್ರತಿಷ್ಠಾಪಿಸುವಲ್ಲಿ ಕೇಂದ್ರ ಯಶಸ್ವಿಯಾಗಿದೆ. ಸಮಾಜದ ಎಲ್ಲ ಹಂತಗಳಲ್ಲಿ ಇಂಗ್ಲಿಷ್ ಬಳಕೆಗೆ ಬಂದಿತು. ಇಂಗ್ಲಿಷ್ ತಿಳಿಯದವರು ವಿಮಾ ಪ್ರಸ್ತಾವನೆಗೆ ಅನ್ಯ ಭಾಷೆಗಳಲ್ಲಿ ಸಹಿಯನ್ನೇ ಹಾಕುವಂತಿರಲಿಲ್ಲ. ಚೆಕ್, ಹಣ ಪಾವತಿಗೆ ಬೇರೆ ಭಾಷೆಯಲ್ಲಿ ಸಹಿ ಮಾಡಿದರೆ, ಇಂಗ್ಲಿಷ್ ಬಲ್ಲವರಿಂದ ದೃಢೀಕರಣ ಅಗತ್ಯವೆಂಬ ಕಟ್ಟುಪಾಡಿತ್ತು. ಈಗಲೂ ಅದು ಮುಂದುವರಿದಿರುವುದು ದುರದೃಷ್ಟಕರ. ಸ್ವಾತಂತ್ರ್ಯ ಬಂದು ಭಾಷಾನ್ವಯ ರಾಜ್ಯಗಳು ರಚನೆಯಾಗಿ ಅರ್ಧ ಶತಮಾನ ಕಳೆದ ನಂತರವೂ ಪರಿಸ್ಥಿತಿ ಸುಧಾರಿಸಿಲ್ಲ. ಕೇಂದ್ರ ಸರ್ಕಾರದ ನಿರ್ಲಜ್ಜ ಹಿಂದಿ ಹೇರಿಕೆಯಿಂದ ಕನ್ನಡದ ಸ್ಥಿತಿ ಇನ್ನಷ್ಟು ಹದಗೆಟ್ಟಿದೆ.

ರಾಷ್ಟ್ರೀಕರಣಕ್ಕೆ ಮುನ್ನ ಕರ್ನಾಟಕ ಮೂಲದ ಕೆನರಾ, ಕಾರ್ಪೊರೇಷನ್, ವಿಜಯ, ಸಿಂಡಿಕೇಟ್, ಮೈಸೂರು ಬ್ಯಾಂಕ್ ಮೊದಲಾದ ಬ್ಯಾಂಕ್‌ಗಳಲ್ಲಿ ಕನ್ನಡ ಬಳಕೆಯಾಗುತ್ತಿತ್ತು. ಈಗ ಅಲ್ಲೆಲ್ಲಾ ಇಂಗ್ಲಿಷ್-ಹಿಂದಿ ಮಾತ್ರ ಬಳಕೆಯಾಗುತ್ತಿದೆ. ಬಹಳಷ್ಟು ರಾಷ್ಟ್ರೀಯ ಬ್ಯಾಂಕ್‌ಗಳಲ್ಲಿ ಫಲಕಗಳಲ್ಲಿ ಬಿಟ್ಟು ಬೇರೆಲ್ಲೂ ಕನ್ನಡ ಕಾಣುವುದಿಲ್ಲ. ಬಳಕೆಯಾಗುವುದು ಹಿಂದಿ, ಇಂಗ್ಲಿಷ್ ಮಾತ್ರ. ಪ್ರಶ್ನಿಸಿದರೆ ಕನ್ನಡದಲ್ಲೂ ಚಲನ್ ತುಂಬಬಹುದು, ಚೆಕ್ ಬರೆಯಬಹುದು ಎನ್ನುತ್ತಾರೆ. ರಾಜ್ಯ ಸರ್ಕಾರದ ವ್ಯಾಪ್ತಿಯಲ್ಲಿರುವ ಸಹಕಾರಿ ಬ್ಯಾಂಕ್‌ಗಳಲ್ಲೇ ಇಂಗ್ಲಿಷ್ ಪ್ರಧಾನವಾಗಿದೆ. ಸಾರ್ವಜನಿಕ ಉದ್ದಿಮೆ, ವಿಮೆ, ಅಂಚೆ ಇಲಾಖೆ, ರೈಲ್ವೆ ಮುಂತಾದ ಕೇಂದ್ರ ಸರ್ಕಾರದ ಕಚೇರಿಗಳಲ್ಲಿ ಹಿಂದಿಯದೇ ಕಾರುಬಾರು. ಇಂಗ್ಲಿಷ್‌ಗೂ ಸ್ಥಾನವಿದೆ. ನೆಪ ಮಾತ್ರಕ್ಕೆ ಕನ್ನಡ ಕಾಣುತ್ತದೆ. ಇನ್ನು ಆದಾಯ ತೆರಿಗೆ, ಸೀಮಾ ಸುಂಕಗಳಂತಹ ಕಡೆ ಕನ್ನಡ ಕಾಣುವುದಿಲ್ಲ. ಕನ್ನಡ ಬಳಕೆ ನಿಷಿದ್ಧ. ಕನ್ನಡ ಮಾತ್ರ ತಿಳಿದವರು ಅಲ್ಲಿಗೆ ಹೋದರೆ ಅನಕ್ಷರಸ್ಥರಂತೆ ಅವರು ಕಕ್ಕಾಬಿಕ್ಕಿಯಾಗಬೇಕಾಗುತ್ತದೆ. ದಕ್ಷಿಣ ಭಾರತದಲ್ಲಿ ಯಾರೂ ಹಿಂದಿಯನ್ನು ಬಳಸುವುದಿಲ್ಲ. ಆದರೂ ಇಂಗ್ಲಿಷ್ ಜೊತೆಗೆ ಹಿಂದಿಯನ್ನು ಎಲ್ಲ ನಮೂನೆಗಳಲ್ಲಿ ಮುದ್ರಿಸಿ, ಅನಗತ್ಯವಾಗಿ ಕಾಗದ ಮತ್ತು ಮುದ್ರಣ ವೆಚ್ಚ ಮಾಡುತ್ತಿದ್ದಾರೆ. ಸಾರ್ವಜನಿಕರ ಗಮನ ಸೆಳೆಯಲು ಬಳಸುವ ಭಿತ್ತಿಪತ್ರ, ಸೂಚನಾ ಫಲಕಗಳಲ್ಲೂ ವಿಮೆ ಮತ್ತು ಅಂಚೆ ಇಲಾಖೆಗಳು ಕನ್ನಡವನ್ನು ಬಳಸುತ್ತಿಲ್ಲ. ಅಂಚೆ ಚೀಟಿ ಪ್ರಕಟಣೆಯಲ್ಲೂ ಕೇಂದ್ರ ಸರ್ಕಾರ ಕರ್ನಾಟಕ-ಕನ್ನಡವನ್ನು ಮರೆತಿದೆ. ತಮಿಳು, ತೆಲುಗು, ಪಂಜಾಬಿ, ಬಂಗಾಲಿ ವಿಶ್ವ ಸಮ್ಮೇಳನಗಳು ನಡೆದಾಗಲೆಲ್ಲಾ ಆಯಾ ಭಾಷೆಗಳ ಅಕ್ಷರವುಳ್ಳ ಅಂಚೆ ಚೀಟಿಗಳು ಪ್ರಕಟವಾಗಿವೆ. ಕನ್ನಡಕ್ಕೆ ಮಾತ್ರ ಆ ಭಾಗ್ಯವಿಲ್ಲ. ತಮಿಳುನಾಡನ್ನು ಪ್ರತಿನಿಧಿಸುವ ೧೨೯ ಅಂಚೆ ಚೀಟಿಗಳು ಪ್ರಕಟವಾಗಿವೆ. ಕರ್ನಾಟಕವನ್ನು ಪ್ರತಿನಿಧಿಸುವ ಅಂಚೆ ಚೀಟಿ ೨೭ ಮಾತ್ರ. ರಾಜ್ಯ ಸರ್ಕಾರದ ಸ್ವಾಮ್ಯದಲ್ಲಿರುವ ಸಾರಿಗೆ, ಪ್ರವಾಸೋದ್ಯಮ ಹಾಗೂ ಇತರ ಉದ್ಯಮಗಳಲ್ಲೂ ಕನ್ನಡಕ್ಕೆ ಎರಡನೆಯ ಸ್ಥಾನ. ತನ್ನ ತಾಯಿನುಡಿಗೆ ಇಷ್ಟೆಲ್ಲಾ ಅನ್ಯಾಯ, ಅಪಮಾನಗಳಾಗುತ್ತಿದ್ದರೂ ಕನ್ನಡಿಗರು ನಿರ್ಲಿಪ್ತರಾಗಿರುವುದನ್ನು ಕಂಡಾಗ ಮನಸ್ಸಿಗೆ ಕಸಿವಿಸಿಯಾಗುತ್ತದೆ.

ಬ್ರಿಟಿಷರು ಭಾರತ ಬಿಟ್ಟು ತೊಲಗಿದ ನಂತರವೂ ಇಂಗ್ಲಿಷ್ ಗಟ್ಟಿಯಾಗಿ ಬೇರೂರಿದೆ. ಅದಕ್ಕಿರುವ ಐತಿಹಾಸಿಕ ಕಾರಣದ ಜೊತೆಗೆ ವ್ಯಾವಹಾರಿಕ ಕಾರಣವೂ ಇದೆ. ಜಾಗತೀಕರಣದ ಸದ್ದು ಹೆಚ್ಚಾದಂತೆ ಕನ್ನಡದಂತಹ ಭಾಷೆಗಳ ಸದ್ದು ಪಿಸುದನಿಯಾಗಿದೆ. 'ಒಂದೇ ಜಗತ್ತು; ಒಂದೇ ಭಾಷೆ' ಅನ್ನುವ ನಿಲುವಿನ ಜಾಗತೀಕರಣದಿಂದ ಇಂಗ್ಲಿಷ್ ನಮ್ಮ ಅಡುಗೆಮನೆಗೂ ಪ್ರವೇಶಿಸಿದೆ. ಸ್ವಾತಂತ್ರ್ಯ ಬಂದ ನಂತರ ದೇಶೀಯ ಭಾಷೆಗಳು




ಒಬ್ಬ ಮುಸಲ್ಮಾನನಿದ್ದ
ಇನ್ನೊಬ್ಬ ಹಿಂದೂ
ಮತ್ತೊಬ್ಬ ಕ್ರಿಶ್ಚಿಯನ್,
ನೆರಳಿಲ್ಲದ ದಾರಿ
ಬಹುದೂರ ಸಾಗಿತ್ತು.

ನೆತ್ತಿಯ ಮೇಲೆ ಬಿಸಿಲಿತ್ತು
ಹೊಟ್ಟೆಯೊಳಗೆ ಹಸಿವಿತ್ತು ,
ಜತೆಗೆ ಕೊರಳಿನ ಆಳದಲಿ
ತಾಳಲಾಗದ ದಾಹ.

ಒಬ್ಬನ ಬಳಿ ನೀರಿತ್ತು
ಇನ್ನೊಬ್ಬನ ಬಳಿ ತುಸು ಅನ್ನವಿತ್ತು ,
ಇತ್ತು ಮತ್ತೊಬ್ಬನಲಿ
ತುಂಡು ರೊಟ್ಟಿ.

ಯಾರಲ್ಲಿಯೂ ಹತಿಯಾರವಿರಲಿಲ್ಲ,
ಅವರವರ ಹೆಸರುಗಳ
ಬಿಟ್ಟರೆ ಅವರೀಗ
ಬರಿ ಮನುಷ್ಯರಾಗಿದ್ದರು.

ಒಬ್ಬರ ನೆರಳು ಇನ್ನೊಬ್ಬರಿಗೆ
ನೆರಳಾಯಿತು,
ಇದ್ದುದೆಲ್ಲವ ಅಲ್ಲೇ
ಹಂಚಿಕೊಂಡು ತಿಂದರು.

ಅತ್ತ
ಮುಸಲ್ಮಾನನ ಮುಲ್ಲಾ
ಹಿಂದೂವಿನ ಮಠಾಧೀಶ
ಕ್ರಿಶ್ಚಿಯನ್ನನ ಪಾದ್ರಿ
ಧರ್ಮದ ಬಗ್ಗೆ
ಭಾಷಣ ಮಾಡುತ್ತಲೇ ಇದ್ದರು,
ಮಾಡುತ್ತಲೇ ಇದ್ದರು !

ಗಣೇಶ ಹೊಸ್ಮನೆ
ಜಾನ್ಮನೆ - ೫೮೧ ೩೧೫, ಶಿರಸಿ, ಉತ್ತರ ಕನ್ನಡ

ಮುನ್ನೆಲೆಗೆ ಬರುತ್ತವೆಂದು ಭಾವಿಸಲಾಗಿತ್ತು. ಆದರೆ, ಎಲ್ಲರ ನಿರೀಕ್ಷೆಗಳನ್ನೂ ಸುಳ್ಳಾಗಿಸಿ ಕೇಂದ್ರ ಸರ್ಕಾರ ಎಲ್ಲ ದೇಶೀಯ ಭಾಷೆಗಳನ್ನು ಪ್ರೋತ್ಸಾಹಿಸುವ ಬದಲು ಹಿಂದಿಯನ್ನು ಮಾತ್ರ ಪ್ರೋತ್ಸಾಹಿಸಿ, ಇಂಗ್ಲಿಷ್ ಸ್ಥಾನದಲ್ಲಿ ಹಿಂದಿಯನ್ನು ಪ್ರತಿಷ್ಠಾಪಿಸುವ ಆಕ್ರಮಣಕಾರಿ ಧೋರಣೆ ಅನುಸರಿಸುತ್ತಿದೆ. ಸಂವಿಧಾನ ಒಪ್ಪಿರುವ ತ್ರಿಭಾಷಾ ಸೂತ್ರಕ್ಕೆ ತಿಲಾಂಜಲಿಯಿತ್ತು ಹಿಂದಿಯನ್ನು ಬಲವಂತವಾಗಿ ಹೇರುತ್ತಿರುವುದನ್ನು ಜನಪ್ರತಿನಿಧಿಗಳು ಪ್ರಶ್ನಿಸದಿರುವುದರಿಂದ, ಕನ್ನಡದಂತಹ ಭಾಷೆಗಳು ಆತಂಕದ ನೆರಳಲ್ಲಿವೆ.

ಪ್ರಾದೇಶಿಕ ಭಾಷೆಯನ್ನು ಆಯಾ ರಾಜ್ಯಗಳ ಆಡಳಿತ ಭಾಷೆಯಾಗಿ ಮಾಡುವ ಪ್ರಯತ್ನ ನಡೆದಿದೆ. ಅದಕ್ಕೆ ಸಂವಿಧಾನದತ್ತ ಅವಕಾಶವಿದೆ. ಕರ್ನಾಟಕದಲ್ಲಿ ಕನ್ನಡವನ್ನು ಆಡಳಿತ ಭಾಷೆ ಎಂದು ಒಪ್ಪಿ ೪೮ ವರ್ಷಗಳೇ ಕಳೆದಿವೆ. ಗಮನಾರ್ಹ ಪ್ರಯತ್ನಗಳೂ ನಡೆದಿವೆ. ಸಂವಿಧಾನದ ೩೪೩-೩೪೪ನೆಯ ಅನುಚ್ಛೇದಗಳು ಒಕ್ಕೂಟದ ಭಾಷೆಗೆ ಸಂಬಂಧಿಸಿದವು. ೩೪೫-೩೪೭ನೇ ಅನುಚ್ಛೇದಗಳಲ್ಲಿ ರಾಜ್ಯಗಳ ಅಧಿಕೃತ ಭಾಷೆಗಳ ಪ್ರಸ್ತಾಪವಿದೆ. ಈ




ಅನುಚ್ಛೇದಗಳ ಅಡಿಯಲ್ಲಿ ಜಾರಿಗೆ ಬಂದಿರುವ ಅಧಿಕೃತ ಭಾಷಾ ಅಧಿನಿಯಮಗಳಲ್ಲೂ ಸಾಕಷ್ಟು ಕಟ್ಟುಪಾಡುಗಳನ್ನು ವಿಧಿಸಲಾಗಿದೆ. ಹಿಂದಿ ಸಂಪರ್ಕ ಭಾಷೆಯೇ ಹೊರತು ಒಕ್ಕೂಟದ ಭಾಷೆಯಲ್ಲ. ಆದರೂ 'ಒಕ್ಕೂಟ ಭಾಷೆಯಾಗಿ ಹಿಂದಿಯನ್ನು ಅನುಷ್ಠಾನಗೊಳಿಸಲು' ಎಂದೇ ಉಲ್ಲೇಖಿಸಿ, ಹಿಂದಿಯೇತರ ರಾಜ್ಯಗಳೊಂದಿಗೆ ವ್ಯವಹರಿಸುವಾಗ ಅನುಸರಿಸಬೇಕಾದ ನಿಯಮಗಳನ್ನು ವಿವರವಾಗಿ ಚರ್ಚಿಸಲಾಗಿದೆ. ಆದರೆ ಪ್ರಾದೇಶಿಕ ಭಾಷೆಗಳ ಅನುಷ್ಠಾನದ ಬಗ್ಗೆ ಸ್ಪಷ್ಟವಾದ ವಿವರಣೆಯಿಲ್ಲ. ೧೯೬೩ರಲ್ಲಿ ಜಾರಿಗೆ ಬಂದು ೧೯೭೦ರಲ್ಲಿ ತಿದ್ದುಪಡಿಯಾದ ಅಧಿಕೃತ ಭಾಷಾ ಅಧಿನಿಯಮದನ್ವಯ ಕೇಂದ್ರ ಸರ್ಕಾರಿ ಸ್ವಾಮ್ಯದ ಅಥವಾ ನಿಯಂತ್ರಣಕ್ಕೊಳಪಟ್ಟಿರುವ ಎಲ್ಲ ಸಂಸ್ಥೆ, ಉದ್ಯಮ, ಕಚೇರಿಗಳಲ್ಲಿನ ನಿರ್ಣಯಗಳು, ಆದೇಶ, ಪ್ರಕಟಣೆ, ಸುತ್ತೋಲೆ, ನಮೂನೆಗಳು – ಒಟ್ಟಿನಲ್ಲಿ ಆಡಳಿತ, ವ್ಯವಹಾರದ ಎಲ್ಲ ಹಂತಗಳಲ್ಲಿ ಕಡ್ಡಾಯವಾಗಿ ಇಂಗ್ಲಿಷ್ ಜೊತೆಗೆ ಹಿಂದಿಯನ್ನು ಬಳಸಬೇಕೆಂದು ಸ್ಪಷ್ಟವಾಗಿ ಹೇಳಿದೆ. ಪ್ರಾದೇಶಿಕ ಭಾಷೆಯನ್ನು ಬಳಸಬಾರದೆಂದು ಹೇಳಿಲ್ಲ, ಆದರೆ, ಅದು ಕಡ್ಡಾಯ ಎಂದೂ ಹೇಳಿಲ್ಲ.

ಕೇಂದ್ರ ಸರ್ಕಾರದ ವ್ಯಾಪ್ತಿಯಲ್ಲಿರುವ ಎಲ್ಲ ಉದ್ಯೋಗಿಗಳಿಗೆ ಹಿಂದಿಯಲ್ಲಿ ಸಹಿ ಮಾಡಿದರೆ ಇಷ್ಟು, ವ್ಯವಹಾರ ಮಾಡಿದರೆ ಮತ್ತಷ್ಟು ನಗದು ನೀಡುತ್ತಿದೆ. ಹಿಂದಿ ಕಲಿತರೆ ಆಕರ್ಷಕ ನಗದು ಮೊತ್ತ, ಜೊತೆಗೆ ಎಲ್ಲಾ ಸೂಚನಾ ಫಲಕ, ಮೊಹರು, ಸುತ್ತೋಲೆ, ನಮೂನೆಗಳಲ್ಲಿ ಕಡ್ಡಾಯವಾಗಿ ಹಿಂದಿ ಬಳಸಲೇಬೇಕೆಂದು ಆದೇಶ ಹೊರಡಿಸಿದೆ. ಇದು ಸಾಲದೆಂಬಂತೆ ಹಿಂದಿ ಹೇರಲು 'ಹಿಂದಿ ದಿವಸ್', 'ಹಿಂದಿ ಸಪ್ತಾಹ್', 'ಹಿಂದಿ ಮಾಸ್', 'ಹಿಂದಿ ಉತ್ಸವ್'ಗಳನ್ನು ಆಚರಿಸಿ, ಆ ಸಂದರ್ಭದಲ್ಲಿ ಅಲ್ಲಿನ ನೌಕರರಿಗೆ ಒಡ್ಡುತ್ತಿರುವ ಆಮಿಷಗಳನ್ನು ಕಂಡಾಗ ಮೈ ಕೆಂಡವಾಗದಿರದು. ಈಗ ಎಲ್ಲೆಡೆ 'ಹಿಂದಿ ಪದವಿವರಣ ಕೋಶ'ವನ್ನು ಪ್ರಕಟಿಸಿ ನೌಕರರಿಗೆ ಉಚಿತವಾಗಿ ಹಂಚಲು ಕೇಂದ್ರ ಸರ್ಕಾರವು ಆದೇಶ ಹೊರಡಿಸಿದೆ. ಹಿರಿಯ ಅಧಿಕಾರಿಗಳಿಗೆ ಹಿಂದಿಯಲ್ಲೇ ವ್ಯವಹರಿಸುವಂತೆ ಒತ್ತಡವಿದೆ.

೧೯೭೬ರ ಅಧಿಕೃತ ಭಾಷಾ ನಿಯಮದನ್ವಯ ಕೇಂದ್ರದ ಜೊತೆಗೆ, ರಾಜ್ಯಗಳೊಡನೆ ವ್ಯವಹರಿಸುವಾಗ ಇಂಗ್ಲಿಷ್ ಜೊತೆಗೆ ಹಿಂದಿಯನ್ನೂ ಕಡ್ಡಾಯವಾಗಿ ಬಳಸಬೇಕೆಂದು ಹೇಳಿದೆ. ಇದೇ ನಿಯಮದ ೧೧ನೇ ಅಂಶದನ್ವಯ ನಾಮಫಲಕ, ಲೆಟರ್‌ಹೆಡ್, ಮೊಹರು, ಸೂಚನಾ ಫಲಕಗಳಲ್ಲಿ ಪ್ರಾದೇಶಿಕ ಭಾಷೆ (ಕನ್ನಡ) ಬಳಸಬೇಕು. ಇದು ಕಚೇರಿ, ಉದ್ದಿಮೆ, ರಾಷ್ಟ್ರೀಕೃತ ಬ್ಯಾಂಕ್‌ಗಳಿಗೆ ಅನ್ವಯಿಸುತ್ತದೆ. ಇದಿಷ್ಟೇ ಸಾಲದು. ಪ್ರಾದೇಶಿಕ ಭಾಷೆಯನ್ನು ಎಲ್ಲ ಹಂತಗಳಲ್ಲಿ ವ್ಯವಹಾರ ಭಾಷೆಯಾಗಿ ಬಳಸುವಂತೆ ಕಾನೂನಿಗೆ ತಿದ್ದುಪಡಿ ಆಗಬೇಕು.

**ಕನ್ನಡವು ರಾಜ್ಯದ ಆಡಳಿತ ಭಾಷೆಯಾದರೆ ಸಾಕೆ ?**

ಕನ್ನಡವನ್ನು ಆಡಳಿತ ಭಾಷೆಯಾಗಿ ಅನುಷ್ಠಾನಕ್ಕೆ ತಂದರೆ ಅದೊಂದು ದೊಡ್ಡ ಸಾಧನೆ ಎಂದು ತಿಳಿದಿದ್ದೇವೆ. ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರವೂ ಸಾಕಷ್ಟು ಯಶಸ್ವಿ ಪ್ರಯತ್ನ ನಡೆಸಿದೆ. ವಾಸ್ತವವಾಗಿ ಕನ್ನಡ ಆಡಳಿತ ಭಾಷೆಯಾಗಿ ರಾಜ್ಯ ಸರ್ಕಾರದೊಂದಿಗೆ ವ್ಯವಹರಿಸುವುದಕ್ಕಷ್ಟೇ ಸೀಮಿತವಾದರೆ ಅದರಿಂದ ಕನ್ನಡಿಗರಿಗೆ ಅಷ್ಟು ಪ್ರಯೋಜನ ಆಗುವುದಿಲ್ಲ. ಕರ್ನಾಟಕದಲ್ಲಿರುವ ಕೇಂದ್ರ ಸರ್ಕಾರದ ಸಂಸ್ಥೆ, ಕಚೇರಿಗಳೊಂದಿಗೆ ಕನ್ನಡದಲ್ಲಿ ವ್ಯವಹರಿಸುವ ವಾತಾವರಣ ನಿರ್ಮಾಣವಾಗದಿದ್ದರೆ, ಅಲ್ಲಿಯ ಉದ್ಯೋಗಿಗಳು ಕನ್ನಡಿಗರೂ, ಕನ್ನಡ ಬಲ್ಲವರೂ ಆಗದಿದ್ದರೆ, ಕನ್ನಡವು ರಾಜ್ಯದ ಅಧಿಕೃತ ಭಾಷೆ ಅನ್ನುವುದಕ್ಕೆ ಅರ್ಥವಿರುವುದಿಲ್ಲ. ಇಂದು ಕೇಂದ್ರ ಸರ್ಕಾರವು ನಮ್ಮ ಸಾರ್ವಜನಿಕ ವಲಯದಲ್ಲಿ ಪ್ರಧಾನ ಪಾತ್ರ ವಹಿಸುತ್ತಿದೆ. ಜಿಲ್ಲಾ ಕಚೇರಿಗೋ, ಇತರ ರಾಜ್ಯ ಸರ್ಕಾರಿ ಇಲಾಖೆಗೋ ನಾವು ಹೋಗುವುದು ಅಪರೂಪಕ್ಕೊಮ್ಮೆ ಮಾತ್ರ, ಆದರೆ ಅಂಚೆ ಕಚೇರಿ, ರೈಲ್ವೆ, ಆದಾಯ ತೆರಿಗೆ, ಬ್ಯಾಂಕ್‌ಗಳೊಂದಿಗೆ ದಿನನಿತ್ಯ ವ್ಯವಹರಿಸುವುದು ಅನಿವಾರ್ಯ ಎನಿಸಿದೆ. ಇಲ್ಲಿಯ ನೌಕರರಿಗೆ ಕನ್ನಡ ಬಾರದಿದ್ದರೆ, ನಮೂನೆಗಳೂ ಕನ್ನಡದಲ್ಲಿರದಿದ್ದರೆ ಕನ್ನಡಿಗರನ್ನು ಅನಾಥಪ್ರಜ್ಞೆ ಕಾಡುತ್ತದೆ. ಇಲ್ಲೆಲ್ಲಾ ಕನ್ನಡವನ್ನು ವ್ಯವಹಾರ ಭಾಷೆಯಾಗಿಮಾಡಲು ಏನು ಪ್ರಯತ್ನ ನಡೆದಿದೆ, ಎಂದಾಗ ನಿರಾಸೆಯಾಗುತ್ತದೆ. ಅಲ್ಲಿನ ಕನ್ನಡಪರ ಸಂಘಟನೆಗಳು ಕನ್ನಡ ವಾತಾವರಣ ನಿರ್ಮಾಣಕ್ಕೆ ನಿರಂತರವಾಗಿ ಶ್ರಮಿಸುತ್ತಿವೆ. 'ಕನ್ನಡ ಅಭಿವೃದ್ಧಿ ಪ್ರಾಧಿಕಾರ'ವೂ ಕೈಕಟ್ಟಿ ಕೂತಿಲ್ಲ. ಆದರೆ, ಕೇಂದ್ರ ಸರ್ಕಾರ ಈ ಪ್ರಯತ್ನಕ್ಕೆ ಓಗೊಡದಿರುವುದರಿಂದ ಕನ್ನಡಕ್ಕೆ ಸೂಕ್ತ ಸ್ಥಾನ ದೊರೆತಿಲ್ಲ.

ಪ್ರಾದೇಶಿಕ ಭಾಷೆಗಳು ಆಯಾ ರಾಜ್ಯದ ಅಧಿಕೃತ ಭಾಷೆಗಳು ಎಂಬುದನ್ನು ಸಂವಿಧಾನವು ಒಪ್ಪಿರುವುದರಿಂದ, ಆ ರಾಜ್ಯದಲ್ಲಿರುವ ಎಲ್ಲ ಸರ್ಕಾರಿ ಸಂಸ್ಥೆಗಳೂ, ಉದ್ಯಮಗಳೂ, ಕಚೇರಿಗಳೂ, ಅವು ಕೇಂದ್ರದ್ದೇ ಆಗಿರಲಿ, ರಾಜ್ಯದ್ದೇ ಆಗಿರಲಿ, ರಾಜ್ಯದ ಅಧಿಕೃತ ಭಾಷೆಯಲ್ಲಿಯೇ ವ್ಯವಹರಿಸಬೇಕಲ್ಲವೆ ? ಬ್ಯಾಂಕ್, ಅಂಚೆ, ರೈಲ್ವೆ, ಆದಾಯ ತೆರಿಗೆ, ಸಾರ್ವಜನಿಕ ಉದ್ದಿಮೆಗಳೂ ಕೇಂದ್ರ ಸ್ವಾಮ್ಯದವು. ಅವಕ್ಕೆ ರಾಜ್ಯ ಸರ್ಕಾರದ ನಿಯಮ ಅನ್ವಯಿಸದು ಅನ್ನುವುದಾದರೆ ಒಕ್ಕೂಟ ವ್ಯವಸ್ಥೆಗೆ ಅರ್ಥವೇ ಇಲ್ಲವೆಂದಾಯಿತು.

ಭಾರತದ ಸಂವಿಧಾನ ತ್ರಿಭಾಷಾ ಸೂತ್ರವನ್ನು ಒಪ್ಪಿದೆ. ಅದರನ್ವಯ ಪ್ರಾದೇಶಿಕ ಭಾಷೆ ಮೊದಲಿರಬೇಕು; ನಂತರ ಹಿಂದಿ, ಇಂಗ್ಲಿಷ್. ಅಧಿಕೃತ ಭಾಷೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು 'ಅಧಿಕೃತ ಭಾಷಾ ಅನುಷ್ಠಾನ ಸಂಸತ್ ಸಮಿತಿ'ಯಿದೆ. ಈ ಸಮಿತಿ ರಾಷ್ಟ್ರಾದ್ಯಂತ ಇರುವ ಕೇಂದ್ರ ಸರ್ಕಾರಿ ಸಂಸ್ಥೆ, ಕಚೇರಿಗಳಲ್ಲಿ ಅಧಿಕೃತ ಭಾಷಾ ಅನುಷ್ಠಾನವನ್ನು ಪರಿಶೀಲಿಸುತ್ತದೆ. ಈ ಸಮಿತಿ ಹಿಂದಿ ಅನುಷ್ಠಾನಕ್ಕೆ ಮಾತ್ರ ಒತ್ತುಕೊಡುತ್ತಿರುವುದು ದುರದೃಷ್ಟಕರ.

ಇಷ್ಟೆಲ್ಲ ಹೇಳಿದಾಗ ಸಾರ್ವಜನಿಕ ವಲಯದಲ್ಲಿ ಕನ್ನಡ ಬಳಕೆ ಆಗುತ್ತಿಲ್ಲ ಎಂದಲ್ಲ. ನಾಮಫಲಕ, ಸೂಚನಾಫಲಕಗಳಲ್ಲಿ ತ್ರಿಭಾಷಾ ಸೂತ್ರದನ್ವಯ ಕನ್ನಡ ಬಳಕೆಯಲ್ಲಿದೆ. ಹಾಗೇ ಸ್ಥಾಯೀ ಆದೇಶಗಳು, ಉಪಾದಾನದಂತಹ ಸೌಲಭ್ಯಗಳ ಬಗ್ಗೆ ಕಾರ್ಮಿಕರು ತಿಳಿಯಲೇಬೇಕಾದ ಸಂಗತಿಗಳು ಕನ್ನಡದಲ್ಲೂ ಇವೆ. ಉತ್ಪಾದಕತಾ ಸಪ್ತಾಹ, ಗುಣ ಮಾಸ, ಸುರಕ್ಷತೆ ಫಲಕಗಳಲ್ಲಿ ಕನ್ನಡಕ್ಕೂ ಸ್ಥಾನವಿದೆ. ಕೆಲವು ಕಾರ್ಖಾನೆ, ಬ್ಯಾಂಕ್‌ಗಳು ಪ್ರಕಟಿಸುವ ನಿಯತಕಾಲಿಕೆಗಳಲ್ಲಿ ತ್ರಿಭಾಷಾ ಸೂತ್ರದನ್ವಯ ಕನ್ನಡವೂ ಇದೆ. ಇತ್ತೀಚೆಗೆ ಕೆಲವು ಹೊಸ ಪರಿಕಲ್ಪನೆಗಳು ಚಾಲ್ತಿಯಲ್ಲಿವೆ. ಅಂತಹವುಗಳಲ್ಲಿ 'ಲೀನ್ ಮ್ಯಾನುಫ್ಯಾಕ್ಚರಿಂಗ್' ಸಹ ಒಂದು. ಅದನ್ನು ಹಿಂದೂಸ್ಥಾನ ವಿಮಾನ ಕಾರ್ಖಾನೆ 'ಸಂಪೂರ್ಣ ಪರಿವರ್ತನೆ' ಎಂಬ ಹೆಸರಿನಲ್ಲಿ ಪುಸ್ತಕ ಪ್ರಕಟಿಸಿದೆ. ಇಂತಹ ಸಣ್ಣಪುಟ್ಟ ಕೆಲಸಗಳು ಆಗುತ್ತಿವೆ. ಇಲ್ಲಿ ವಿಶೇಷವಾಗಿ ಉಲ್ಲೇಖಿಸಬೇಕಾದ ಕೆಲಸಗಳೆಂದರೆ ತಾಂತ್ರಿಕವಾಗಿ ಕನ್ನಡ ಬಳಕೆ ಸಾಧ್ಯವೇ ಇಲ್ಲ ಅನ್ನುವ ಮಾತು ಕೇಳಿಬರುತ್ತಿದ್ದಾಗ ಎನ್.ಜಿ.ಇ.ಎಫ್.ನ ತಾಂತ್ರಿಕ ನಿರ್ದೇಶಕರಾಗಿದ್ದ ತ. ರಂ. ಕೃಷ್ಣಗೌಡರು ೬೦೦೦ ಪದಗಳ 'ಇಂಗ್ಲಿಷ್ ಕನ್ನಡ ಔದ್ಯಮಿಕ ನಿಘಂಟು' ಪ್ರಕಟಿಸಿದರು. ಇಂತಹ ಪ್ರಯತ್ನ ಇನ್ನಾವುದೇ ಭಾರತೀಯ ಭಾಷೆಗಳಲ್ಲಿಯೂ ಇಂದಿಗೂ ಆಗಿಲ್ಲ. ಇವರು ಇನ್ನಷ್ಟು ತಾಂತ್ರಿಕರಂಗದ ವಿವರಗಳನ್ನು ಕನ್ನಡದಲ್ಲಿ ತಂದಿದ್ದಾರೆ. ಇಲ್ಲಿ ಉಲ್ಲೇಖಿಸಲೇಬೇಕಾದ ಇನ್ನೊಂದು ಪ್ರಯತ್ನ ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿಯು ಹೊರತಂದ 'ಬ್ಯಾಂಕಿಂಗ್ ನಿಘಂಟು' ಹಾಗೂ ಅದು ಪ್ರಕಟಿಸುವ 'ಬ್ಯಾಂಕಿಂಗ್ ಪ್ರಪಂಚ' ತ್ರೈಮಾಸಿಕ.

ಕನ್ನಡ ಸಂಘಟನೆಗಳು ಪ್ರಬಲವಾಗಿರುವ ಬಿ.ಇ.ಎಲ್.ನಲ್ಲಿ ಬಹಳಷ್ಟು ನಮೂನೆಗಳು ಕನ್ನಡದಲ್ಲಿ ಬಂದಿವೆ. ಬಿ.ಎಚ್.ಇ.ಎಲ್., ಬಿ.ಇ.ಎಂ.ಎಲ್.ನಲ್ಲಿ, ಸ್ಟೇಟ್ ಬ್ಯಾಂಕ್ ಮೈಸೂರ್‌ನಂತಹ ಕಡೆಗಳಲ್ಲೂ ಗಣನೀಯವಾಗಿ ಕನ್ನಡ ಕಾಣುತ್ತದೆ. ಆದರೆ, ಆಡಳಿತ,

ತಾಂತ್ರಿಕ ಕ್ಷೇತ್ರಗಳಲ್ಲಿ ಕನ್ನಡ ಕಾಣುವುದಿಲ್ಲ. ಆದರೆ, ರಾಜ್ಯೋತ್ಸವ ಆಚರಣೆ ಬಹಳಷ್ಟು ಕಡೆ ನಡೆಯುತ್ತದೆ. ಆ ಸಂದರ್ಭದಲ್ಲಿ ಕನ್ನಡದ ಹೆಸರಿನಲ್ಲಿ ಸ್ಪರ್ಧೆಗಳು ನಡೆಯುತ್ತವೆ. ಸಂಸ್ಥೆಗಳ ಪುಸ್ತಕ ಭಂಡಾರಗಳಲ್ಲಿ ಕನ್ನಡ ಪುಸ್ತಕಗಳೂ ಸ್ಥಾನ ಗಳಿಸಿವೆ. ಸಂಘಗಳು ವಾಚನಾಲಯ, ಸಂಸ್ಥೆಗಳ ಪುಸ್ತಕ ಭಂಡಾರ ಸ್ಥಾಪಿಸಿವೆ. ಇತ್ತೀಚೆಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಪ್ರಯತ್ನದಿಂದ ಕಾರ್ಖಾನೆಗಳಲ್ಲಿ ಕನ್ನಡ ಕಲಿಕಾ ತರಗತಿ ಮತ್ತು ಕನ್ನಡ ಸಂಸ್ಕೃತಿ ಶಿಬಿರಗಳು ನಡೆಯುತ್ತಿವೆ. ಬಹಿರಂಗವಾಗಿ ಕನ್ನಡ ಕಾಣುತ್ತಿದೆ; ಅಂತರಂಗದಲ್ಲಿ (ಆಡಳಿತ, ತಾಂತ್ರಿಕ) ಕನ್ನಡ ಕನಸಾಗಿಯೇ ಉಳಿದಿದೆ. ಇಲ್ಲೆಲ್ಲಾ ಕನ್ನಡ ಕಾಣುವಂತಾಗಲು ಕನ್ನಡ ಸಂಘಟನೆಗಳ ಪ್ರಯತ್ನವೇ ಕಾರಣ. ಅದನ್ನು ನೆನೆಯುವುದು ನನ್ನ ಕರ್ತವ್ಯ. ನ್ಯಾಯವಾಗಿ ಸಂಘಟನೆಗಳನ್ನು ಹೆಸರಿಸಿ, ಅವುಗಳ ಕೊಡುಗೆಗಳನ್ನು ದಾಖಲಿಸಬೇಕು. ಅದನ್ನು ಸಂಪೂರ್ಣವಾಗಿ ದಾಖಲಿಸಲು ಸಾಧ್ಯವಿಲ್ಲದಿರುವುದರಿಂದ ಯಾವ ಸಂಘಟನೆಯ ಹೆಸರನ್ನೂ ಉಲ್ಲೇಖಿಸಲು ಹೋಗಿಲ್ಲ.

ಇಲ್ಲಿಯವರೆಗೆ ಸರ್ಕಾರ, ಸಾರ್ವಜನಿಕ ವಲಯದ ಮಾತಾಯಿತು. ಇಂದು ನಗರಗಳಲ್ಲಿ ಮಾಲ್‌ಗಳು ಬಂದಿವೆ. ಅವುಗಳ ಹೆಸರು ಫೋರಂ, ಲೈಫ್‌ಸ್ಟೈಲ್, ಟೋಟಲ್, ಮೋರ್, ಇತ್ಯಾದಿ, ಇತ್ಯಾದಿ. ಇಲ್ಲಿ ಕನ್ನಡ ಬರಹ ಬಿಡಿ, ಮಾತನಾಡಲೂ ಸಂಕೋಚಪಡಬೇಕಾದ ವಾತಾವರಣವಿದೆ. ದೊಡ್ಡ ದೊಡ್ಡ ಖಾಸಗೀ ಉದ್ಯಮಗಳು, ಅಂಗಡಿ, ಹೋಟೆಲ್, ಮನರಂಜನಾ ಕೇಂದ್ರಗಳಲ್ಲಿ ಕನ್ನಡದಲ್ಲಿ ವ್ಯವಹಾರ ನಡೆಯಬೇಕೆಂಬುದರ ಬಗ್ಗೆ ಚಿಂತಿಸಿಯೇ ಇಲ್ಲ. ಅಂಗಡಿ, ವಾಣಿಜ್ಯೋದ್ಯಮ, ಜಾಹೀರಾತು ಫಲಕಗಳಲ್ಲಿ ಕನ್ನಡ ಅಕ್ಷರಗಳು ಪ್ರಧಾನವಾಗಿರಬೇಕು ಎಂಬುದಕ್ಕಷ್ಟೇ ನಮ್ಮ ಅಭಿಮಾನ ಸೀಮಿತವಾಗಿದೆ. ಉತ್ಪನ್ನದ ಹೆಸರು, ಬಿಲ್ಲು, ಸರಕು ಬಿಕರಿ ಪಟ್ಟಿ, ಬೆಲೆ ವಿವರಣಾ ಪಟ್ಟಿ ಎಲ್ಲವೂ ಇಂಗ್ಲಿಷ್‌ನಲ್ಲಿ ಮಾತ್ರ ಇರುತ್ತದೆ. 'ಕ್ಲಾತ್ ಶೋರೂಂ' ಅನ್ನುವುದು 'ಜವಳಿ ಪ್ರದರ್ಶನ ಮಳಿಗೆ' ಆಗಬೇಕು. ಎಲ್ಲಾ ರಂಗಗಳಲ್ಲೂ ಕನ್ನಡ ಬಳಕೆಗೆ ಬಾರದಿದ್ದರೆ, ನಿಜವಾದ ಅರ್ಥದಲ್ಲಿ ಕನ್ನಡ 'ಸಾರ್ವತ್ರಿಕ ಭಾಷೆ' ಆಗಲಾರದು.

ವಾಸ್ತವವಾಗಿ ಗಮನಿಸಿದರೆ ಕನ್ನಡ ಬಳಕೆ ಬಗ್ಗೆ ಕನ್ನಡಿಗರಲ್ಲಿ ಆಸಕ್ತಿಯಿಲ್ಲದಿರುವುದೇ ಕನ್ನಡ ಸಾರ್ವತ್ರಿಕವಾಗಿ ಬೆಳೆಯದಿರಲು ಕಾರಣ. ಬೆಂಗಳೂರಿನಲ್ಲಿ ನೆಲೆಸಿರುವ ಪರಭಾಷಿಕರು 'ತಮಗೆ ಕನ್ನಡ ಗೊತ್ತಿಲ್ಲ, ಆದರೆ ಎಂದೂ ತೊಂದರೆ ಅನಿಸಿಲ್ಲ' ಎಂದು ಹೆಮ್ಮೆಯಿಂದ ಹೇಳಿ ಕೊಳ್ಳುತ್ತಾರೆ. ಕನ್ನಡಿಗರಲ್ಲಿ ಮನೆಮಾಡಿರುವ ಪರಭಾಷೆ ಯಲ್ಲಿ ಮಾತನಾಡುವ ಕಾಯಿಲೆಯೇ ಅದಕ್ಕೆ ಕಾರಣ. ಕನ್ನಡಿಗರ ಈ ಕಾಯಿಲೆಗೆ ಮದ್ದಿಲ್ಲದಿರುವುದರಿಂದ, ಕರ್ನಾಟಕದ ಎಲ್ಲ ಊರು, ಕೇರಿ, ರಸ್ತೆ, ಸೂಚನಾ ಫಲಕಗಳನ್ನು ಕನ್ನಡದಲ್ಲಿ ಮಾತ್ರ ಹಾಕಬೇಕು. ಇಂಗ್ಲಿಷ್ ಬಳಸಲೇಬಾರದು. ಎರಡೂ ಭಾಷೆಗಳಲ್ಲಿದ್ದರೆ ಕನ್ನಡ ಬರೀ ಅಲಂಕಾರವಾಗುತ್ತದೆ. ಹೀಗೆ ಬಸ್ಸಿನ ಮಾರ್ಗ, ಫಲಕ, ವಿದ್ಯುತ್ ಬಿಲ್ಲು, ವಾಣಿಜ್ಯ ತೆರಿಗೆ, ವಾಹನ ತೆರಿಗೆ ಎಲ್ಲೆಡೆಯೂ ಕನ್ನಡದಲ್ಲಿ ಮಾತ್ರ ಬರೆದರೆ ಕನ್ನಡ ಬೆಳೆಯುತ್ತದೆ. ಈಗ ಕಂಪ್ಯೂಟರ್ ಬಂದು ಇಂಗ್ಲಿಷ್ ಬಳಕೆ ಹೆಚ್ಚುತ್ತಿದೆ. ಮೊದಲು ಬಸ್ಸಿನೊಳಗಿನ ಮಾರ್ಗ ನಿಲ್ದಾಣ ಸೂಚಿ ಕನ್ನಡದಲ್ಲೇ ಇರುತ್ತಿತ್ತು. ಈಗ ವಿದ್ಯುನ್ಮಾನ ಫಲಕ ಬಂದು ಬರೀ ಇಂಗ್ಲಿಷ್ ಆಗಿದೆ. ರಾಜ್ಯ ಸರ್ಕಾರದ ಸಂಸ್ಥೆ ಪ್ರಕಟಿಸುವ ವಿದ್ಯಾ ಲೇಖಕ್ ಪುಸ್ತಕಗಳ ಮೇಲೆ ಕೇವಲ ಕನ್ನಡದಲ್ಲಿ ಮಾತ್ರ ಏಕೆ ಮುದ್ರಿಸುವುದಿಲ್ಲ? ಕೇರಳದಲ್ಲಿ ತಯಾರಾಗುವ 'ಚಂದ್ರಿಕಾ ಸೋಪಿ'ನ ಪೊಟ್ಟಣದ ಒಂದು ಬದಿಯಲ್ಲಿ ಸಂಪೂರ್ಣ ಮಲೆಯಾಳಂನಲ್ಲಿ ಮಾತ್ರ ಇರುತ್ತದೆ. ನಮ್ಮ 'ಮೈಸೂರು ಸ್ಯಾಂಡಲ್' ಪೊಟ್ಟಣದ ಮೇಲೆ ಚಿಕ್ಕದಾಗಿ ಕನ್ನಡದಲ್ಲಿ ಹೆಸರು ಮಾತ್ರ ಬರೆಯುತ್ತಾರೆ. ಉಳಿದಂತೆ ಇಂಗ್ಲಿಷ್‌ಮಯ. ಈ ದಾಸ್ಯ ಏಕೆ ?

ಕನ್ನಡ ನಮೂನೆಗಳನ್ನು ಮುದ್ರಿಸಿ ಎಂದು ಒತ್ತಾಯಿಸಬಹುದು. ಕನ್ನಡದಲ್ಲಿ ನಮೂನೆಗಳು ಬರುವಂತೆ ಮಾಡಲೂಬಹುದು. ಅದು ನಿಜವಾಗಿ ಸಾರ್ಥಕವಾಗಬೇಕಾದರೆ, ಕನ್ನಡ ಬಳಸುವ ಸಹೃದಯತೆ ಕನ್ನಡಿಗರಲ್ಲಿ ಬೆಳೆದುಬರಬೇಕು. ಇಂಗ್ಲಿಷ್ ಬಳಸುವು ದರಿಂದ ಪ್ರತಿಷ್ಠೆ ಹೆಚ್ಚುತ್ತದೆಂಬ ಕೀಳರಿಮೆ ಬಿಟ್ಟು ಕನ್ನಡಿಗರು ತಮ್ಮ ತಾಯಿನುಡಿಯನ್ನು ಬಳಸುವಂತಾದರೆ ಕನ್ನಡ ಪ್ರಜ್ವಲಿಸುವುದರಲ್ಲಿ ಅನುಮಾನವಿಲ್ಲ. ನಾಳೆಗಳು ಕನ್ನಡದ್ದಾಗುವುದರಲ್ಲೂ ಅನುಮಾನ ಬೇಡ.

'ಸಾರ್ವಜನಿಕ ವಲಯದಲ್ಲಿ ಕನ್ನಡ ಬಳಕೆ' ಎಂಬ ವಿಚಾರದ ವ್ಯಾಪ್ತಿ ಸಾಗರದಷ್ಟು ವಿಸ್ತಾರವಾದದ್ದು. ನನ್ನ ಸಣ್ಣ ಬೊಗಸೆಯಲ್ಲಿ ತುಂಬಿಕೊಂಡಷ್ಟನ್ನು ತಮ್ಮ ಮುಂದೆ ಸುರಿದಿದ್ದೇನೆ. ಮಾತು ಮುಗಿಸುವ ಮುನ್ನ ಸಾರ್ವಜನಿಕ ವಲಯದಲ್ಲಿ ಕನ್ನಡ ಬಳಕೆಗೆ ಬರಲು ಏನು ಮಾಡಬೇಕು ಎಂಬುದರ ಬಗ್ಗೆ ತಕ್ಷಣಕ್ಕೆ ಹೊಳೆದ ಒಂದೆರಡು ಸಂಗತಿಗಳನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ.

೧. ಕರ್ನಾಟಕದಲ್ಲಿರುವ ಎಲ್ಲಾ ವಾಣಿಜ್ಯ ಮತ್ತು ವ್ಯವಹಾರ ಸಂಸ್ಥೆಗಳು 'ನಾಮ ಫಲಕಗಳ ಪ್ರದರ್ಶನ'ದಲ್ಲಿ ಅನುಸರಿಸಬೇಕಾದ ಕ್ರಮ, ತಪ್ಪಿದರೆ ಸರ್ಕಾರ ವಿಧಿಸುವ ದಂಡದ ಬಗ್ಗೆ ಆಜ್ಞೆ ಬಂದು ೨೫ ವರ್ಷಗಳಾಯಿತು (೧೧-೧-೧೯೮೫). ಈಗಲಾದರೂ ಸರ್ಕಾರ ಕ್ರಿಯಾಶೀಲ ವಾಗಿ ಈ ಆಜ್ಞೆಯನ್ನು ಜಾರಿಗೆ ತರದವರಿಗೆ ದಂಡ ವಿಧಿಸುವ ಕಾನೂನು ಕ್ರಮ ಜರುಗಿಸಲು ಮುಂದಾಗಬೇಕು.

೨. ಬ್ಯಾಂಕ್, ರೈಲ್ವೆ, ಆದಾಯ ತೆರಿಗೆ ಮುಂತಾದ ಸಾರ್ವಜನಿಕ ಸಂಪರ್ಕವಿರುವ ಕೇಂದ್ರ ಸರ್ಕಾರದ ಎಲ್ಲ ಕಚೇರಿಗಳಲ್ಲಿ ಗ್ರಾಹಕರು ಬಳಸುವ ಎಲ್ಲ ನಮೂನೆಗಳೂ ಕನ್ನಡದಲ್ಲೂ ಇರುವಂತೆ ನೋಡಿಕೊಳ್ಳಬೇಕೆಂದು ಕೇಂದ್ರ ಸರ್ಕಾರಕ್ಕೆ ಆಗ್ರಹಿಸಬೇಕು. ಮತ್ತು ರಾಜ್ಯದಲ್ಲಿರುವ ಎಲ್ಲ ಕೇಂದ್ರ ಸರ್ಕಾರದ ಕಚೇರಿ, ಉದ್ಯಮ, ಸಂಸ್ಥೆಗಳಲ್ಲಿ ತ್ರಿಭಾಷಾ ಸೂತ್ರದನ್ವಯ ಕನ್ನಡವನ್ನು ಮೊದಲ ಸಾಲಿನಲ್ಲಿ ಬಳಸಲು ಸೂಚಿಸಬೇಕು.

೩. ರಾಜ್ಯದಲ್ಲಿರುವ ಕೇಂದ್ರ, ಸಾರ್ವಜನಿಕ, ಖಾಸಗೀ ಉದ್ಯಮ, ಸಂಸ್ಥೆಗಳವರನ್ನು ಮುಖ್ಯಮಂತ್ರಿಗಳೇ ಕರೆದು ಸಭೆ ನಡೆಸಿ ಕನ್ನಡವನ್ನು ವ್ಯಾಪಕವಾಗಿ ಬಳಸಲು ಹಾಗೂ ಸ್ಥಳೀಯರಿಗೆ ಕೆಲಸ ನೀಡಲು ಮತ್ತು 'ಕನ್ನಡ ಘಟಕ' ಸ್ಥಾಪಿಸಲು ಸೂಚಿಸಬೇಕು.

೪. ರಾಜ್ಯ ಸರ್ಕಾರವು ತನ್ನ ಅಧೀನದಲ್ಲಿರುವ ಎಲ್ಲ ಉದ್ಯಮ, ನಿಗಮಗಳು ಕನ್ನಡವನ್ನೇ ಬಳಸುವಂತೆ ನೋಡಿಕೊಳ್ಳಬೇಕು. ಬಸ್ಸುಗಳಲ್ಲಿ ನಿಲ್ದಾಣದ ಸೂಚನಾ ಫಲಕ, ಘೋಷಣೆಗಳು ಕನ್ನಡದಲ್ಲಿ ಮಾತ್ರ ಇರಬೇಕು. ವಿಮಾನ ನಿಲ್ದಾಣಕ್ಕೆ ಹೋಗುವ ಐಷಾರಾಮಿ ಬಸ್ಸುಗಳಲ್ಲಿ ಕನ್ನಡ ದಿನಪತ್ರಿಕೆ ಇಡಬೇಕು. ರಾಜ್ಯ ಸಾರಿಗೆ ಬಸ್ಸುಗಳಲ್ಲಿ ಕನ್ನಡ ಚಲನಚಿತ್ರಗಳನ್ನು ಮಾತ್ರ ತೋರಿಸಬೇಕು. ಜೊತೆಗೆ ಕನ್ನಡ ಸಾಕ್ಷ್ಯ ಚಿತ್ರಗಳನ್ನೂ ಪ್ರದರ್ಶಿಸಬೇಕು.

೫. ಕನ್ನಡಿಗರು ಎಲ್ಲ ಅರ್ಜಿಗಳನ್ನು ಕನ್ನಡದಲ್ಲಿಯೇ ತುಂಬುವ, ಕನ್ನಡದಲ್ಲಿಯೇ ಮಾತನಾಡುವ ದೃಢಸಂಕಲ್ಪವನ್ನು ಮಾಡಬೇಕು.

*(ಬೆಳಗಾವಿಯಲ್ಲಿ ನಡೆದ 'ವಿಶ್ವ ಕನ್ನಡ ಸಮ್ಮೇಳನ - ೨೦೧೧' ಸಂದರ್ಭದಲ್ಲಿ ನಡೆದ 'ಕನ್ನಡ ಭಾಷಾ ಬಳಕೆ' ಗೋಷ್ಠಿಯಲ್ಲಿನ ಉಪನ್ಯಾಸ)*



ರಾ. ನಂ. ಚಂದ್ರಶೇಖರ
ಸಂಖ್ಯೆ ೧, 'ಶ್ರೀ ನಿಲಯ', ಕತ್ರಿಗುಪ್ಪೆ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫

# ನಾಯಿಪಾಡು

"ರೀ, ಏಳ್ರೀ ಆಗಲೇ ಎಂಟು ಗಂಟೆ ಆಗಿಹೋಯ್ತು. ಬಿಸಿ ಬಿಸಿಯಾಗಿ ಇಡ್ಲಿ, ಕೊಬ್ಬರಿ ಚಟ್ನಿ ಮಾಡಿ ಮುಗಿಸಿದೆ. ನೀವಿನ್ನೂ ಮಲಗಿದ್ದೀರಲ್ಲ, ಎದ್ದು ರೆಡಿ ಆಗೋದ್ಯಾವಾಗ ? ಆಫೀಸಿಗೆ ಹೋಗೋದ್ಯಾವಾಗ ?'' ಹೆಂಡತಿ ಒಂದೇ ಸಮನೆ ಸುಪ್ರಭಾತ ಹಾಡತೊಡಗಿದಳು. ಬೆಳಗಿನ ಸವಿ ನಿದ್ದೆಗೆ ಭಂಗ ಮಾಡಿದವಳನ್ನು ಮನದಲ್ಲಿಯೇ ಬಯ್ದುಕೊಳ್ಳುತ್ತಾ ಗಡಿಯಾರದ ಕಡೆ ನೋಡಿದಾಗ ಸಮಯ ಎಂಟು ಗಂಟೆಗೆ ಐದು ನಿಮಿಷ ಕಡಿಮೆಯಿತ್ತು. ಇಡ್ಲಿಯನ್ನು ಜಾಸ್ತಿ ಇಷ್ಟಪಡುವ ನನಗೆ ಪ್ರಿಯವಾದ ತಿಂಡಿಯನ್ನೇ ತಯಾರಿಸಿದ್ದಾಳೆಂದು ಮನದನ್ನೆಯನ್ನು ಹೊಗಳುತ್ತಾ ಹಲ್ಲುಜ್ಜುವ ಸಲುವಾಗಿ ಬಾತ್ ರೂಮ್‌ನತ್ತ ಹೆಜ್ಜೆ ಹಾಕಿದೆ.

ವರಾಂಡದಲ್ಲಿ ಮಲಗಿಕೊಂಡಿದ್ದ ನಮ್ಮ ಮನೆಯ ನಾಯಿ ನನ್ನನ್ನು ಕಂಡ ಕೂಡಲೆ ಕಳ್ಳನನ್ನು ಕಂಡಂತೆ ಒಂದೇ ಸಮನೆ ಒದರತೊಡಗಿತು. ಅದರ ಅರಚಾಟಕ್ಕೆ ನನಗೆ



ಮೈಯೆಲ್ಲಾ ಉರಿದುಹೋಯಿತು. ಆದರೆ ಏನೂ ಅನ್ನುವಂತಿರಲಿಲ್ಲ. ಏಕೆಂದರೆ ಅದು ನನ್ನ ಮುದ್ದು ಹೆಂಡತಿಯ ಪ್ರೀತಿಯ ನಾಯಿಯಾಗಿತ್ತು. ಹೆಂಡತಿ ದಡಬಡಿಸಿ ಹೊರಬಂದವಳೇ, "ಏಯ್, ಟಾಮಿ ಹಾಗೆಲ್ಲಾ ಯಾರೋ ಕಳ್ಳರನ್ನು ನೋಡಿದವರಂತೆ ಒದರಬೇಡ. ಅವರು ಈ ಮನೆಯ ಯಜಮಾನರು. ಆ ಮುಖ ನೆನಪಿನಲ್ಲಿಟ್ಟುಕೊಂಡಿರು'' ಎಂದು ಅದಕ್ಕೆ ಆದೇಶಿಸಿದವಳೇ ನನ್ನತ್ತ ತಿರುಗಿ, "ಅಟ್‌ಲೀಸ್ಟ್ ನಾಯಿಯಾದ್ರೂ ಮೆಚ್ಚಿಕೊಳ್ಳೋ ರೀತಿ ಇರೋದು ಕಲಿತುಕೊಳ್ರಿ'' ಎಂದು ನನಗೇ ತಾಕೀತು ಮಾಡಿ, ಅದರ ಮೈದಡವುತ್ತಾ ಮುಂದಿನಿಂದ ಹಾದು ಹೋಗಲು ಪರವಾನಗಿ ನೀಡಿದಳು. ಎದ್ದ ಬೆಳಗ್ಗೇನೆ ಅವಳೊಂದಿಗಿನ ಜಗಳ ಸರಿಯಲ್ಲವೆಂದು ಸುಮ್ಮನೇ ಹೊರಟುಹೋದೆ.

ನನ್ನ ಹೆಂಡತಿಗೆ ನಾಯಿಯೆಂದರೆ ಅದೇಕೋ ವಿಶೇಷ ಪ್ರೀತಿ. ಬಹಳ ದಿನಗಳಿಂದ ನಾಯಿ ಸಾಕಬೇಕು ಎಂದು ಹೇಳುತ್ತಲೇ ಬಂದಿದ್ದಳು. ನಾನು ಅವಳ ಮಾತನ್ನು ಅಷ್ಟು ಗಮನಕ್ಕೆ ತೆಗೆದುಕೊಂಡಿರಲಿಲ್ಲ. ದಾರಿಯಲ್ಲಿ ಹಾದುಹೋಗುವ ನಾಯಿಗಳನ್ನು ವಿಶೇಷ ಆಸ್ಥೆಯಿಂದ ನೋಡುತ್ತಿದ್ದಳು. ಬಜಾರದಲ್ಲಿ ಅವಳೊಂದಿಗೆ ಜೊತೆಯಾಗಿ ಹೋಗುವುದೇ ಕಷ್ಟದ ಮಾತಾಗಿತ್ತು. ಯಾವುದಾದರೊಂದು ನಾಯಿ ಕಂಡುಬಿಟ್ಟರೆ ಅದನ್ನೇ ನೋಡುತ್ತಾ ನಿಂತು ಬುದ್ಧಿಭ್ರಮಣೆಯಾದವಳೇನೋ ಎಂದು ಅನುಮಾನಿಸುವ ರೀತಿಯಲ್ಲಿ ವರ್ತಿಸಿದ್ದೂ ಉಂಟು. ನನ್ನ ಬಲವಾದ ಪ್ರತಿರೋಧದ ನಡುವೆಯೂ ಈಗ್ಗೆ ಒಂದೆರಡು ದಿನದ ಹಿಂದೆ ಒಂದು ನಾಯಿಯನ್ನು ತಂದು ನನಗಿಂತಲೂ ಅದನ್ನೇ ಹೆಚ್ಚು ಮುದ್ದು ಮಾಡಿ ಕಾಳಜಿ ತೋರುತ್ತಿದ್ದಳು. ಅಂತಹ ನಾಯಿ ನನ್ನನ್ನು ನೋಡಿದಾಗ ಮಾತ್ರ ಅದ್ಯಾರನ್ನೋ ಕಂಡಂತೆ ಒದರುವುದನ್ನು ನಿಲ್ಲಿಸಿರಲಿಲ್ಲ.

ಅರ್ಧ ಗಂಟೆಯಲ್ಲಿ ಸ್ನಾನ ಮುಗಿಸಿ ಡೈನಿಂಗ್ ಟೇಬಲ್ ಬಳಿ ಬಂದೆ. ನಾನು ಸಿದ್ಧನಾಗಿ ಕುಳಿತಿರುವುದನ್ನು ಕಂಡ ಹೆಂಡತಿ ನನ್ನ ಮುಂದೊಂದು ಪ್ಲೇಟ್ ಇಟ್ಟು ಹೋದಳು. ಅದರಲ್ಲಿ ಕಲಸಿದ ಅನ್ನ ಇತ್ತು. ಹಿಂದಿನ ದಿನ ರಾತ್ರಿ ಮಿಕ್ಕಿದ್ದ ಅನ್ನಕ್ಕೆ ಹುಳಿ ಕಲಸಿದ್ದಳು. "ಏನೇ, ಬಿಸಿ ಬಿಸಿಯಾಗಿ ಇಡ್ಲಿ ಮಾಡಿದ್ದೀನಿ ಅಂತ ಹೇಳಿದೆ ?'' "ಹೌದು, ಮಾಡಿದ್ದೇನೆ'' ಅಡುಗೆಮನೆಯಿಂದಲೇ ಉತ್ತರಿಸಿದಳು. "ಹಾಗಿದ್ದರೆ ಇಡ್ಲಿ ಹಾಕೋದು ಬಿಟ್ಟು ತಂಗಳನ್ನವನ್ನ ನೀಡಿದ್ದೀಯಲ್ಲೇ ?'' ಕೂಗಿ ಕೊಂಡೆ. "ಇಡ್ಲಿ ಮಾಡಿರೋದು ನಾಯಿಗೆ, ನಿಮಗಲ್ಲ...'' ತೀರಾ ಸರಳವಾಗಿಯೇ ಹೇಳಿದಳು.

"ಹಾಗಾದ್ರೆ ತಂಗಳನ್ನವನ್ನು ತಿನ್ನೋಕೆ ನಾನೇನು ನಾಯಿಯೇನೇ ?'' ಅಂತ ಕೋಪದ ಆವೇಶದಲ್ಲೇನೋ ಅಂದುಬಿಟ್ಟೆ. "ಹಾಗಂತ ನಾನೆಲ್ರಿ ಹೇಳಿದೆ ? ಪಾಪ, ಆ ನಾಯಿ ತಂಗಳಾಗಿರೋ ಏನನ್ನೂ ತಿನ್ನೊಲ್ಲ. ಅದಕ್ಕೇ ದೊಡ್ಡ ಮನಸ್ಸು ಮಾಡಿ ನೀವೇ ಆ ಅನ್ನ ತಿನ್ನಿ. ನಾಯಿಗೆ ಇಡ್ಲಿ ತಿನ್ನಿಸ್ತೀನಿ,'' ಎಂದು ಹೇಳುತ್ತಾ ನನ್ನ ಕಣ್ಣಮುಂದೆಯೇ ಒಂದು ಪ್ಲೇಟ್‌ನಲ್ಲಿ ಹತ್ತಾರು ಇಡ್ಲಿ ಹಾಕಿಕೊಂಡು ನಾಯಿಗೆ ತಿನ್ನಿಸಲು ಹೋದಳು.

ನನ್ನ ಯಾವ ಮಾತೂ ಅವಳಿಗೆ ಪಥ್ಯವಾಗದಾದಾಗ ತೀವ್ರವಾಗಿ ವಿಚಾರ ಮಾಡತೊಡಗಿದೆ. ನನ್ನ ಮನೆಯಲ್ಲಿ ನನ್ನತನವನ್ನು ಉಳಿಸಿಕೊಳ್ಳಬೇಕಾಗಿತ್ತು. ಅದರಿಂದಾಗಿ ಅಕ್ಷರಶಃ ನನ್ನ ಸ್ಥಿತಿ ನಾಯಿಪಾಡಾಗಿತ್ತು. ಹೆಂಡತಿ ಎದುರು ನಿಂತು ವಾದಿಸಲು ಹೆದರುತ್ತಿದ್ದ ನಾನು ಏನಾದರೊಂದು ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸಿದೆ. 'ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು' ಎಂಬ ಮಾತು ಏಕೋ ಆ ಸಮಯದಲ್ಲಿ ಹೆಚ್ಚು ಸೂಕ್ತವೆನ್ನಿಸಿತು. ಹೆಂಡತಿಯ ನಾಯಿಯ ಮೇಲಿನ ಪ್ರೇಮವನ್ನು ಕಡಿಮೆ ಮಾಡುವಂತಿರಲಿಲ್ಲ. ಹೀಗಾಗಿ ಅದೆಷ್ಟೇ ಬೊಗಳಿದರೂ ನಾನೇ ಅದನ್ನು ಪ್ರೀತಿಸತೊಡಗಿದೆ. ಇದು ಹೆಂಡತಿಗೂ ಕೂಡ ಪ್ರಿಯವಾಗತೊಡಗಿತು. ಕೊನೆಗೆ ನಾಯಿಯೂ ನನ್ನ ಮೇಲೆ ಅನುಕಂಪ ತೋರಿತು. ಮೊದಲಿನಂತೆ ಒದರುವುದನ್ನು ನಿಲ್ಲಿಸಿತು. ನನ್ನನ್ನು ಕಂಡ ಕೂಡಲೇ ಪ್ರೀತಿಯಿಂದ ಬಂದು ಕಾಲು ನೆಕ್ಕತೊಡಗಲು ಶುರುಮಾಡಿತು. ಕೆಲವೇ ದಿನಗಳಲ್ಲಿ ಅದರ ವರ್ತನೆಯಲ್ಲಿ ತೀರಾ ಬದಲಾವಣೆಗಳಾದುವು.

"ಅದು ಹೇಗೂ ಈಗ ನಿಮ್ಮೊಂದಿಗೆ ಸ್ನೇಹದಿಂದಿದೆಯಲ್ಲ, ಇನ್ನು ಮುಂದೆ ದಿನಾಲೂ ಬೆಳಗ್ಗೆ ಅದಕ್ಕೆ ನೀವೇ ಟಿಫಿನ್ ಮಾಡಿಸಿ,'' ಅನ್ನುತ್ತ ಹೆಂಡತಿ ಹೊಸದಾಗಿ ಒಂದು ಕೆಲಸ ಹೇರಿದಳು. ನಾನು ಕೂಡಲೇ ಒಪ್ಪಿಕೊಂಡೆ. ದಿನಗಳೆದಂತೆ ಅದರ ಮಧ್ಯಾಹ್ನದ ಊಟ, ಮುಂಜಾನೆ, ಸಾಯಂಕಾಲದ ವಾಕಿಂಗ್ ಹೀಗೆ ಒಂದೊಂದೇ ಕೆಲಸಗಳು ನನಗೆ ವರ್ಗಾವಣೆ ಆದವು. ಅವಳು ಜವಾಬ್ದಾರಿ ಹೇರಿದಳು ಎನ್ನುವುದಕ್ಕಿಂತ ನಾನೇ ವಹಿಸಿಕೊಂಡೆ ಎನ್ನುವುದೇ ಹೆಚ್ಚು ಸಮಂಜಸ. ಅಂದಿನಿಂದ ನನ್ನ ದಿನಚರಿಯಲ್ಲೂ ಕೆಲವು ಬದಲಾವಣೆಗಳಾದುವು.

ಬೆಳಗ್ಗೆ ವಾಕಿಂಗ್‌ಗೆ ಹೋಗುವಾಗ ನಾಯಿಯ ಸರಪಳಿ ಹಿಡಿದು ರಸ್ತೆಯ ಪಕ್ಕಕ್ಕೆ ಕರೆದು ಕೊಂಡು ಬರುತ್ತಿದ್ದೆ. ವಾಪಸ್ ಬಂದು ಹೊರಗೆ ರೂಮ್‌ನಲ್ಲಿ ಕೂಡಿಹಾಕಿ ನನ್ನ ಕ್ರಿಯಾದಿಗಳೆಲ್ಲಾ ಮುಗಿಯುವಷ್ಟರಲ್ಲಿ ನಾಯಿಗಾಗಿ ಬಿಸಿ ಟಿಫಿನ್ ರೆಡಿಯಾಗಿರುತ್ತಿತ್ತು. ಅದಕ್ಕೆ ಟಿಫಿನ್ ಮಾಡಿಸುವುದು ನನ್ನ ಕೆಲಸವಾದುದರಿಂದ ಪ್ಲೇಟ್ ತೆಗೆದುಕೊಂಡು ಹೊರ ರೂಮ್‌ಗೆ ಬಂದು ಒಳಗಿನಿಂದ ಲಾಕ್ ಮಾಡಿ ಹೊಟ್ಟೆ ತುಂಬ ತಿನ್ನುತ್ತಿದ್ದೆ. ನಂತರ ನನಗೆ ಯಥಾರೀತಿಯಲ್ಲಿ ತಂಗಳು ಅನ್ನ ಸರಬರಾಜಾಗುತ್ತಿತ್ತು. ಹೆಂಡತಿಯ ಎದುರು ಒಂದೆರಡು ತುತ್ತು ತಿಂದವನಂತೆ ನಟಿಸಿ ಉಳಿದುದನ್ನು ನಾಯಿಗೆ ತಿನ್ನಿಸಿ ಕೈ ತೊಳೆದು ಎದ್ದುಬಿಡುತ್ತಿದ್ದೆ. ಮಧ್ಯಾಹ್ನ ಊಟಕ್ಕೆ ಬಂದಾಗಲೂ ಹಾಗೆಯೇ, ಅದಕ್ಕೆಂದು ತೆಗೆದಿರಿಸಿದ್ದ ಅನ್ನವನ್ನು ನಾನು ಊಟ ಮಾಡಿ ಕಾಟಾಚಾರಕ್ಕೆ ನನ್ನ ಪಾಲಿನ ಅನ್ನ ತಿಂದು ಪುನಃ ಆಫೀಸಿಗೆ ಹೋಗುತಿದ್ದೆ. ಬೆಳಗ್ಗೆ ಅವಳು ಅಡುಗೆ ಮಾಡುವುದರಲ್ಲಿ ಹಾಗೂ ಮಧ್ಯಾಹ್ನ ಟಿವಿ ನೋಡುವುದರಲ್ಲಿ, ಮಲಗಿ ನಿದ್ದೆ ಮಾಡುವುದರಲ್ಲಿ ನಿರತಳಾಗಿದ್ದುದರಿಂದ ಎರಡೂ ಸಲ ಬಚಾವಾಗುತ್ತಿದ್ದೆ. ರಾತ್ರಿ ಮಾತ್ರ ಇಬ್ಬರೂ ಕೂಡಿ ಊಟ ಮಾಡುತ್ತಿದ್ದವು. ನಾಯಿಗೆ ಮಾತ್ರ ಬೆಳಗ್ಗೆ ಹಾಗೂ ಮಧ್ಯಾಹ್ನ ಬಿಸಿಯಾಗಿರುವುದೇನೂ ತಿನ್ನಿಸುತ್ತಿರಲಿಲ್ಲ. ಅದು ಹೆಂಡತಿಗೆ ತಿಳಿದಿರಲೂ ಇಲ್ಲ ಬಿಡಿ.

ಸದ್ಯಕ್ಕೆ ಈ ರೀತಿಯ ಗುಟ್ಟಿನ ವ್ಯವಹಾರ ಯಾವ ಅಡೆತಡೆ ಇಲ್ಲದೆ ಬಹಳ ದಿನಗಳಿಂದ ಅವ್ಯಾಹತವಾಗಿ ನಡೆದುಕೊಂಡು ಬಂದಿದೆ. ನಾಯಿ ಬಂದಾಗಿನಿಂದ ನಾಯಿಪಾಡಾಗಿದ್ದ ನನ್ನ ಸ್ಥಿತಿ ಇಂದು ಉತ್ತಮಗೊಂಡು ನಾಯಿಪಾಡೆಂದರೇನು ಎಂಬುದು ನಾಯಿಗೆ ಸಂಪೂರ್ಣವಾಗಿ ಗೊತ್ತಾಗಿಹೋಗಿದೆ. ಅಲ್ಲದೇ ಅದೂ ಸಹ ಈ ಪರಿಸ್ಥಿತಿಗೆ ಹೊಂದಿಕೊಂಡುಬಿಟ್ಟಿದೆ.

ತಮ್ಮಲ್ಲಿ ನನ್ನದೊಂದು ವಿನಂತಿ. ದಯವಿಟ್ಟು ಈ ವಿಷಯವನ್ನು ನನ್ನ ಹೆಂಡತಿಗೆ ಹೇಳಬೇಡಿ. ಹಾಗೊಂದು ವೇಳೆ ಅವಳಿಗೇನಾದರೂ ಈ ತೆರೆಮರೆಯ ಆಟ ಗೊತ್ತಾಗಿಹೋದರೆ ನನ್ನ ಸ್ಥಿತಿ ಮತ್ತೆ ನಾಯಿಪಾಡಾಗುವುದರಲ್ಲಿ ಸಂಶಯವಿಲ್ಲ. ಆಗ ನನಗೆ ಆ ಸ್ಥಿತಿಯನ್ನು ತಂದೊದಗಿಸಿದ ಪಾಪ ನಿಮಗೆ ಬರುತ್ತದೆ, ಹುಷಾರ್ !

ಭೋಜರಾಜ ಸೊಪ್ಪಿಮಠ
ಕಿರಿಯ ತರಬೇತಿ ಅಧಿಕಾರಿ, ಶ್ರೀ ಜಗದ್ಗುರು ತೋಂಟದಾರ್ಯ ಕೈಗಾರಿಕಾ ತರಬೇತಿ ಸಂಸ್ಥೆ
ಮಂಡಲಗಿರಿ - ೫೮೩ ೨೩೨, ಯಲಬುರ್ಗಾ ತಾಲೂಕು, ಕೊಪ್ಪಳ ಜಿಲ್ಲೆ



**ಅಭಿಯಾನ** (ನಾಟಕ)
ಜಯಪ್ರಕಾಶ ಮಾವಿನಕುಳಿ
**ಪುಟ : ೭೪ ಬೆಲೆ : ರೂ. ೬೦**
**ಸ್ಫಟಿಕ ಪ್ರಕಾಶನ,**
'ಮಾವಿನಕುಳಿ ಮನೆ',
ಮೂಡುಬಿದಿರೆ - ೫೭೪
೧೯೭ (ದಕ್ಷಿಣ ಕನ್ನಡ ಜಿಲ್ಲೆ)

ಮಹಾಭಾರತದ ಭೀಷ್ಮ– ಅಂಬೆ - ಅಂಬಿಕೆ - ಅಂಬಾಲಿಕೆಯರ ಸ್ವಯಂವರದ ಪ್ರಸಂಗವನ್ನು ಎತ್ತಿಕೊಂಡು ಈ ನಾಟಕವನ್ನು ರಚಿಸಲಾಗಿದೆ. ಅಂದಿನ ಪ್ರತಿಭಟನೆಯ ದನಿ ಅಂಬೆ. ಭೀಷ್ಮನಂತಹ ಪ್ರತಿಜ್ಞಾಬದ್ಧ, ವಚನಬದ್ಧನನ್ನೇ ಕಸಿವಿಸಿಗೊಳಿಸಿ ನೂರಾರು ಪ್ರಶ್ನೆ ಕೇಳಿದವಳು. ಮೊದಲು ಒಲಿದು ಮತ್ತೆ ನಿರಾಕರಿಸಿದ ಸಾಲ್ವನಿಗೂ ದರ್ಪದ ಶೂರ ಭೀಷ್ಮನಿಗೂ ನಡುವೆ ಕಾಲ್ಚೆಂಡಾದವಳು. ರಾಜಕುಮಾರಿಯಾದರೂ ಅಂದಿನ ಸ್ತ್ರೀಯರ ಸ್ಥಾನಮಾನವನ್ನು ಈ ಸಂಗತಿ ತಿಳಿಸುತ್ತದೆ. ಆಕೆ ಸ್ತ್ರೀಪರ ಅನುಕಂಪವನ್ನು ಗಳಿಸಿದರೂ ಭೀಷ್ಮನ ವರ್ಚಸ್ಸಿಗೆ ಕುಂದು ಬಾರದಿದ್ದರೂ ಅಂಬೆಯ ದ್ವೇಷವನ್ನು ಇಮ್ಮಡಿಗೊಳಿಸಿದ ಕಥಾ ಪ್ರಸಂಗವಿದು. ಇಂತಹ ಪುರಾಣದ ಪ್ರಸಂಗಗಳನ್ನು ಅದೇ ಚೌಕಟ್ಟಿನಲ್ಲಿ ಹೊಸ ನೋಟದಿಂದ ಗ್ರಹಿಸಿದಾಗ ಏನಾದರೂ ಬದಲಾವಣೆಗೊಂಡ ಸಮಾಜ ಕಾಣುತ್ತದೆಯೇ? ಅಥವಾ ಇಂದು ಅಂದಿನ ಪುನರ್ ಆವರ್ತನೆ ಇದೆಯೇ? ಈ ನಾಟಕದಲ್ಲಿ ಅಂದಿಗೂ ಇಂದಿಗೂ ಸಲ್ಲುವಂತಹ ಮಾತುಕತೆ, ಹಾಸ್ಯ, ವ್ಯಂಗ್ಯ, ದುಃಖ, ಆವೇಶ ಎಲ್ಲವೂ ಪಾತ್ರಗಳ ಮೂಲಕ ಹೇಳಿಸಲಾಗಿದೆ. ವಚನಬದ್ಧತೆ, ಕ್ಷತ್ರಿಯಧರ್ಮ, ರಾಜಾ ಬಹುಪತ್ನಿ ವಲ್ಲಭಾ, ಪ್ರತಿಜ್ಞೆ ಎಂಬಂತಹ ಆದರ್ಶಗಳಿಂದ ಪುರಾಣಗಳು ತುಂಬಿತುಳುಕಿವೆ. ಈ ನಾಟಕದಲ್ಲೂ ಈ ಪದಗಳನ್ನು ಸಂದರ್ಭೋಚಿತವಾಗಿ ಬಳಸಿದ್ದಾರೆ. ಸ್ವಾರ್ಥಕ್ಕಾಗಿ ಎಲ್ಲೆಲ್ಲೂ ಆದರ್ಶಗಳನ್ನು ಬಳಸಿ ಬಾಯಿ ಮುಚ್ಚಿಸಲಾಗಿದೆ. ಸ್ತ್ರೀಯರಂತೂ ಅಬಲೆಯರಾಗಿರುವಂತೆಯೇ ಅನೇಕ ಅನರ್ಥಗಳಿಗೂ ಸಂಘರ್ಷಗಳಿಗೂ ಕಾರಣರಾಗಿದ್ದಾರೆ. ಅನೇಕ ಹೊಳಹುಗಳನ್ನು, ಬುದ್ಧಿಗೆ ಚುರುಕಿನ ಗ್ರಾಸವನ್ನೂ ನೀಡುವ ನಾಟಕ. ರಂಗವೇದಿಕೆಯಲ್ಲಿ ಅಭಿನಯಿಸಿದಾಗ ಸೊಗಸು ಹೆಚ್ಚು.

**ಅಮ್ಮನಿಗೆ ಹಜ್ ಬಯಕೆ** (ಸಣ್ಣ ಕಥೆಗಳ ಸಂಕಲನ)
*ಮೂಲ : ಅಸ್ಮಾ ನಾಡಿಯಾ; ಕನ್ನಡಕ್ಕೆ : ಎಚ್. ಎಸ್. ಗೀತಾ*
**ಪುಟ : ೧೧೨** **ಬೆಲೆ : ರೂ. ೭೦**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಇಲ್ಲಿರುವ ಕಥೆಗಳು ಇಂಡೋನೇಶಿಯಾ ದೇಶದವು. ಅಲ್ಲಿನ ಎಳೆಯ ಲೇಖಕಿ ಅಸ್ಮಾ ನಾಡಿಯಾ. ಈಕೆ ಸುಮಾರು ೪೦ ಪುಸ್ತಕಗಳನ್ನು ಬರೆದಿದ್ದು ಒಟ್ಟು ಏಳು ಲಕ್ಷಕ್ಕೂ ಹೆಚ್ಚು ಪ್ರತಿಗಳು ಮಾರಾಟವಾಗಿವೆಯೆಂದರೆ ಈಕೆಯ ಬರವಣಿಗೆಯ ಬಗ್ಗೆ ಇನ್ನೇನೂ ಹೆಚ್ಚು ಹೇಳಬೇಕಾಗಿಲ್ಲ. ಇವರ ಕಥೆಗಳಲ್ಲಿ ದಿಟ್ಟ ಮಹಿಳೆಯರ ಚಿತ್ರಣವೇ ಪ್ರಧಾನವಾಗಿದೆ. ಈ ಕಥೆಗಳಲ್ಲಿ ನಮಗೆ ಸಹ ಮಾನವನ ನೋವಿನ ಪರಿಚಯ ಆಗುತ್ತದೆ. ಇನ್ನೊಬ್ಬರ ಕಷ್ಟಗಳು ಹೆಚ್ಚು ಎಂದು ಅರಿವಾದೊಡನೆ ನಮ್ಮ ವೇದನೆಗಳ ಆವೇಗ ತಗ್ಗುತ್ತದೆ. ಬದುಕಿನಲ್ಲಿ ಕಷ್ಟಕಾರ್ಪಣ್ಯಗಳ ಸುರಿಮಳೆಯಾದಾಗ ನಾವು ದಿಟ್ಟತನದ ಮೊರೆ ಹೋಗಬೇಕಾಗುತ್ತದೆ. ಹೋರಾಟದ ಪಾಠವನ್ನು ಬದುಕು ತಂತಾನೇ ಕಲಿಸುತ್ತದೆ. ದಿಟ್ಟತನದ ಹೋರಾಟವಿಲ್ಲದಿದ್ದಲ್ಲಿ ಬದುಕಿನಲ್ಲಿ ಸೋತು ಕಳೆದುಹೋಗುತ್ತೇವೆನ್ನುವ ಸಂದೇಶ ಕೆಲವು ಕಥೆಗಳಲ್ಲಿದೆ. ಇವು ಇಂಡೋನೇಶಿಯಾದ ನೆಲದಲ್ಲಿ ನಡೆದಿರಬಹುದಾದಂಥ ಘಟನೆಗಳಿರಬಹುದು; ಅಲ್ಲಿನ ಲೇಖಕಿ ಬರೆದಿರಬಹುದು. ಆದರೆ ಘಟನೆಗಳು ಸಾರ್ವತ್ರಿಕವಾಗಿ ನಡೆದು ಕಥಾರೂಪ ಧರಿಸುವುದು ನೊಂದ ಮನಸ್ಸುಗಳ ಚಿಂತನೆಗಳಿಂದ. ಆದ್ದರಿಂದಲೇ ಇಲ್ಲಿ ನೋವಿನ ಕಥೆಗಳಿವೆ. ವಾಸ್ತವಕ್ಕೂ ಕಥೆಗೂ ಅಂತರ ಬಹಳವಿರುವುದಿಲ್ಲ. ಸಂತೋಷದಾಯಕ ಘಟನೆಗಳೇ ನಡೆದಾಗ ಅಲ್ಲಿ ಅಂತಹ ಚಿತ್ರಣವೇ ಮೂಡಬಹುದು. ಇಲ್ಲಿ ಮಹಿಳೆಯ ಬದುಕನ್ನು ಪ್ರಧಾನವಾಗಿಸಿ ಕಥೆಗಳನ್ನು ಹೆಣೆಯಲಾಗಿದೆ.



**ಬಿ. ರಂಗನಾಯಕಮ್ಮ – ಪ್ರಥಮ ಮಹಿಳಾ ಏರೋನಾಟಿಕಲ್ ಎಂಜಿನಿಯರ್**
*ಜಿ. ಎಸ್. ಮಯೂರ*
**ಪುಟ : ೬೦** **ಬೆಲೆ : ರೂ. ೪೦**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಬಿ. ರಂಗನಾಯಕಮ್ಮ ಕರ್ನಾಟಕದ ಪ್ರಥಮ ಮಹಿಳಾ ಏರೋನಾಟಿಕಲ್ ಎಂಜಿನಿಯರ್. ಈ ಹೆಸರುಗಳಿಸಿದ್ದು ಬಹಳ ಸುಲಭವಾಗಿಯೇನೂ ಅಲ್ಲ. ಅಂದಿನ ದಿನಗಳಲ್ಲಿ ಮಹಿಳೆಗೆ ಎಂಜಿನಿಯರಿಂಗ್ ಕಾಲೇಜ್‌ನಲ್ಲಿ ಕಲಿಯುವುದು ಸಾಧ್ಯವಿಲ್ಲವೆಂಬ ಹಿಂಜರಿಕೆ ಇತ್ತು. ಎನ್.ಐ.ಇ. ಕಾಲೇಜಿಗೆ ಅರ್ಜಿಫಾರಂ ತುಂಬಿ, ಸಂದರ್ಶನಕ್ಕೆ ಹಾಜರಾಗಿ, ಆಯ್ಕೆಯೂ ಆಗಿ ಕಾಲೇಜನ್ನೂ ಪ್ರವೇಶಿಸಿ ಮುಂದೆ ಉತ್ತಮ ಅಂಕಗಳನ್ನು ಗಳಿಸಿ ಪ್ರಥಮ ಸ್ಥಾನದೊಂದಿಗೆ ಸುವರ್ಣ ಪದಕವನ್ನೂ ಗಳಿಸಿದ, ಪ್ರಥಮಗಳನ್ನೆಲ್ಲ ಸಾಧಿಸಿದ ಮಹಿಳೆ ಈಕೆ. ಇವರು ಕೆಲವು ಸಮಯ ಬೆಂಗಳೂರಿನಲ್ಲಿ ಸಂಶೋಧಕಿಯಾಗಿದ್ದು ಮುಂದೆ ಅಮೆರಿಕಾಗೆ ಹೆಚ್ಚಿನ ಸಂಶೋಧನೆಗಾಗಿ ತೆರಳಿದರು. ಭಾರತದಲ್ಲೂ ಕೇಂದ್ರಾಡಳಿತಕ್ಕೆ ಒಳಪಟ್ಟ ರಕ್ಷಣಾ ಇಲಾಖೆಯ ಅಂಗಸಂಸ್ಥೆ ಎ.ಡಿ.ಎ.ಯಲ್ಲಿ ಕೆಲಸ ನಿರ್ವಹಿಸಿದ ಪ್ರತಿಭಾವಂತೆ. ಇದೀಗ ಮತ್ತೆ ಅಮೆರಿಕೆಯ 'ಸೈನ್ಸ್ ಅಂಡ್ ಎಂಜಿನಿಯರಿಂಗ್ ಸರ್ವೀಸ್' ಸಂಸ್ಥೆಯಲ್ಲಿ ಸಂಶೋಧನೆ ಮತ್ತು ಇತರ ಕೆಲಸ ಕಾರ್ಯಗಳನ್ನು ನೋಡಿಕೊಂಡಿದ್ದಾರೆ. ಈ ಪುಸ್ತಕವು ಮೈಸೂರಿನಲ್ಲಿ ಕಳೆದ ಅವರ ಬಾಲ್ಯದಿಂದ ಪ್ರಾರಂಭಿಸಿ ಇಂದು ಅವರು ಏರಿದ ಎತ್ತರದ ಸ್ಥಾನದವರೆಗೂ ಸಂಕ್ಷಿಪ್ತವಾಗಿ ತಿಳಿಸುತ್ತದೆ. ಅವರ ವಿದ್ಯಾರ್ಥಿ ಜೀವನದಲ್ಲಿ ಅವರಿಗೆ ಒದಗಿದ ಸಹೃದಯ ಮಹನೀಯರ ಸಹಕಾರ ಹಾಗೂ ಪ್ರೋತ್ಸಾಹ, ಅಧ್ಯಾಪಕವೃಂದದ ವಾತ್ಸಲ್ಯದ ಬಗ್ಗೆ ಓದಿದರೆ ಅದೊಂದು ಸುವರ್ಣಯುಗವೆಂದು ನಮಗನಿಸದೆ ಇರದು.

**ಕಾಸ್ಮಿಕ್ ಡಿಟೆಕ್ಟಿವ್** (ನಮ್ಮ ವಿಶ್ವದ ನಿಗೂಢಗಳ ಅನ್ವೇಷಣೆ)
*ಡಾ|| ಮಣಿಲಾಲ್ ಭೌಮಿಕ್; ಕನ್ನಡ ಅನುವಾದ : ಕೆ. ಪುಟ್ಟಸ್ವಾಮಿ*
**ಪುಟ : ೧೨೮ + ೪೦**
**ಬೆಲೆ : ರೂ. ೧೦೦**
**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦



ಈ ವಿಶ್ವದ ಜನನ ಹೇಗಾಯಿತು? ಪ್ರಶ್ನೆ ಸ್ವಲ್ಪ ವಿಚಿತ್ರವೆನಿಸುವುದೇ? ಹೌದು, ಆದರೂ ಉತ್ತರ ಸಿಗದೆ ನಿರಾಶರಾಗಬೇಕಾಗಿಲ್ಲ. ವಿಜ್ಞಾನಿಗಳನ್ನು ತತ್ವಜ್ಞಾನಿಗಳನ್ನು ಕಾಡಿದ ವಿಶ್ವದ ರಹಸ್ಯದ ಬಗೆಗಿನ ಕೆಲವೊಂದು ಸಂಗತಿಗಳು ಇಪ್ಪತ್ತನೆಯ ಶತಮಾನದಲ್ಲಿ ಕೆಲಮಟ್ಟಿಗೆ ಸಮಾಧಾನಕರ ಉತ್ತರ ಪಡೆದಿವೆ. ಇದು ವಿಶ್ವದ ನಿಗೂಢವನ್ನು ಪತ್ತೆಮಾಡುವ ಸಾಹಸಮಯ ಕಥನ. ಖಗೋಳ ವಿಜ್ಞಾನ ಮತ್ತು ಕಾಸ್ಮಾಲಜಿ ಕ್ಷೇತ್ರಗಳು ನಮ್ಮಲ್ಲಿ ಕುತೂಹಲವನ್ನುಂಟುಮಾಡಿ, ತಣಿಸಿದಷ್ಟೂ ಮತ್ತೆ ಮತ್ತೆ ತಿಳಿದುಕೊಳ್ಳಬೇಕೆಂಬ ಹಂಬಲ ಉಂಟುಮಾಡುತ್ತ ಪ್ರಶ್ನೆಗಳನ್ನು ಕೇಳುವಂತೆ ಮಾಡುತ್ತವೆ. ನಾವು ವಾಸಿಸುವ ಭೂಮಿ, ನಮ್ಮ ಸೌರಮಂಡಲ, ಅದರಾಚೆಗಿನ ವಿಶ್ವ... ಮುಂದಕ್ಕೆ ಯೋಚಿಸಿದರೆ ಏನೆಂದು ತಿಳಿಯಲಾಗದ ಗಾಢಾಂಧಕಾರ – ನಮಗೆ ದಿಗಿಲು ಹುಟ್ಟಿಸುವ ಇವೆಲ್ಲ ಏನೆಂದು ಯೋಚಿಸಿದಾಗ ಆದಿ-ಅಂತ್ಯ ಕಾಣದ ಇವು ರಹಸ್ಯಗಳ ಭಂಡಾರವೆಂದುಕೊಂಡು ಸುಮ್ಮನಾಗುತ್ತೇವೆ. ಆದರೆ ಸುಮ್ಮನಿರುವುದು ವಿಜ್ಞಾನಿಗಳ ಸ್ವಭಾವವಲ್ಲ. ಮನುಷ್ಯನ ಸಾಹಸಪ್ರವೃತ್ತಿ ಧೈರ್ಯ ಮತ್ತು ಅಪಾರ ಬುದ್ಧಿಶಕ್ತಿಯಿಂದಾಗಿ ಇಂದು ಆಶ್ಚರ್ಯಕರ ರೀತಿಯಲ್ಲಿ ವಿಶ್ವದ ನಿಗೂಢಗಳು ಒಂದೊಂದೇ ಬಯಲಾಗುತ್ತಿವೆ. ಕಾಡುಮನುಷ್ಯನಾಗಿದ್ದ ಅವನಿಂದು ವಿಜ್ಞಾನಿಯಾಗಿ ವಿಶ್ವವನ್ನೇ ಜಾಲಾಡುತ್ತಿದ್ದಾನೆಂದರೆ ಅದು ಸಣ್ಣ ಮಾತೇನಲ್ಲ. ಅಮೆರಿಕಾದಲ್ಲಿರುವ ಭಾರತೀಯ ಸಂಜಾತ ವಿಜ್ಞಾನಿ ಮಣಿ ಭೌಮಿಕ್ ಅವರು ಇಂಗ್ಲಿಷ್‌ನಲ್ಲಿ ಬರೆದ 'ಕಾಸ್ಮಿಕ್ ಡಿಟೆಕ್ಟಿವ್' ಎಂಬ ಅಪಾರ ಮಾಹಿತಿಯಿರುವ ಪುಸ್ತಕದ ಕನ್ನಡಾನುವಾದವಿದು. ವಿಶ್ವದ ಮಾಹಿತಿ ನೀಡುವ ೬೨ ಅಪೂರ್ವ ವರ್ಣಚಿತ್ರಗಳಿವೆ.

## ಮರೆಯಲಾಗದ ಸಾಮ್ರಾಜ್ಯ (ಶಾಲಾ ಮಕ್ಕಳಿಗಾಗಿ ಬರೆದ ಲೇಖನಗಳು)

ಎಂ. ವೈ. ಘೋರ್ಪಡೆ; ಅನುವಾದ : ಶ್ರೀಮತಿ ಭಾರತೀ ಕಾಸರಗೋಡು

**ಪುಟ : ೧೨೪** **ಬೆಲೆ : ರೂ. ೬೦**

**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ
ವಿಜಯನಗರ, ಬೆಂಗಳೂರು - ೫೬೦ ೦೪೦

ಅನೇಕ ಮಹನೀಯರ ಅನುಭವದ ನುಡಿಗಳು ಕೆಲವರನ್ನಾದರೂ ಪ್ರಭಾವಿಸಿ ಅವರ ಜೀವಿತದ ನಡೆಯಲ್ಲಿ ಮಾರ್ಗದರ್ಶನ ಮಾಡಬಲ್ಲವು. ಅನೇಕರು ಈ ಸ್ಥಿತಿ ತಲುಪಲು ತಮಗೆ ಇಂಥವರು ಕಾರಣರೆಂದು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುವುದುಂಟು. ಸನ್ಮಾರ್ಗ ತೋರುವವರು ಜನರ ಮನಸ್ಸಿನಲ್ಲಿ ಶಾಶ್ವತವಾಗಿದ್ದು ಅವರನ್ನು ಮರೆಯುವುದು ಸಾಧ್ಯವಾಗುವುದಿಲ್ಲ. ಎಲ್ಲೋ ಕೇಳಿದ ಒಂದು ಮಾತು, ಯಾರೋ ಮಾಡಿದ ಒಂದು ಕೆಲಸ ಇನ್ನಾರಿಗೋ ಜೀವನದ ಗತಿಯನ್ನೇ ಬದಲಾಯಿಸಿಬಿಡುವ ಸಾಮರ್ಥ್ಯ ಹೊಂದಿರಬಹುದು. ಮಹಾತ್ಮರ ಜೀವನದಲ್ಲೂ ಇದು ಸಂಭವಿಸಿರುತ್ತದೆ. ಸಮಾಜಸೇವೆಗಾಗಿ ದುಡಿದ ಇಂತಹ ವ್ಯಕ್ತಿಗಳ ಪರಿಚಯ ಇಲ್ಲಿದೆ. ಶಾಲಾ ಮಕ್ಕಳನ್ನು ದೃಷ್ಟಿಯಲ್ಲಿರಿಸಿ ಬರೆದ ಈ ವ್ಯಕ್ತಿಚಿತ್ರಗಳು ಇಂದಿನ ಮಕ್ಕಳಿಗೆ ಅವಶ್ಯ. ಅವರಲ್ಲಿ ಉತ್ತಮ ನಡವಳಿಕೆಯನ್ನು ಬೆಳೆಸಲು ಸಹಾಯಕವಾಗುವುದಲ್ಲದೆ ಅವರೂ ಮುಂದೊಂದು ದಿನ ಈ ಮಹಾನ್ ಸಾಧಕರ ಸಾಲಿನಲ್ಲೇ ಸೇರಬಹುದು. ಮೊದಲನೇ ಭಾಗದಲ್ಲಿ ವ್ಯಕ್ತಿಪರಿಚಯವಿದ್ದು, ಎರಡನೇ ಭಾಗದಲ್ಲಿ ನಮ್ಮ ವಿಜಯನಗರ ಸಾಮ್ರಾಜ್ಯದ ವೈಭವೋಪೇತವಾದ ಕಿರುಪರಿಚಯವಿದೆ. ವ್ಯಕ್ತಿಗಳು, ಸಾಮ್ರಾಜ್ಯಗಳು ನಶಿಸಿಹೋಗಬಹುದು. ಆದರೆ ನೆನಪುಗಳು ಮಾತ್ರ ನಿರಂತರವಾಗಿರುತ್ತವೆ. ಅವರೆಲ್ಲರೂ ನೀಡಿದ ಸಂದೇಶಗಳಾಗಲಿ, ಆಡಳಿತಗಳು ಮಾಡಿದ ಒಳ್ಳೆಯ ಕೆಲಸಗಳಾಗಲಿ ನಮಗೆ ಎಂದೆಂದೂ ಸ್ಮರಣೀಯ – ಅನುಕರಣಯೋಗ್ಯ. ಈ ಪುಸ್ತಕವು ಶ್ರೀಮತಿ ಭಾರತಿ ಕಾಸರಗೋಡು ಇವರಿಂದ ಸರಳವಾಗಿ ಅನುವಾದಿಸಲ್ಪಟ್ಟಿದೆ.



## ಸುವರ್ಣ ಕಥಾ ಸಂಪುಟ (ಐದು ಸಂಕಲನಗಳ ಐವತ್ತು ಕತೆಗಳು)




ಡಾ|| ಪ್ರಭಾಕರ ಶಿಶಿಲ

**ಪುಟ : xx + ೫೨೪ = ೫೪೪** **ಬೆಲೆ : ರೂ. ೩೨೫**

**ರಾಜ್ ಪ್ರಕಾಶನ,** ನಂ. ೮೩, ಕೆ.ಎಸ್.ಆರ್.ಟಿ.ಸಿ. ಲೇಔಟ್
ಹನುಮಂತನಗರ, ಬನ್ನಿಮಂಟಪ, ಮೈಸೂರು - ೫೭೦ ೦೧೫

ಶ್ರೀ ಪ್ರಭಾಕರ ಶಿಶಿಲ ತಮ್ಮ ಅಧ್ಯಾಪನ ಉದ್ಯೋಗದೊಂದಿಗೇ ಸಾಹಿತ್ಯರಚನೆಯಲ್ಲೂ ತೊಡಗಿ ಎರಡನ್ನೂ ಯಶಸ್ವಿಯಾಗಿಸಿದವರು. ಜೊತೆಗೆ ಸಾಂಸ್ಕೃತಿಕರಂಗದಲ್ಲಿ, ಸಮಾಜಸೇವೆಯಲ್ಲಿ ಗಣನೀಯ ಸಾಧನೆ ಮಾಡಿದವರು. ಈ ಪುಸ್ತಕವು ಇದುವರೆಗಿನ ಅವರ ಐವತ್ತು ಕಥೆಗಳನ್ನು ಒಳಗೊಂಡಿರುವ ಸುವರ್ಣ ಸಂಪುಟವಾಗಿ ಹೊರಬಂದಿದೆ. ಬಂಡಾಯ ಸಾಹಿತ್ಯ ಚಳುವಳಿಯ ಕಾಲದಿಂದ ಪ್ರಾರಂಭಿಸಿ, ಧರ್ಮ-ದೇವರು-ರಾಜಕೀಯದ ನಂಟಿನ ಕಾಲ, ಜಾಗತೀಕರಣದ ಸಂದರ್ಭಗಳನ್ನೆಲ್ಲ ಹಾದು, ಧಾರ್ಮಿಕ ಭಯೋತ್ಪಾದನೆ ಮಿತಿಮೀರಿ ಬೆಳೆದಿರುವ ಇತ್ತೀಚಿನ ಉಸಿರುಗಟ್ಟಿಸುವ ವಾತಾವರಣದ ತನಕ ಇಲ್ಲಿನ ಕಥೆಗಳಿವೆ. ಮನುಷ್ಯರ ಆಕಾಂಕ್ಷೆಗಳು ಅನೇಕ ಕಟ್ಟುಪಾಡುಗಳ ಒಳಗೆ ಬಂಧಿಸಲ್ಪಟ್ಟಿದ್ದು ಹೊರಬರಲು ತವಕಿಸುವಂಥ ಆದರೆ ಹೊರಬರಲಾರದಂತಹ, ಬಂದರೂ ಪ್ರಪಾತಕ್ಕೆ ಬೀಳುವಂತಹ ಅಸಹಾಯಕತೆಯನ್ನು ಕೆಲವು ಕಥೆಗಳು ಹೇಳುತ್ತಿವೆ. ದಕ್ಷಿಣ ಕನ್ನಡದ ದಟ್ಟ ಗ್ರಾಮೀಣ ಪರಿಸರದ ಜನಜೀವನದ ನೈಜ ಚಿತ್ರಣ ಕತೆಗಳಲ್ಲಿ ದೊರಕುತ್ತದೆ. ಒಟ್ಟಿನಲ್ಲಿ ಸುಮಾರು ಮೂರು ದಶಕಗಳ ಕಾಲವನ್ನು ಪ್ರತಿನಿಧಿಸುವಂತಹ ಇವು ಮೂಢನಂಬಿಕೆಗಳನ್ನು ತಿರಸ್ಕರಿಸುತ್ತವೆ; ಜಾತ್ಯತೀತ ಮನೋಭಾವ ಬೆಳೆಸುವ ಪ್ರಯತ್ನ ಮಾಡುತ್ತವೆ. ಜೊತೆಗೇ ನಮ್ಮಲ್ಲಿರುವ ದೌರ್ಬಲ್ಯವನ್ನು, ಆತ್ಮಘಾತಕತನವನ್ನು ಮುಖಕ್ಕೆ ಹೊಡೆದಂತೆ ಹೇಳುತ್ತವೆ. ಕಥೆಗಳನ್ನೋದುತ್ತಲೇ ಅಲ್ಲಿ ನಮ್ಮನ್ನು ಗುರುತಿಸಿಕೊಳ್ಳೋಣ. ನಾವೂ-ನೀವೂ ಈ ಕಥೆಗಳ ಹೊರತಾಗಿಲ್ಲ!

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

---

## ಸಾದರ ಸ್ವೀಕಾರ

**ವಿಜ್ಞಾನ ಎಂದರೇನು ?** ಪ್ರೊ|| ಜೆ. ಆರ್. ಲಕ್ಷ್ಮಣರಾವ್
**ಪುಟ : ೮೮** **ಬೆಲೆ : ರೂ. ೪೫**

**ದೈಹಿಕ ಸ್ವಚ್ಛತೆ** ಡಾ|| ನಾ. ಸೋಮೇಶ್ವರ
**ಪುಟ : ೬೮** **ಬೆಲೆ : ರೂ. ೪೫**

**ಪರಮಾಣು-ಅಣು** ಡಾ|| ಸರ್ವೋತ್ತಮ ವೈ. ಅಂಬೇಕರ
**ಪುಟ : ೮೮** **ಬೆಲೆ : ರೂ. ೪೫**

**ಜೀವಾಧಾರ ಮಣ್ಣು** ಡಾ|| ಪಿ. ಶಿವರಾಮ ರೈ
**ಪುಟ : ೬೪** **ಬೆಲೆ : ರೂ. ೪೫**

**ಕಾಮನಬಿಲ್ಲು** ಪ್ರೊ|| ಅಡ್ಯನಡ್ಕ ಕೃಷ್ಣ ಭಟ್
**ಪುಟ : ೮೪** **ಬೆಲೆ : ರೂ. ೪೫**

**ಜೀವಂತ ಕೋಶ** ಡಾ||ಪಿ. ರಾಜಗೋಪಾಲ್
**ಪುಟ : ೭೬** **ಬೆಲೆ : ರೂ. ೪೫**

**ನಮ್ಮ ದೇಹ** ಡಾ|| ಸಿ. ಆರ್. ಚಂದ್ರಶೇಖರ್
**ಪುಟ : ೬೮** **ಬೆಲೆ : ರೂ. ೪೫**

**ತೊದಲು ಮಾತಿನ ತೊಂದರೆ - ಉಗ್ಗು**
ಡಾ|| ಜಿ. ಪುರುಷೋತ್ತಮ
**ಪುಟ : ೬೪** **ಬೆಲೆ : ರೂ. ೩೫**

**ನಿಮ್ಮ ಬದುಕಿನ ಸಮಸ್ಯೆಗಳಿಗೆ ಪರಿಹಾರ**
ಡಾ|| ಸಿ. ಆರ್. ಚಂದ್ರಶೇಖರ್
**ಪುಟ : ೧೪೦** **ಬೆಲೆ : ರೂ. ೭೦**

ಮೇಲಿನ ಒಂಬತ್ತು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ತನ್ನತನದ ಹುಡುಕಾಟ** (ಚಿಂತನೆಗಳ ಸಂಕಲನ)
ರಹಮತ್ ತರೀಕೆರೆ
**ಪುಟ : ೧೪೦** **ಬೆಲೆ : ರೂ. ೮೦**
**ಅಂತಃಕರಣ,** 'ದೇಸೀ ಸಂಸ್ಕೃತಿ', ಮೈಲಾರೇಶ್ವರ ಸಂಕೀರ್ಣ, ಬಿ. ಹೆಚ್. ರಸ್ತೆ, ಶಿವಮೊಗ್ಗ - ೫೭೭ ೨೦೧

**ಕಪ್ಪೆ ಅರಭಟ್ಟನ ಶಾಸನ** (ಚಾತುರ್ಮಾಸಿಕ) (ಅಧ್ಯಯನ)
ಸಂ. : ಪ್ರೊ|| ಷ. ಶೆಟ್ಟರ್
**ಪುಟ : ೧೦೮** **ಬೆಲೆ : ಬಿಡಿ ಪ್ರತಿ ರೂ. ೮೦**

**ನಮಗೆ ಬೇಕಾದ ಕನ್ನಡ** (ಅಭಿನವ ಚಾತುರ್ಮಾಸಿಕ)
ಸಂ. ನ. ರವಿಕುಮಾರ
**ಪುಟ : ೧೩೦** **ಬೆಲೆ : ಬಿಡಿ ಪ್ರತಿ ರೂ. ೧೫೦**
**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

**ಇತಿಹಾಸ ದರ್ಪಣ** (ತ್ರೈಮಾಸಿಕ) ಸಂ. : ಎಸ್. ಕೆ. ಅರುಣಿ
**ಪುಟ : ೧೧೨** **ಬೆಲೆ : ರೂ. ೧೦೦**
**ಇತಿಹಾಸ ದರ್ಪಣ,** ನಂ. ೩೩-A, ಐ.ಟಿ.ಐ. ಕಾಲೇಜ್ ಹತ್ತಿರ, ಕೆಂಪೇಗೌಡ ನಗರ, ವಿಶ್ವನೀಡಂ ಅಂಚೆ, ಬೆಂಗಳೂರು - ೫೬೦ ೦೯೧

**ಶಿವಾನಂದ** (ಬಿ. ಪಿ. ಶಿವಾನಂದರಾವ್ ಬದುಕು-ಬರಹ)
ಸಂ. : ಡಾ|| ಬಿ. ಎ. ಸನದಿ
**ಪುಟ : ೩೫೬** **ಬೆಲೆ : ರೂ. ೨೦೦**
**ಶ್ರೀ ಬಿ. ಪಿ. ಶಿವಾನಂದರಾವ್ ಸನ್ಮಾನ, ಅಭಿನಂದನಾ ಗ್ರಂಥ ಸಮಿತಿ,** 'ಅಮೃತ್' ಗಿಬ್ ಹೈಸ್ಕೂಲ್ ಹಿಂಬದಿ, ಕುಮಟಾ (ಉ.ಕ.) - ೫೮೧ ೩೪೩

**ಡಾ|| ಸುಬ್ರಹ್ಮಣ್ಯನ್ ಚಂದ್ರಶೇಖರ್** (ಬದುಕು-ಕೊಡುಗೆ)
ಪ್ರೊ|| ಎಚ್. ಆರ್. ರಾಮಕೃಷ್ಣ ರಾವ್
**ಪುಟ : ೧೦೨** **ಬೆಲೆ : ರೂ. ೫೦**

**ಸುಭಾಷಿತ ಸೂಕ್ತಿಮಾಲಾ** ಸಂ. : ಡಾ|| ಆರ್. ಗಣೇಶ್, ವಿದ್ವಾನ್ ಎಸ್. ರಾಜಗೋಪಾಲ ಶರ್ಮ
**ಪುಟ : ೧೫೪** **ಬೆಲೆ : ರೂ. ೫೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಭವನ್ಸ್ ಗಾಂಧೀ ಸೆಂಟರ್ ಆಫ್ ಸೈನ್ಸ್ ಆ್ಯಂಡ್ ಹ್ಯೂಮನ್ ವ್ಯಾಲ್ಯೂಸ್,** ಭಾರತೀಯ ವಿದ್ಯಾ ಭವನ, ನಂ. ೪೩/೧, ರೇಸ್ ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧

**ಅಸಲು-ಘಸಲು** (ಕಥಾ ಸಂಕಲನ) ಎಸ್. ಸೀತಾರಾಮು
**ಪುಟ : ೧೨೪** **ಬೆಲೆ : ರೂ. ೭೦**
**ಶ್ರೀನಿವಾಸ ಪುಸ್ತಕ ಪ್ರಕಾಶನ,** ನಂ. ೧೬೪/ಎ, ಮೊದಲನೇ ಮಹಡಿ, ಎಂ. ಆರ್. ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಮುಖಾ-ಮುಖಿ** (ಸಾಮಾಜಿಕ ಕಾದಂಬರಿ)
ಬಿ. ಪಿ. ಶಿವಾನಂದ ರಾವ್
**ಪುಟ : ೧೪೪** **ಬೆಲೆ : ರೂ. ೮೫**
**ಸೃಷ್ಟಿ ಪಬ್ಲಿಕೇಷನ್ಸ್,** ವಿಜಯನಗರ, ಬೆಂಗಳೂರು - ೪೦

# ಸಂತಾನಹೀನತೆಗೆ ಕಾರಣವಾಗುತ್ತಿದೆ

# ದಢೂತಿತನ !



ಒಬ್ಬ ವ್ಯಕ್ತಿಯ ದೇಹದ ತೂಕದಲ್ಲಿ ಶೇಕಡ 30ರಷ್ಟು ಕೊಬ್ಬೇ ಇದ್ದರೆ ಅಂಥವರನ್ನು ದಢೂತಿ ಅಥವಾ ಬೊಜ್ಜು ದೇಹಿಗಳು ಎನ್ನಬಹುದು. ಹೃದಯದ ತೊಂದರೆಗಳು, ಅಧಿಕ ರಕ್ತದೊತ್ತಡ, ಮಧುಮೇಹ, ಸಂಧು ನೋವು ಮೊದಲಾದ ಸಮಸ್ಯೆಗಳಿಗೆ ಬೊಜ್ಜು ಕಾರಣವಾಗುತ್ತದೆ ಎನ್ನುವುದು ಹಳೆಯ ಮಾತು. ಆದರೆ ಬೊಜ್ಜಿನ ದುಷ್ಪರಿಣಾಮ ಇಷ್ಟಕ್ಕೇ ನಿಂತಿಲ್ಲ. ಸಂತಾನಹೀನತೆಗೂ ಅದು ಪ್ರಮುಖ ಕಾರಣವಾಗುತ್ತಿದೆ. ಬೊಜ್ಜಿನಿಂದ ಸಂತಾನಹೀನತೆಯಂಥ ಸಮಸ್ಯೆ ಕಾಣಿಸಿ ಕೊಳ್ಳುವುದು ಮಹಿಳೆಯರಲ್ಲಿ ಮಾತ್ರ ಎನ್ನುವ ತಿಳಿವಳಿಕೆ ಈತನಕ ಇತ್ತು. ಬೊಜ್ಜು ದೇಹಿ ಪುರುಷರಲ್ಲೂ ಸಂತಾನ ಸಮಸ್ಯೆ ಕಂಡು ಬರುತ್ತದೆ ಎಂಬುದನ್ನು ಇತ್ತೀಚಿನ ಸಂಶೋಧನೆ ಸಾಬೀತುಪಡಿಸಿದೆ.

ಅಂಡಾಶಯ ಹಾಗೂ ಅಡ್ರಿನಲ್ ಗ್ರಂಥಿ ಹೀಗೆ ಎರಡು ಮೂಲಗಳಿಂದ ದೇಹಕ್ಕೆ ಈಸ್ಟ್ರೋಜನ್ ಹಾರ್ಮೋನು ಸರಬರಾಜಾಗುತ್ತದೆ. ಬೊಜ್ಜುದೇಹಿಗಳಲ್ಲಿ ಈ ಗ್ರಂಥಿಗಳ ಕಾರ್ಯ ಏರುಪೇರಾಗುವುದೇ ಸಂತಾನಹೀನತೆಗೆ ಮುಖ್ಯ ಕಾರಣ.

ಋತುಚಕ್ರದ ಕ್ರಮಬದ್ಧತೆ ಮೇಲೂ ಕೆಲವು ತೊಂದರೆಗಳನ್ನು ಪತ್ತೆ ಮಾಡುವುದು ಸಾಧ್ಯ. ಋತುಚಕ್ರ ಸರಿಯಾಗಿಲ್ಲದಿದ್ದರೆ ಏನು...

- ಜನಿಸುವ ಮಗುವಿನ ತೂಕದಲ್ಲಿ ಏರುಪೇರು.
- ಅವಧಿ ಪೂರ್ವ ಹೆರಿಗೆ ಆಗಬಹುದು.
- ಸಹಜ ಹೆರಿಗೆ ಬದಲು ಸಿಸೇರಿಯನ್‌ಗೆ ಒಳಗಾಗುವ ಸಾಧ್ಯತೆ ಹೆಚ್ಚು.

ಇಂಥ ತೊಂದರೆದಾಯಕ ಬೊಜ್ಜು ಕರಗಿಸಿಕೊಳ್ಳಲು, ಬೊಜ್ಜಿನಿಂದ ದೂರವಿರಲು ಇಂದು ಹಲವು ರೀತಿಯ ದಾರಿಗಳಿವೆ. ಸಾಮಾನ್ಯವಾದುವು :

**ಪಥ್ಯ ಮತ್ತು ವ್ಯಾಯಾಮ**

ಸ್ಯಾಚುರೇಟೆಡ್ ಫ್ಯಾಟ್, ಸಕ್ಕರೆಯುಕ್ತ ಆಹಾರ ಸೇವನೆ ಬಿಡಿ. ಹಸಿ ತರಕಾರಿ, ಸೊಪ್ಪು, ಹಣ್ಣುಗಳಂಥ ಆಹಾರವನ್ನು ಜಾಸ್ತಿ ಸೇವಿಸಿ. ನಿತ್ಯವೂ ವ್ಯಾಯಾಮ ಮಾಡಿ. ವಾಕಿಂಗ್, ಏರೋಬಿಕ್ಸ್ ಇವೆಲ್ಲ ತೂಕ ಇಳಿಸಲು ಸಹಕಾರಿ.

**ಪುರುಷರಲ್ಲಿ ತೊಂದರೆಗಳು**

ಪುರುಷನೊಬ್ಬನ ದೇಹದ ತೂಕಕ್ಕೂ ಹಾಗೂ ಆತನ ವೀರ್ಯಾಣುಗಳ ಗುಣಮಟ್ಟಕ್ಕೂ ಸಂಬಂಧ ಇದೆ. ಯಾರು ಅತಿಯಾದ ತೂಕ ಹೊಂದಿರುತ್ತಾರೋ ಅಂಥವರ ವೀರ್ಯಾಣುಗಳ ಗುಣಮಟ್ಟ ಕಳಪೆಯಾಗಿರುತ್ತದೆ ಎಂಬುದು ಸಂಶೋಧನೆಗಳಿಂದ ದೃಢಪಟ್ಟಿದೆ. ಇಂಥ ವ್ಯಕ್ತಿಗಳಲ್ಲಿ ವೀರ್ಯದ ಪ್ರಮಾಣವೂ ಗಣನೀಯವಾಗಿ ಕಡಮೆಯಾಗುತ್ತದೆ ಎನ್ನುತ್ತಾರೆ ಸಂಶೋಧಕರು. ಏಕೆ ಹೀಗೆ ?

ಪುರುಷರ ಲೈಂಗಿಕಾಂಗಗಳ ಬೆಳವಣಿಗೆ, ಲೈಂಗಿಕ ಸ್ವಭಾವಗಳ ಮೇಲೆ ಪ್ರಮುಖ ಪರಿಣಾಮ ಬೀರುವುದು ಟೆಸ್ಟೋಸ್ಟಿರಾನ್ ಹಾರ್ಮೋನ್. ಸಂಶೋಧಕರು ಹೇಳುವ ಪ್ರಕಾರ ಟೆಸ್ಟೋಸ್ಟಿರಾನ್ ಹಾರ್ಮೋನ್‌ಗಳು ಮುಖ್ಯವಾಗಿ ಬಿಡುಗಡೆಯಾಗುವುದು ವೃಷಣದಲ್ಲಿನ ಪ್ರಮುಖ ಕಾರಣ ಗಳಿಂದ. ಇದಕ್ಕೆ ಪಿಟ್ಯೂಟರಿ ಗ್ರಂಥಿಯಿಂದ ಬಿಡುಗಡೆಯಾಗುವ ಎಲ್‌ಎಚ್ ಹಾರ್ಮೋನ್‌ಗಳ ಉತ್ತೇಜನಬೇಕು. ಚಟುವಟಿಕೆಯಿಂದ ಇರುವವರು, ನಿರಂತರ ದೈಹಿಕ ಶ್ರಮ ವಹಿಸುವವರಲ್ಲಿ ಮಾತ್ರ ಇಂಥ ಹಾರ್ಮೋನ್‌ಗಳ ಕಾರ್ಯ ಸರಿಯಾಗಿ ಆಗಲು ಸಾಧ್ಯ. ಅಂದರೆ ಒಟ್ಟಾರೆಯಾಗಿ, ಬೊಜ್ಜು ದೇಹಿಗಳಲ್ಲಿ ದೈಹಿಕ ಚಟುವಟಿಕೆ ಕಡಿಮೆ ಇರುವುದು ಸಂತಾನಹೀನತೆಗೆ ಮುಖ್ಯ ಕಾರಣ. ಬೊಜ್ಜು ಬಂದವರಲ್ಲಿ ಲೈಂಗಿಕ ಆಸಕ್ತಿ ಕೂಡ ಮೊದಲಿಗಿಂತ ಕಡಿಮೆಯಾಗುವುದು ಇದು ಉತ್ತಮ ಉದಾಹರಣೆ ಎನ್ನುತ್ತಾರೆ. ಬೊಜ್ಜು ಕ್ಲಿನಿಕ್, ವಿಕ್ರಂ ಆಸ್ಪತ್ರೆ, ಮಿಲ್ಲರ್ಸ್ ರಸ್ತೆ ಬೆಂಗಳೂರು. ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ: ಡಾ|| ಟುಲಿಪ್ (080-4500 4500).

ನಾನಾ ಆಹಾರಗಳ ಮೂಲಕ ದೇಹದೊಳಗೆ ಸೇರುವ ಝಿಂಕ್ ಅಂಶ ಕೂಡ ಮನುಷ್ಯನ ಲೈಂಗಿಕ ಚಟುವಟಿಕೆ ಮೇಲೆ ಪರಿಣಾಮ ಬೀರುತ್ತದೆ. ಕೂದಲು, ಚರ್ಮ ಮೊದಲಾದ ಅಂಗಗಳ ಆರೋಗ್ಯ ಕಾಪಾಡಿಕೊಳ್ಳುವಲ್ಲಿ, ವೀರ್ಯಾಣುಗಳ ಗುಣಮಟ್ಟ ಹಾಗೂ ಗರ್ಭ ಧರಿಸುವ ಸಾಮರ್ಥ್ಯ ಕಾಯ್ದುಕೊಳ್ಳುವಲ್ಲಿ ಝಿಂಕ್ ಪ್ರಮುಖ ಪಾತ್ರವಹಿಸುತ್ತದೆ. ಇವರಲ್ಲಿ ವೀರ್ಯದ ಗುಣಮಟ್ಟ ಕುಸಿಯುವುದು ಸಾಮಾನ್ಯ. ಬೇಳೆ-ಕಾಳುಗಳು, ಬೀಜಗಳು ಸಮುದ್ರ ಚಿಪ್ಪು, ಮಾಂಸಾಹಾರ ಸೇವಿಸುವುದರಿಂದ ದೇಹದ ಹೆಚ್ಚಿನ ಝಿಂಕ್ ಅಂಶ ದೊರೆಯುತ್ತದೆ.

ಇತ್ತೀಚೆಗೆ ಅತಿ ಬೊಜ್ಜು ನಿವಾರಣೆಗಾಗಿ ಕೆಲವು ತರಹದ ಉದರದರ್ಶಕ ಶಸ್ತ್ರ ಚಿಕಿತ್ಸೆಗಳು ಬಂದಿವೆ. ಇಂತಹ ಶಸ್ತ್ರ ಚಿಕಿತ್ಸೆಯನ್ನು ಕೇವಲ 'ಅರ್ಧ ಅಥವಾ ಒಂದು ಸೆಂಟಿ ಮೀಟರ್ ಗಾತ್ರದ ಚಿಕ್ಕ ರಂಧ್ರಗಳ ಮೂಲಕ ಮಾಡಲಾಗುತ್ತದೆ. ಇದರಿಂದ 30ರಿಂದ 80 ಕೆಜಿಯವರೆಗೂ ತೂಕವನ್ನು ಕಡಿಮೆ ಮಾಡಿಕೊಳ್ಳಲಾಗುವುದು. ಹೀಗೆ ತೂಕ ಕಡಿಮೆಯಾದ ನಂತರ ಹಾರ್ಮೋನುಗಳು ಸಹಜ ಸ್ಥಿತಿಗೆ ಬಂದು, ಋತುಚಕ್ರ ಸಾಮಾನ್ಯವಾಗಿ ಸಂತಾನಕ್ಕೂ ಸಹಾಯಮಾಡುವುದು. ಇಂತಹ ಒಂದು ಶಸ್ತ್ರ ಚಿಕಿತ್ಸೆಯಾದ ನಂತರ, ಒಂದು ವಾರದ ಬಳಿಕ ಎಲ್ಲ ಕೆಲಸ ಮಾಡುವ ಸ್ಥಿತಿಗೆ ಮರಳಬಹುದು. ಕೇವಲ 3 ದಿನ ಆಸ್ಪತ್ರೆಯಲ್ಲಿ ದಾಖಲಾಗಬೇಕಾಗುವುದು. ಇಂತಹ ಶಸ್ತ್ರ ಚಿಕಿತ್ಸೆಯಿಂದ ಬಂಜೆತನ ನಿವಾರಣೆಯಾಗುವುದಲ್ಲದೆ, ಬೊಜ್ಜಿನಿಂದ ಬರುವಂತಹ ಮಧುಮೇಹ, ರಕ್ತದೊತ್ತಡ ಮತ್ತಿತರ ಖಾಯಿಲೆಗಳ ನಿವಾರಣೆ ಮಾಡಿಕೊಳ್ಳಬಹುದು.

**- ಡಾ|| ರಮೇಶ್ ಎಂ., ವಿಕ್ರಂ ಆಸ್ಪತ್ರೆ, 98450 06123**

**ಡಾ|| ಟುಲಿಪ್, ವಿಕ್ರಂ ಆಸ್ಪತ್ರೆ, 98453 74457**



**ನಭಾವಲೋಕನ**

# ಕ್ಯಾಮೆರಾಗೆ ಕೈತುಂಬ ಕೆಲಸ

**ಸಂ**ಜೆಯ ಆಕಾಶದಲ್ಲಿ ಶನಿ ಗ್ರಹ ಪೂರ್ವದಲ್ಲಿ ಕಾಣಿಸುತ್ತದೆ. ದೂರದರ್ಶಕ ಇರುವವರಿಗೆ ಒಳ್ಳೆಯ ಅವಕಾಶ. ಕಳೆದ ತಿಂಗಳು ವಿಯುತಿಯಲ್ಲಿದ್ದ ಶನಿ ಈಗಲೂ ರಾತ್ರಿ ಇಡೀ ಕಾಣುವುದೇ ವಿಶೇಷ.

ಶುಕ್ರ ಬೆಳಗಿನ ಜಾವ ಕಾಣುತ್ತದೆ. ತಿಂಗಳ ಮೊದಲವಾರದಲ್ಲಿ ಗುರು, ಬುಧ ಮತ್ತು ಮಂಗಳ ಮೂರು ಗ್ರಹಗಳನ್ನು ಕಾಣಬಹುದು. ಇವೇ ಆ ಗ್ರಹಗಳು. ಮುಂಜಾವಿನಲ್ಲಿ ನಾಲ್ಕು ಗ್ರಹಗಳನ್ನು ಹೀಗೆ ಒಟ್ಟಿಗೇ ನೋಡುವ ಅವಕಾಶ ಇದೆ. ಮೊದಲನೆಯ ತಾರೀಖಿನಂದು ಬಾಲಚಂದ್ರ ಈ ಗುಂಪನ್ನು ತೋರಿಸಿಕೊಟ್ಟು ಮಾಯವಾಗುತ್ತದೆ. ೮ರಂದು ಗರಿಷ್ಠ ಎತ್ತರದಲ್ಲಿ ಕಾಣುವ ಬುಧ ಮುಂದೆ ಪುನಃ ದಿಗಂತದತ್ತ ಇಳಿಯತೊಡಗುತ್ತದೆ. ಗ್ರಹವನ್ನು ಗುರುತಿಸಲು ಇದು ಒಳ್ಳೆಯ ಅವಕಾಶ. ತಿಂಗಳ ಕೊನೆಗೆ ಗ್ರಹಗಳು ದೂರ ದೂರವಾಗುವುದನ್ನೂ ಕಾಣಬಹುದು. ಇದನ್ನು ಗುರುತಿಸಲು ಪುನಃ ಬಾಲಚಂದ್ರನ ಸಹಾಯ ಪಡೆಯಬಹುದು. ೨೯ರಂದು ಗುರುವಿನ ಪಕ್ಕ, ೩೦ರಂದು ಮಂಗಳದ ಪಕ್ಕ, ೩೧ರಂದು ಬುಧ, ಶುಕ್ರಗಳ ಜೊತೆ ಕಾಣುವ ಚಂದ್ರ ಒಳ್ಳೆಯ ಮಾರ್ಗದರ್ಶಿ. ಪ್ರತಿ ಮುಂಜಾವು ಈ ಚುಕ್ಕೆಗಳನ್ನು ಗಮನಿಸುತ್ತಿದ್ದರೆ ಯಾವ ಗ್ರಹ ವೇಗವಾಗಿ ಚಲಿಸುತ್ತದೆ, ಯಾವುದು ನಿಧಾನ ಎಂದು ಅರ್ಥ ಮಾಡಿಕೊಳ್ಳಬಹುದು. ಕ್ಯಾಮೆರಾ ಇದ್ದವರು ಪ್ರಯತ್ನಗಳನ್ನು ನಡೆಸಿ ಚಿತ್ರೀಕರಿಸುವುದನ್ನು ಕಲಿಯಲು ಒಳ್ಳೆಯ ಅವಕಾಶ.

ಸಂಜೆಯ ಆಕಾಶದಲ್ಲಿ ಕಾಣುವ ಮಹಾವ್ಯಾಧ, ಮಿಥುನ, ವಿಜಯಸಾರಥಿ ಇತ್ಯಾದಿ ಪ್ರಕಾಶಮಾನ ಪುಂಜಗಳ ಹೊರತಾಗಿ ಆಕಾಶಗಂಗೆಯ ಸೌಂದರ್ಯ ಆಸ್ವಾದಿಸಲು ಅವಕಾಶ ದೊರಕಲಾರದು. ತೆಳ್ಳನೆಯ ಮೋಡಗಳು ಆವರಿಸತೊಡಗುವುವು. ಆದರೆ ಶನಿಯ ಪಕ್ಕದ ಚಿತ್ರಾ ನಕ್ಷತ್ರ, ಅದರ ಉತ್ತರಕ್ಕೆ ಸ್ವಾತಿ ಇವುಗಳನ್ನು ಸುಲಭವಾಗಿ ಕಾಣಬಹುದು. ಸ್ವಲ್ಪ ದಕ್ಷಿಣಕ್ಕೆ ಕಾಣುವ ಐದು ನಕ್ಷತ್ರಗಳ ಗುಂಪು ಹಸ್ತಾ. ಇದನ್ನು ಗುರುತಿಸಲು ೧೪ರ ಸಂಜೆ ಚಂದ್ರನನ್ನು ನೋಡಿ. ಇದರ ಉತ್ತರಕ್ಕೆ ಚಿತ್ರಾ ಮತ್ತು ಸ್ವಾತಿ ಕಾಣುತ್ತವೆ; ದಕ್ಷಿಣಕ್ಕೆ ಹಸ್ತಾ ಕಾಣುತ್ತದೆ.

ಮೇ ತಿಂಗಳುದ್ದಕ್ಕೂ ಉಲ್ಕಾ ವೃಷ್ಟಿ ಮಂದಗತಿಯಲ್ಲಿ ಸಾಗುತ್ತದೆ. ಬೆಳಗಿನ ಜಾವ ಎದ್ದು ನೋಡಿದವರಿಗೆ ನಾಲ್ಕು ಗ್ರಹಗಳ ಜೂಟಾಟದ ಜೊತೆ ಒಂದೆರಡು ಉಲ್ಕೆಗಳೂ ಕಾಣುವುವು. ಇವು ಹ್ಯಾಲೀ ಧೂಮಕೇತುವಿನ ತುಣುಕುಗಳು. ಭೂಮಿ ಈ ಧೂಮಕೇತುವಿನ ಕಕ್ಷೆಯತ್ತ ಹೋದಾಗ ಅಲ್ಲಿ ಹರಡಿಕೊಂಡಿರುವ ಸಣ್ಣ ಕಣಗಳು ಆಕರ್ಷಿತವಾಗಿ ಭೂಮಿಯ ಮೇಲೆ ಬಿದ್ದು ಉರಿದು ಹೋಗುವುವು. ಆರರಂದು ಗರಿಷ್ಠ, ಅಂದರೆ ಹೆಚ್ಚು ಉಲ್ಕೆಗಳು ಬೀಳುವುವು. ಗಂಟೆಗೆ ೧೫ರಿಂದ ೨೦ ಉಲ್ಕೆಗಳು ಕಾಣಬಹುದು. ಇದು ಕುಂಭರಾಶಿಯಿಂದ ಹೊರಟಂತೆ ಕಾಣುವುದರಿಂದ ಅಕ್ವಾರಿಡ್ಸ್ ಎಂಬ ಹೆಸರಿದೆ.

ಜೂನ್ ಒಂದರಂದು ಅಮಾವಾಸ್ಯೆ; ಸೂರ್ಯ ಗ್ರಹಣವಿದೆ. ಆದರೆ ನಮಗೆ ಕಾಣುವುದಿಲ್ಲ. ಚಂದ್ರನ ನೆರಳು ನಮ್ಮ ಹಗಲಿನಲ್ಲಿಯೇ (ಸುಮಾರು ೧೦ಗಂಟೆಯಿಂದ ಎರಡು ಗಂಟೆಯವರೆಗೆ) ಭೂಮಿಯ ಮೇಲೆ ಬೀಳು ವುದಾದರೂ ಅಂಟಾರ್ಕ್ಟಿಕಾದ ಮೇಲೆ ಮಾತ್ರ ಬೀಳುತ್ತದೆ. ನಮಗೆ ಅದರ ಅನುಭವ ಆಗುವುದಿಲ್ಲ.






ಮೇ ೧೧, ಮುಂಜಾವು, ಶನಿಯ ಹೊರತಾಗಿ ಉಳಿದ ನಾಲ್ಕು ಗ್ರಹಗಳು

## ಖಗೋಳ ದಿನಚರಿ

ಮೇ ೧ ಮುಂಜಾವು ಬುಧ, ಮಂಗಳ, ಗುರು ಚಂದ್ರ ಗುಂಪುಗೂಡುತ್ತವೆ.*
೩ ಅಮಾವಾಸ್ಯೆ ೧೨:೨೧ಕ್ಕೆ
೮ ಬುಧ ಗ್ರಹದ ಗರಿಷ್ಠ ಕೋನೋನ್ನತಿ*
೧೦ ಚಾಂದ್ರಮಾಸದ ಮೊದಲ ಪಾದ ಬುಧ - ಗುರು ಜೋಡಿ*
೧೧ ಶುಕ್ರ - ಗುರು ಜೋಡಿ*
೧೪ ಚಂದ್ರ - ಚಿತ್ರಾ ಜೋಡಿ*
೧೫ ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೧೮ ಹುಣ್ಣಿಮೆ ೧೬:೩೯ಕ್ಕೆ; ಚಂದ್ರನ ಸಮೀಪ ಜ್ಯೇಷ್ಠಾ ನಕ್ಷತ್ರ*
೨೦ ಬುಧ - ಮಂಗಳ ಜೋಡಿ*
೨೨ ಮಂಗಳ - ಶುಕ್ರ ಜೋಡಿ*
೨೪ ಚಾಂದ್ರಮಾಸದ ಕೊನೆಯ ಪಾದ
೨೮ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೨೯ ಗುರು - ಚಂದ್ರ ಜೋಡಿ*
೩೦ ಮಂಗಳ - ಚಂದ್ರ ಜೋಡಿ*
೩೧ ಬುಧ - ಶುಕ್ರ - ಚಂದ್ರಗಳ ಪುಟ್ಟ ಗುಂಪು*
ಜೂನ್ ೧ ಅಮಾವಾಸ್ಯೆ ಸೂರ್ಯಗ್ರಹಣ (ಭಾರತಕ್ಕೆ ಕಾಣುವುದಿಲ್ಲ)

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)


**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

ಡಾ|| ಸಿ. ಆರ್. ಚಂದ್ರಶೇಖರ್



# ರೋಗಗ್ರಸ್ತ ಸರ್ಕಾರಿ ಆಸ್ಪತ್ರೆಗಳು: ಮಠಗಳಿಗೆ ವಹಿಸುವುದು ಮೂರ್ಖತನ

**ಸರ್ಕಾರಿ ಆಸ್ಪತ್ರೆಗಳ ನಿರ್ವಹಣೆಗೆ ರಾಜ್ಯದ ಯಾವುದೇ ಮಠಮಂದಿರಗಳು ಮುಂದೆ ಬಂದರೆ ಅವುಗಳಿಗೆ ನೆರವು ನೀಡಲು ಸರಕಾರ ಸಿದ್ಧ ಎಂದು ಮುಖ್ಯಮಂತ್ರಿ ಯಡಿಯೂರಪ್ಪ ಹೇಳಿದ್ದಾರೆ. ಸರ್ಕಾರಿ ಆಸ್ಪತ್ರೆಗಳಿಗೆ ಎಷ್ಟೇ ಹಣ ನೀಡಿದರೂ ಬಡವರಿಗೆ ಒಳ್ಳೆಯ ಚಿಕಿತ್ಸೆ ದೊರೆಯುತ್ತಿಲ್ಲ. ಆದ್ದರಿಂದ ಅವುಗಳ ನಿರ್ವಹಣೆಯನ್ನು ಮಠಮಂದಿರಗಳಿಗೆ ವಹಿಸುವುದು ಒಳ್ಳೆಯದು ಎನ್ನುವುದು ಸರಕಾರದ ಅಭಿಪ್ರಾಯ. ಸರ್ಕಾರಿ ಆಸ್ಪತ್ರೆಗಳ ನಿರ್ವಹಣೆಯನ್ನು ಮಠಗಳಿಗೆ ಒಪ್ಪಿಸುವ ಸರ್ಕಾರದ ಈ ಪ್ರಸ್ತಾಪವನ್ನು ಆರೋಗ್ಯದ ಕುರಿತ ಕಾಳಜಿ ಇರುವ ಎಲ್ಲರೂ ವಿರೋಧಿಸಬೇಕು. ಇದು ನೆಗಡಿಯಾಯಿತೆಂದು ಮೂಗು ಕೊಯ್ಯುವಂಥ ನಿರ್ಧಾರ. ಬಡವರಿಗಿರುವ ಏಕೈಕ ಆಸರೆಯೆಂದರೆ ಸರ್ಕಾರಿ ಆಸ್ಪತ್ರೆಗಳು. ಅವುಗಳನ್ನೂ ಮಠಗಳಿಗೆ ಒಪ್ಪಿಸುವ ಸರ್ಕಾರದ ಹುನ್ನಾರವನ್ನು ತಡೆಯಬೇಕು.**

"ಆಸ್ಪತ್ರೆಗಳನ್ನು ನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಅವುಗಳನ್ನು ಮಠಗಳಿಗೊಪ್ಪಿಸುವುದು ಉತ್ತಮ'' ಎಂಬ ಸರ್ಕಾರದ ವಾದವೇ ಅರ್ಥವಿಲ್ಲದ್ದು. ನಿರ್ವಹಣೆಯ ಹೊಣೆಯಿರುವುದು ಸರ್ಕಾರದ ಮೇಲೆಯೇ. ಅದು ಸಾಧ್ಯವಾಗುತ್ತಿಲ್ಲ ಎಂದರೆ ಸರ್ಕಾರ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತಿಲ್ಲ ಎಂದರ್ಥ. ಸರ್ಕಾರ ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಿದರೆ ಆಸ್ಪತ್ರೆಗಳು ಸರಿಯಾಗಿರುತ್ತವೆ.

ಆರೋಗ್ಯವಂತ ಜನ ದೇಶದ ಬೆನ್ನೆಲುಬು. ಜನರ ಆರೋಗ್ಯ ರಕ್ಷಣೆ ಮತ್ತು ವರ್ಧನೆ ಯಾವುದೇ ಸರ್ಕಾರದ ಆದ್ಯ ಕರ್ತವ್ಯ. ನಮ್ಮ ದೇಶದಲ್ಲಿ ಆರೋಗ್ಯ ನೀತಿಯನ್ನು ಕೇಂದ್ರ ಸರ್ಕಾರವು ರೂಪಿಸಿ ಆರೋಗ್ಯ ಸೇವೆಗಳ ಅನುಷ್ಠಾನವನ್ನು ರಾಜ್ಯ ಸರ್ಕಾರಗಳಿಗೆ ಒಪ್ಪಿಸಿದೆ. ಆಸ್ಪತ್ರೆಗಳನ್ನು ಎಲ್ಲೆಡೆ ಸ್ಥಾಪಿಸಿ ವೈದ್ಯರು ಮತ್ತು ವೈದ್ಯ ಸಿಬ್ಬಂದಿಯನ್ನು ನೇಮಕಮಾಡಿ ಜನರಿಗೆ ಉಚಿತವಾಗಿ ಆರೋಗ್ಯ ಸೇವಾಸೌಲಭ್ಯಗಳನ್ನು ರಾಜ್ಯಸರ್ಕಾರ ಒದಗಿಸಬೇಕು. ಪ್ರತಿರಾಜ್ಯದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇದ್ದು, ಚಿಕಿತ್ಸೆಯ ಜೊತೆ ಜೊತೆಗೆ ರೋಗ ಪ್ರತಿಬಂಧಕ ಮತ್ತು ಆರೋಗ್ಯವರ್ಧನೆಗಳಿಗೆ ಯೋಜನೆಗಳಿವೆ. ಶೇಕಡ ೮೨ರಷ್ಟು ವೆಚ್ಚವನ್ನು ರಾಜ್ಯ ಸರ್ಕಾರವು ಭರಿಸಿದರೆ, ಶೇಕಡ ೧೮ರಷ್ಟು ವೆಚ್ಚವನ್ನು ಕೇಂದ್ರ ಸರ್ಕಾರವು ಭರಿಸುತ್ತದೆ. ಕೇಂದ್ರ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಆರೋಗ್ಯ ಸೇವೆಗಳು ಮತ್ತು ರೋಗ ನಿವಾರಣಾ ಕಾರ್ಯಕ್ರಮಗಳ ಉಸ್ತುವಾರಿ ೨೦೦೨ರಲ್ಲಿ ಕೇಂದ್ರ ಸರ್ಕಾರವು ಹೊರತಂದಿರುವ ರಾಷ್ಟ್ರೀಯ ಆರೋಗ್ಯ ನೀತಿಯ ಪ್ರಕಾರ ಹಾಗೂ ಆಗಿಂದಾಗ್ಯೆ ವಿಶ್ವ ಆರೋಗ್ಯ ಸಂಸ್ಥೆಯು ಕೊಡುವ ಸಲಹೆ ಮಾರ್ಗದರ್ಶನದಂತೆ ರಾಜ್ಯ ಸರ್ಕಾರಗಳು ಕಾರ್ಯ ನಿರ್ವಹಿಸುತ್ತವೆ. ಈ ಪ್ರಕಾರ, ಎಲ್ಲ ರಾಜ್ಯಗಳಂತೆ ನಮ್ಮ ಕರ್ನಾಟಕದಲ್ಲಿಯೂ ಮೂರು ಹಂತಗಳ ಆರೋಗ್ಯ ಸೇವಾ ಸೌಲಭ್ಯಗಳಿವೆ.

ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಮೂವರು ವೈದ್ಯರು, ಮೂವರು ನರ್ಸ್‌ಗಳು ಕನಿಷ್ಠ ಹತ್ತು ಹಾಸಿಗೆಗಳುಳ್ಳ ಒಳರೋಗಿ ಘಟಕಗಳಿರುತ್ತವೆ. ಕಿರಿಯ ಆರೋಗ್ಯ

ಕಾರ್ಯಕರ್ತರು, ಹಿರಿಯ ಆರೋಗ್ಯ ಕಾರ್ಯಕರ್ತರು, ಆಶಾ ಕಾರ್ಯಕರ್ತರು, ಒಬ್ಬ ಫಾರ್ಮಸಿಸ್ಟ್ ಇರುತ್ತಾರೆ. ೨೦೧೦ರಲ್ಲಿ ೯೮೮ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಎಲ್ಲಾ ಸಿಎಚ್‌ಸಿಗಳಲ್ಲಿ ೨೪ x ೭ ಅವಿರತ ನಿರಂತರ ಸೇವೆ ದೊರೆಯಲು ಏರ್ಪಾಟು ಮಾಡಿದ್ದಾರೆ.

ಜಿಲ್ಲಾ ಆರೋಗ್ಯ ಆಸ್ಪತ್ರೆಗಳಲ್ಲಿ ೫೦ರಿಂದ ೨೦೦ ಹಾಸಿಗೆಗಳುಳ್ಳ ಒಳರೋಗಿ ವಿಭಾಗ ಇದ್ದು, ತಜ್ಞ ವಿಭಾಗಗಳಿರುತ್ತವೆ. ಜನರಲ್ ಮೆಡಿಸಿನ್, ಸರ್ಜರಿ, ಗೈನೆಕಾಲಜಿ, ಅಸ್ಥಿ ಮತ್ತು ಕೀಲು ವಿಭಾಗ, ದಂತ, ಚರ್ಮ ಮತ್ತು ಲೈಂಗಿಕ ರೋಗಗಳ ಚಿಕಿತ್ಸಾ ವಿಭಾಗ, ಮನೋವೈದ್ಯ ವಿಭಾಗ, ಕಣ್ಣು ವಿಭಾಗ ಇತ್ಯಾದಿ.

ರಾಷ್ಟ್ರೀಯ ಆರೋಗ್ಯ ಯೋಜನೆಗಳಾದ ತಾಯಿ ಮತ್ತು ಶಿಶು ಆರೋಗ್ಯ, ಪ್ರತಿ ರಕ್ಷಣೆ (ಇಮ್ಯುನೈಸೇಶನ್), ಕ್ಷಯರೋಗ ನಿಯಂತ್ರಣ, ಕುಷ್ಠರೋಗ ನಿವಾರಣಾ ಕಾರ್ಯಕ್ರಮ, ವಾಹಕಗಳಿಂದ ಹರಡುವ ರೋಗಗಳ ನಿಯಂತ್ರಣ, ಕುರುಡುತನ ನಿಯಂತ್ರಣ, ಐಯೋಡಿನ್ ಕೊರತೆಯ ಕಾಯಿಲೆಯ ನಿಯಂತ್ರಣ, ಮಾನಸಿಕ ಆರೋಗ್ಯ ಕಾರ್ಯಕ್ರಮಗಳು ಅನುಷ್ಠಾನದಲ್ಲಿವೆ.

ಕರ್ನಾಟಕದ ಮಾನ್ಯ ಮುಖ್ಯಮಂತ್ರಿಗಳೇ ಈ ಹೇಳಿಕೆ ನೀಡಿದ್ದಾರೆ :

ಸರ್ಕಾರಿ ಆಸ್ಪತ್ರೆಗಳಿಗೆ ಸರ್ಕಾರ ಎಷ್ಟೇ ಹಣ ನೀಡಿದರೂ ಬಡವರಿಗೆ ಉಚಿತ ಉತ್ತಮ ಚಿಕಿತ್ಸೆ ದೊರಕಿಸಲು ಸಾಧ್ಯವಾಗುತ್ತಿಲ್ಲ. ಬಹುತೇಕ ಸಾರ್ವಜನಿಕರ ಅಭಿಪ್ರಾಯವೂ ಅನುಭವವೂ ಇದೇ ಆಗಿದೆ. ಅವರ ಸಾಮಾನ್ಯ ದೂರುಗಳು :

- ಬೇಕಾದಾಗ ವೈದ್ಯರು ಇರುವುದಿಲ್ಲ, ಮೀಟಿಂಗ್‌ಗೆ ಹೋಗಿದ್ದಾರೆ, ರಜೆಯಲ್ಲಿದ್ದಾರೆ ಎಂಬ ಕಾರಣಗಳು ;
- ವೈದ್ಯ - ವೈದ್ಯ ಸಿಬ್ಬಂದಿಯ ಗಂಟುಮುಖ, ಸೌಜನ್ಯವಿಲ್ಲದ ಮಾತು - ನಡೆವಳಿಕೆ, ಉದಾಸೀನತೆ, ನಿಷ್ಕ್ರಿಯತೆ, ಅಗತ್ಯವಾದ ಜ್ಞಾನ, ಕೌಶಲ ಇಲ್ಲದಿರುವುದು ;
- ಆಸ್ಪತ್ರೆಯಲ್ಲಿ ಕೊಳಕು ಪರಿಸರ/ವಾರ್ಡುಗಳು, ಮುರಿದ ಪೀಠೋಪಕರಣಗಳು, ಹರಿದ ರಗ್ಗು / ಬೆಡ್‌ಶೀಟುಗಳು, ತುಕ್ಕು ಹಿಡಿದ ಮಂಚಗಳು ;
- ಲ್ಯಾಬ್‌ನಲ್ಲಿ ಮಾಡುವ ಪರೀಕ್ಷೆಗಳು ವಿಶ್ವಾಸಾರ್ಹವಲ್ಲ;
- ಸರಬರಾಜು ಆಗುವ ಔಷಧಗಳ ಗುಣಮಟ್ಟ ಕಡಿಮೆ, ಹೆಚ್ಚಿನ ಸಮಯದಲ್ಲಿ ಅಗತ್ಯವಿರುವ ಔಷಧಗಳೇ ಲಭ್ಯವಿರುವುದಿಲ್ಲ;
- ಚಿಕಿತ್ಸೆ ನೀಡಲು ವೈದ್ಯ-ವೈದ್ಯ ಸಿಬ್ಬಂದಿ ಹಣ ಕೇಳುತ್ತಾರೆ. ಹಣ ಕೊಡದವರನ್ನು ತಿರಸ್ಕಾರದಿಂದ ನೋಡುತ್ತಾರೆ. ಆಸ್ಪತ್ರೆಯಿಂದ ಹೊರ ಅಟ್ಟುತ್ತಾರೆ ;
- ವೈದ್ಯ -ವೈದ್ಯ ಸಿಬ್ಬಂದಿ ಪಕ್ಷಪಾತ ಮಾಡುತ್ತಾರೆ. ಗೊತ್ತಿರುವವರಿಗೆ/ವಶೀಲಿ ಮಾಡಿಸಿದವರಿಗೆ ಬೆಣ್ಣೆ, ಇಲ್ಲದವರಿಗೆ ಸುಣ್ಣ;
- ತುರ್ತು ಸ್ಥಿತಿಯ ರೋಗಿಗಳನ್ನು ನಿರ್ಲಕ್ಷಿಸಿ, ಸಾವಿಗೆ ಕಾರಣರಾಗುತ್ತಾರೆ ;
- ವೈದ್ಯರು ಖಾಸಗೀ ಪ್ರಾಕ್ಟೀಸ್‌ಗೆ ಆದ್ಯತೆ ನೀಡುತ್ತಾರೆ. ನರ್ಸ್‌ಗಳು, ಫಾರ್ಮಸಿಸ್ಟ್‌ಗಳೂ ಆರೋಗ್ಯಕಾರ್ಯಕರ್ತರೂ ಖಾಸಗೀ ಪ್ರಾಕ್ಟಿಸ್ ಮಾಡುತ್ತಾರೆ ;
- ಬಂದ ರೋಗಿಗಳನ್ನು ತಮಗೆ ಬೇಕಾದ ಖಾಸಗೀ ಆಸ್ಪತ್ರೆಗೆ ಕಳುಹಿಸುತ್ತಾರೆ ;

ಆಸ್ಪತ್ರೆಗಳ ಮತ್ತು ವೈದ್ಯ-ವೈದ್ಯ ಸಿಬ್ಬಂದಿಯ ಈ ರೋಗಕ್ಕೆ ಕಾರಣಗಳು ಹಲವಾರು.

**ಪ್ರತಿಭಾವಂತರು, ವಿಶೇಷ ಕೌಶಲ ಉಳ್ಳ ತಜ್ಞರು ಸರ್ಕಾರೀ ಸೇವೆಗೆ ಸೇರುವುದಿಲ್ಲ :** ಹೆಚ್ಚು ಸಂಬಳ ಕೊಡುವ, ಸುಸಜ್ಜಿತ ಆಸ್ಪತ್ರೆಗಳಿರುವ ಖಾಸಗಿ ವೈದ್ಯಕ್ಷೇತ್ರಕ್ಕೆ ಹೋಗುತ್ತಾರೆ. ಹೀಗಾಗಿ ಬಹುತೇಕ ದೊಡ್ಡ ಆಸ್ಪತ್ರೆ ಮತ್ತು ಜಿಲ್ಲಾ ಆಸ್ಪತ್ರೆಗಳಲ್ಲಿ ತಜ್ಞರ ಕೊರತೆ, ನರ್ಸ್‌ಗಳ ಕೊರತೆ ಇದೆ.

**ಪರಿಹಾರ :** ಈಗಿರುವ ಸಂಬಳವನ್ನು ದುಪ್ಪಟ್ಟುಮಾಡಿ, ಕರ್ತವ್ಯ ನಿರ್ವಹಿಸಲು ಒಳ್ಳೆಯ ಅವಕಾಶವನ್ನು ಮಾಡಿಕೊಟ್ಟು, ಪ್ರತಿಭಾವಂತ ವೈದ್ಯರನ್ನು ಸರ್ಕಾರಿ ಆಸ್ಪತ್ರೆಗಳಿಗೆ ಬಂದು ಕೆಲಸ ಮಾಡುವಂತೆ ಮಾಡಬೇಕು.

**ವೈದ್ಯರ-ವೈದ್ಯ ಸಿಬ್ಬಂದಿಯ ಹಣದಾಹ :** ಸಂಬಳ ಜೊತೆ ಗಿಂಬಳಕ್ಕಾಗಿ ಈಗ ಎಲ್ಲ ಸರ್ಕಾರಿ ನೌಕರರು ಆಸೆಪಡುವಂತಾಗಿದೆ. ಇಡೀ ಸಮಾಜವೇ ಹಣದ ಹಿಂದೆ ಬಿದ್ದಿರುವಾಗ, ವೈದ್ಯರು ಇದಕ್ಕೆ ಅಪವಾದವಲ್ಲ. ಬೇಗ ಒಂದು ಮನೆ ಮಾಡಿಬಿಡಬೇಕು. ಬೇಗ ಒಂದು ಕಾರು ಕೊಳ್ಳಬೇಕು. ತಮ್ಮ ಮಗುವನ್ನು ಅತ್ಯುತ್ತಮ ಖಾಸಗೀ ಶಾಲೆಗೆ ಸೇರಿಸಬೇಕು ಇತ್ಯಾದಿ ಆಸೆ ಎಲ್ಲರಿಗೂ ಇರುತ್ತದೆ. ಲಕ್ಷ ಲಕ್ಷ ರೂಪಾಯಿ ಕೇಳುವ ಮಂತ್ರಿ ಎಂ.ಎಲ್.ಎ.ಗಳು ವೈದ್ಯರ ಧನದಾಹಕ್ಕೆ ನೇರವಾಗಿ ನೀಡಬೇಕು - ಕಡಿಮೆ ದರದಲ್ಲಿ ಸೈಟು, ಅವರ ಮಕ್ಕಳ ವಿದ್ಯಾಭ್ಯಾಸಕ್ಕೆ ನೆರವು.

**ಆಸ್ಪತ್ರೆಯ ನಿರ್ವಹಣೆಗೆ ಸಾಕಷ್ಟು ಹಣ ಇಲ್ಲ :** ಬಜೆಟ್‌ನ ಶೇ. ೧ರಿಂದ ೨ರಷ್ಟು ಹಣ ವೈದ್ಯಕೀಯ ಕ್ಷೇತ್ರಕ್ಕೆ ಮೀಸಲಾಗಿಡಲಾಗುತ್ತೆ. ಶೇ. ೪೦ರಿಂದ ೫೦ರಷ್ಟು ಖರ್ಚು ಮೀಸಲಿಡುವ ದೇಶಗಳಿವೆ. ಹೊರಗುತ್ತಿಗೆಗೆ ಕೊಟ್ಟು ವೈದ್ಯರೇ ಇದನ್ನು ಸೂಪರ್‌ವೈಸ್ ಮಾಡುವಂತೆ ಮಾಡಬೇಕು.



ಪ್ರತಿ ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಆಸ್ಪತ್ರೆಗೆ, ರಾಜಕೀಯದಿಂದ ಮುಕ್ತವಾದ, ಜನಪ್ರಿಯ-ಸೇವಾಪ್ರಿಯ ವ್ಯಕ್ತಿಗಳ ಆರೋಗ್ಯ ಸಮಿತಿಯನ್ನು ನೇಮಕ ಮಾಡಿ, ಈ ಸಮಿತಿ ಆಸ್ಪತ್ರೆಯ ಉಸ್ತುವಾರಿಯನ್ನು ನೋಡಿಕೊಳ್ಳಬೇಕು. ಹಣ-ಸಂಪನ್ಮೂಲದ ಕೊರತೆ ಇದ್ದಾಗ 'ಹಣ ಸಂಗ್ರಹಣೆ' ಮಾಡುವ ಜವಾಬ್ದಾರಿಯೂ ಇದಕ್ಕೆ ಇರಬೇಕು. ದಾನಿಗಳ ಪಟ್ಟಿಮಾಡಿ ಅವರು ಪ್ರತೀ ಆಸ್ಪತ್ರೆಗೆ ದೇಣಿಗೆ ನೀಡುವಂತೆ ಪ್ರೋತ್ಸಾಹಿಸಬೇಕು.

**ಗುಣಮಟ್ಟದ, ಅಗತ್ಯ ಪ್ರಮಾಣದ ಔಷಧಿಗಳ ಸರಬರಾಜು**

ಔಷಧಿಗಳು ಮತ್ತು ಇತರೆ ಸಾಮಗ್ರಿಗಳ ಖರೀದಿ 'ಭ್ರಷ್ಟಾಚಾರ'ದ ತೌರು. ಔಷಧಿ ಕಂಪೆನಿಗಳು, ವಿತರಕರು, ಮಧ್ಯವರ್ತಿಗಳು ವ್ಯವಸ್ಥೆಯನ್ನು ಭ್ರಷ್ಟತೆಯ ಕೂಪಕ್ಕೆ ತಳ್ಳಿದ್ದಾರೆ. ಇವರ ವಿರುದ್ಧ ಹೋರಾಡುವುದು ಸದ್ಯಕ್ಕೆ ಕಷ್ಟವೇ. ಆರೋಗ್ಯ ಸಮಿತಿ ಹಾಗೂ ಇಲಾಖೆಯ ತಜ್ಞರ ಸಮಿತಿ ಕೂಡಿ ಹೆಚ್ಚು ನಿಯಂತ್ರಣ ಮಾಡಿ, ಭ್ರಷ್ಟಾಚಾರವನ್ನು ತಗ್ಗಿಸಬೇಕು. ಲೋಕಾಯುಕ್ತರ ನೆರವನ್ನೂ ಪಡೆಯಬೇಕು. ಭ್ರಷ್ಟರಿಗೆ ಶೀಘ್ರವಾಗಿ ಉಗ್ರ ಶಿಕ್ಷೆಯಾಗುವಂತೆ ನೋಡಿಕೊಂಡರೆ ಪರಿಸ್ಥಿತಿ ಉತ್ತಮವಾದೀತು.

**ಸರ್ಕಾರಿ ಆಸ್ಪತ್ರೆಯ ಉತ್ತಮ ಆಡಳಿತ ನಿರ್ವಹಣೆ, ಲಂಚ ಭ್ರಷ್ಟಾಚಾರಕ್ಕೆ ತಡೆ :** ಪ್ರತಿ ಆಸ್ಪತ್ರೆಯಲ್ಲಿ ಆಡಳಿತಾಧಿಕಾರಿಯನ್ನು ನಿಯಮಿಸಬೇಕು. ಹಿರಿಯ ವೈದ್ಯಾಧಿಕಾರಿಯ ಮಾರ್ಗದರ್ಶನದಲ್ಲಿ ಈತ/ಈಕೆ ಇಡೀ ಆಸ್ಪತ್ರೆಯ ಆಡಳಿತ ನಿರ್ವಹಣೆ ಮಾಡಬೇಕು. ವೈದ್ಯರ ಮೇಲಿರುವ ಆಡಳಿತ ಜವಾಬ್ದಾರಿಗಳನ್ನು ತಗ್ಗಿಸಿ, ಅವರು ಚಿಕಿತ್ಸಾ ಚಟುವಟಿಕೆಗಳಿಗೆ ಹೆಚ್ಚು ಸಮಯ ಕೊಡುವಂತೆ ನೋಡಿಕೊಳ್ಳಬೇಕು. ಇಲಾಖೆಯ ಅಧಿಕಾರಿಗಳು ಹೆಚ್ಚು 'ಫೀಲ್ಡ್ ವಿಸಿಟ್' ಮಾಡಿ ಪರಿಶೀಲನಾ ಸಭೆಗಳನ್ನು ಕರೆದು ಉಸ್ತುವಾರಿಯ ಗುಣಮಟ್ಟವನ್ನು ಹೆಚ್ಚಿಸಬೇಕು. ರಾಜಕೀಯ ಪ್ರಭಾವವನ್ನು ತಡೆಯಬೇಕು.

**ಆರೋಗ್ಯ ಶಿಕ್ಷಣ :** ೨೧ನೇ ಶತಮಾನದಲ್ಲೂ ನಮ್ಮ ಜನರಿಗೆ ಅಜ್ಞಾನ, ಮೂಢನಂಬಿಕೆ, ಕಂದಾಚಾರಗಳು ಗಂಟುಬಿದ್ದಿವೆ. ಗ್ರಹಚಾರ, ವಾಸ್ತು, ಮಾಟ - ಮಂತ್ರ, ದೆವ್ವ, ಪೀಡೆ, ದೈವ, ಶಾಪ ಇವುಗಳಿಂದ ಕಾಯಿಲೆ ಬರುತ್ತವೆ ಎಂದೇ ತಿಳಿದಿದ್ದಾರೆ. ಅನಾರೋಗ್ಯ ನಿವಾರಣೆಗೆ ದೇವಸ್ಥಾನ, ಚರ್ಚ್, ಮಸೀದಿಗಳಿಗೆ, ಮಂತ್ರವಾದಿ, ಜ್ಯೋತಿಷಿಗಳ ಬಳಿಗೆ ಹೋಗುತ್ತಾರೆ. ವೈದ್ಯರ ಮಾತನ್ನು ಕೇಳುವುದಿಲ್ಲ. ಅಲೋಪತಿ, ಹೋಮಿಯೋಪತಿ, ನ್ಯಾಚುರೋಪತಿ, ವೆಂಕಟಾಚಲಪತಿ ಇವುಗಳಲ್ಲಿ ಯಾವುದು ಉತ್ತಮ, ಎಂದು ಕೇಳುತ್ತಾರೆ. ಚಿಕಿತ್ಸೆಯಲ್ಲಿ ಮಿತಿಮೀರಿದ ನಂಬಿಕೆ ಅಥವಾ ಅನುಮಾನವನ್ನು ವ್ಯಕ್ತಪಡಿಸುತ್ತಾರೆ. ಚಿಕಿತ್ಸಾ ವಿಧಾನಗಳನ್ನು ಅರ್ಥಮಾಡಿಕೊಳ್ಳುವುದಿಲ್ಲ. ಸ್ಕ್ಯಾನಿಂಗ್ ಎಂಆರ್‌ಐಗಳಂತಹ ತಪಾಸಣೆಯನ್ನೇ ಚಿಕಿತ್ಸೆ ಎಂದು ನಂಬುತ್ತಾರೆ. ಖಾಸಗೀ ವೈದ್ಯರು – ಆಸ್ಪತ್ರೆಗಳನ್ನು ನಂಬಿ ಮೋಸಹೋಗುತ್ತಾರೆ. ಎಲ್ಲೆಡೆ ಶೋಷಣೆಗೆ ಒಳಗಾಗುತ್ತಾರೆ. ಮುಂಜಾಗ್ರತೆ ವಹಿಸಿದರೆ ಶೇಕಡ ೮೦ರಷ್ಟು ಕಾಯಿಲೆಗಳಿಂದ ನಾವು ತಪ್ಪಿಸಿಕೊಳ್ಳಬಹುದು. ಆರೋಗ್ಯಕರ ಜೀವನಶೈಲಿಯ ಬಗ್ಗೆ ಶಾಲೆಯಿಂದ ಕಾಲೇಜಿನವರೆಗೆ ಗೃಹಿಣಿಯಿಂದ ಹಿಡಿದು ನಿವೃತ್ತಿ ಹೊಂದಿದ ವೃದ್ಧರವರೆಗೆ ಆರೋಗ್ಯ, ಶಿಕ್ಷಣ ದೊರೆಯಬೇಕು, ಆರೋಗ್ಯ-ಅನಾರೋಗ್ಯದ ಬಗ್ಗೆ, ಚಿಕಿತ್ಸಾ ವಿಧಾನಗಳ ಬಗ್ಗೆ ಮಾಹಿತಿ ಎಲ್ಲರಿಗೆ ದೊರೆಯಬೇಕು. ಪ್ರತಿ ಆಸ್ಪತ್ರೆಯಲ್ಲಿ ವೈದ್ಯಸಾಹಿತ್ಯ ಭಂಡಾರವಿರಬೇಕು.

**ಡಾ|| ಸಿ. ಆರ್. ಚಂದ್ರಶೇಖರ್**
ನಂ. ೩೮, ೨ನೇ ಅಡ್ಡರಸ್ತೆ, ಸಿಂಡಿಕೇಟ್ ಬ್ಯಾಂಕ್ ಕಾಲೋನಿ, ಅರಕೆರೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-೭೬

ಶ್ರೀಧರ ಪಿಸ್ಸೆ



# ವಿಜಯನಗರದಲ್ಲಿ ಬಡತನ

ವಿಜಯನಗರ ಸಾಮ್ರಾಜ್ಯ ಸಮೃದ್ಧ ಸಂಪತ್ತಿನಿಂದ ತುಂಬಿ ತುಳುಕಿತ್ತು. ಮುತ್ತು ರತ್ನಗಳನ್ನು ಬೀದಿಯಲ್ಲಿ ರಾಶಿ ಹಾಕಿ ಮಾರಾಟ ಮಾಡಲಾಗುತ್ತಿತ್ತು. ಅದು ಚಿನ್ನದ ನಾಣ್ಯಗಳು ಚಲಾವಣೆಯಲ್ಲಿದ್ದ ಸುವರ್ಣ ಯುಗವಾಗಿತ್ತು. ಆರು ತಿಂಗಳ ಕಾಲ ವಿಜಯನಗರವನ್ನು ಲೂಟಿ ಮಾಡಿದ ಮುಸ್ಲಿಮರು ದೇವಾಲಯಗಳನ್ನು ನಾಶ ಮಾಡಿದರು. – ಹೀಗೆ ವಿಜಯನಗರ ಕುರಿತ ಪ್ರತೀತಿ ಇಂದಿಗೂ ಕನ್ನಡ ನಾಡಿನಲ್ಲಿ ಜನಜನಿತವಾಗಿದೆ.

ಪಾಶ್ಚಾತ್ಯ ಮತ್ತು ಭಾರತೀಯ ಇತಿಹಾಸಕಾರರು ಮಧ್ಯಕಾಲೀನ ಯುಗದಲ್ಲಿ ಭಾರತಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗರ ಕಥನಗಳನ್ನೇ ಬಹುಪಾಲು ಆಧರಿಸಿದ್ದಾರೆ. ಅದರಲ್ಲೂ ಭಾರತೀಯ ಚರಿತ್ರೆಕಾರರು ಪರಂಪರೆಯ ಹೆಮ್ಮೆಯ ಭಾಗವಾಗಿ ಸನಾತನ ಊಳಿಗಮಾನ್ಯ ಸಂಸ್ಕೃತಿಯನ್ನು ಮೆರೆಸಿದ್ದರು. ಪಾಶ್ಚಾತ್ಯ ಚರಿತ್ರೆಕಾರರು ಭಾರತೀಯ ಹಿಂದೂ-ಮುಸ್ಲಿಂ ಸಮುದಾಯಗಳ ನಡುವೆ ಅನೈಕ್ಯತೆಯನ್ನು ಬಿತ್ತಿದ್ದಾರೆ. ಈ ಎರಡು ಬಗೆಯ ಇತಿಹಾಸ ಬರವಣಿಗೆಯ ಉದ್ದೇಶ ಮತ್ತು ವೈಧಾನಿಕತೆಯಿಂದ ವಾಸ್ತವ ಸ್ಥಿತಿಗತಿಗಳು ಹೊರಗುಳಿದಿವೆ. ಚರಿತ್ರೆಯ ಪುಟಗಳಲ್ಲಿ ರಾಜರು, ರಾಜಾಶ್ರಿತರು, ರಾಜಪೋಷಕರು, ರಾಜನ ಆಡಳಿತಾಧಿಕಾರಿಗಳು, ಸೇನಾಧಿಕಾರಿಗಳು, ರಾಜನ ಆಕ್ರಮಣಗಳು, ವ್ಯಾಪಾರಿಗಳು, ಶ್ರೀಮಂತರು, ಭೂಮಾಲೀಕರನ್ನು ಹೊರತು ಶ್ರಮಿಕ ಸಮುದಾಯಗಳ ಕುರಿತು ಒಂದೆರಡು ವಾಕ್ಯಗಳಿಗಿಂತ ಹೆಚ್ಚೇನೂ ಕಂಡುಬರುವುದಿಲ್ಲ. ಹಾಗಾಗಿ ವಿಜಯನಗರ ಕುರಿತ ಪ್ರಚಲಿತ ಪ್ರತೀತಿ ಬಹುಮಟ್ಟಿಗೆ ಇತಿಹಾಸದ ಪುಟಗಳಲ್ಲಿ ಕಂಡುಬರುವ ವಿವರಗಳ ಸ್ಥೂಲ ಪ್ರತಿಬಿಂಬವೆಂದೇ ಹೇಳಬಹುದು. ಹೀಗೆ ಅನುಮಾನ ಹುಟ್ಟಲು ಕಾರಣವಾದ ಅಂಶವನ್ನು ಪರಿಶೀಲಿಸಬಹುದು. ರಾಬರ್ಟ್ ಸಿವೆಲ್ ತನ್ನ 'ಎ ಫರ್‌ಗಾಟನ್ ಎಂಪೈರ್' ಗ್ರಂಥದಲ್ಲಿ ರಕ್ಕಸತಂಗಡಿ ಯುದ್ಧದಲ್ಲಿ ರಾಮರಾಯನ ತಲೆ ಕಡಿದ ನಂತರ ವಿಜಯನಗರದಲ್ಲಿ ಮೂರು ದಿನಗಳಲ್ಲಿ ನಡೆದ ಮೂರು ಬಗೆಯ ಲೂಟಿಗಳನ್ನು ಕೌಟೊನನ್ನು ಆಧರಿಸಿ ಪ್ರಸ್ತಾಪಿಸಿದ್ದಾನೆ.

ಯುದ್ಧದಿಂದ ಸೋತು ಹಿಂದಿರುಗಿದ ಮೊದಲ ದಿನ ರಾಮರಾಯನ ಸೋದರ ತಿರುಮಲ ಮತ್ತು ಅವನ ಸಂಬಂಧಿಕರು ಸಿಂಹಾಸನನಿಷ್ಠ ಸೈನಿಕರ ಬೆಂಗಾವಲಿನಲ್ಲಿ ಅರಮನೆಯ ನೂರು ದಶಲಕ್ಷ ಪೌಂಡುಗಳಿಗಿಂತ ಅಧಿಕ ಬೆಲೆಯ ಬಂಗಾರ, ವಜ್ರಗಳು, ಮತ್ತು ಬೆಲೆಯುಳ್ಳ ಹರಳುಗಳು, ರಾಜಲಾಂಛನಗಳು, ರತ್ನಖಚಿತ ಸಿಂಹಾಸನ ಮೊದಲಾದುವನ್ನು ಐನೂರೈವತ್ತು ಆನೆಗಳ ಮೇಲೆ ಹೊರಿಸಿಕೊಂಡು ದಕ್ಷಿಣದ ಪೆನುಕೊಂಡ ಕೋಟೆಗೆ ಓಡಿಹೋದರು.

ಮರುದಿನ ಬ್ರಿಂಜಾರಿ, ಲಂಬಾಡಿ, ಕುರುಬ ಮತ್ತು ಕಾಡುಜನರ ತಂಡಗಳು ವಿಜಯನಗರದಲ್ಲಿ ಆರು ಬಾರಿ ಉಗ್ರಾಣಗಳನ್ನು ಮತ್ತು ಅಂಗಡಿಗಳನ್ನು ಲೂಟಿ ಮಾಡಿದರು.

ಯುದ್ಧದಲ್ಲಿ ಗೆದ್ದ ಮುಸಲ್ಮಾನರು ನಂತರ ಐದು ತಿಂಗಳ ಕಾಲ ಇಡೀ ವಿಜಯನಗರದ ಸಂಪತ್ತನ್ನು ಲೂಟಿ ಮಾಡಿ ನಾಶಗೊಳಿಸಿದರು. ಮಾತ್ರವಲ್ಲದೆ, ಬ್ರಾಹ್ಮಣರು ದಿನನಿತ್ಯ ಭೇಟಿ ನೀಡುವ ಜನರಿಂದ ಕಾಣಿಕೆ ಮತ್ತು ಹಣ ಪಡೆಯುತ್ತಿದ್ದ ಹಾಗೂ ರಾಜರು ಮತ್ತು ದೊರೆಗಳು, ವರ್ತಕರು ಮತ್ತು ಭೂಮಾಲೀಕರು ಸಮೃದ್ಧ ಕಾಣಿಕೆ ಅರ್ಪಿಸುತ್ತಿದ್ದ





ಅಸ್ಪೃಶ್ಯರು ಊರ ಹೊರಗೆ ವಾಸಿಸುತ್ತಿದ್ದು, ನಡುಹಗಲಿನಲ್ಲಿ ಮಾತ್ರ ಊರು ಪ್ರವೇಶ ಮಾಡುವ ನಿಯಮವಿತ್ತು. ಆ ಸಂದರ್ಭದಲ್ಲಿ 'ಸಂಬೋಳಿ' ಎಂದರಚಿ ಕೋಲು ಕುಟ್ಟುತ್ತ, ತಮ್ಮ ಬರುವಿಕೆ ಬಗ್ಗೆ ಎಚ್ಚರಿಕೆ ನೀಡಬೇಕಿತ್ತು. ಈ ಸೂತಕಾಚರಣೆ ಕೆಳಜಾತಿಗಳ ಮೇಲೆ ಬಹಿಷ್ಕೃತ ಜೀವನ ಹೇರುವ ಮೂಲಕ ಅವರ ಹಕ್ಕುಗಳನ್ನು ಜೀವಿತಾವಧಿ ಪೂರ್ತಿ ಕಸಿದುಕೊಂಡಿತ್ತು.

ದೇವಾಲಯಗಳಲ್ಲಿ ಸಂಪತ್ತು ಪ್ರತಿವರ್ಷವೂ ಹೆಚ್ಚುತ್ತಿದ್ದು, ಮೊದಲಬಾರಿಗೆ ಅವನ್ನು ಕೊಳ್ಳೆ ಹೊಡೆದ ಮುಸ್ಲಿಮರು ನೂರು ಸಾವಿರ ಪೌಂಡು ಬೆಲೆಯ ಬಂಗಾರವನ್ನು ಹೊತ್ತೊಯ್ದರು.

ಇವು ಮಾತ್ರವಲ್ಲದೆ, ವಿಜಯನಗರದಲ್ಲಿ ಶೈವ ಮತ್ತು ವೈಷ್ಣವ ಮತಗಳು ಪ್ರಬಲ ವಾಗಿದ್ದವು. ಇವೆರಡರ ನಡುವೆ ಪ್ರಾಬಲ್ಯ ಮೆರೆಯುವ ವಿಷಯದಲ್ಲಿ ಸ್ಪರ್ಧೆಯುಂಟಾಗಿ ವೈಮನಸ್ಯ ಬೆಳೆದಿತ್ತು. ಸೋತ ವಿಜಯನಗರದಲ್ಲಿ ಇವೆರಡು ಮತಗುಂಪುಗಳ ನಡುವೆ ತೀವ್ರ ತಿಕ್ಕಾಟವಾಗಿ ಹಂಪೆಯ ಮೂಲ ವಿರೂಪಾಕ್ಷ ದೇವಾಲಯ ಮತ್ತು ಹೆಬ್ಬಂಡೆಯ ಮೇಲೆ ಕೊರೆದ ಮೂರ್ತಿಗಳಿರುವ ದೇವಾಲಯಗಳು, ಶಾಕ್ತ ದೇವಾಲಯಗಳನ್ನು ಹೊರತುಪಡಿಸಿ, ಉಳಿದೆಲ್ಲವೂ ಲೂಟಿಯಾಗಿ ಸರ್ವನಾಶವಾದವು ಎಂದು ಹೇಳಲಾಗುತ್ತದೆ. ಇದಕ್ಕೆ ಇತಿಹಾಸದ ಪುಟಗಳಲ್ಲಿ ಯಾವ ಸಮರ್ಥನೀಯ ಆಧಾರಗಳೂ ಇಲ್ಲವಾಗಿ ಘಟಿಸಿದ್ದಿರಬಹುದಾದ ವೈದಿಕ ಮತಗಳ ನಡುವಿನ ಸಂಘರ್ಷ ಮುಗುಮ್ಮಾಗಿ ಮುಸ್ಲಿಮರ ದಾಳಿ ಮತ್ತು ಲೂಟಿಯ ಭಾಗವಾಗಿ ಸೇರ್ಪಡೆ ಹೊಂದಿರುವ ಸಾಧ್ಯತೆಯಿದೆ.

ಇವುಗಳಲ್ಲಿ ರಾಜಮನೆತನದ ಪರಿವಾರ ಅರಮನೆಯ ಸಂಪತ್ತನ್ನು ದೋಚಿಕೊಂಡು ಹೋದುದನ್ನು ದರೋಡೆಯೆಂದೆ ಪರಿಗಣಿಸಬೇಕಾಗುತ್ತದೆ. ಅರಮನೆಯ ಸಂಪತ್ತು ಸಾಮಾನ್ಯ ಜನರಿಂದ ವಸೂಲಾದ ಕಂದಾಯದ ಭಾಗವಾಗಿದ್ದು, ನಾಡನ್ನು ಆಳುವ ಮತ್ತು ಕಾಪಾಡುವ ಜನರ ಸೌಲಭ್ಯಕ್ಕಾಗಿ ಮೀಸಲಾಗಿತ್ತು. ಒಮ್ಮೆ ಯುದ್ಧದಲ್ಲಿ ಸೋತ ರಾಜಮನೆತನ ನಾಡನ್ನು ಆಳುವ ಮತ್ತು ಕಾಪಾಡುವ ಹಕ್ಕನ್ನು ಕಳೆದುಕೊಳ್ಳುತ್ತದೆ. ಊಳಿಗ ಮಾನ್ಯ ವ್ಯವಸ್ಥೆಯಲ್ಲಿ ಸೋತ ರಾಜನ ಸಮಸ್ತವೂ ಗೆದ್ದವನ ಪಾಲಾಗುತ್ತದೆ. ಸೋತ ರಾಜಪರಿವಾರ ಅರಮನೆಯ ಸಂಪತ್ತನ್ನು ಸಾಗಿಸಲು ಸಾಧ್ಯ ವಾದಷ್ಟನ್ನು ತನ್ನದಾಗಿಸಿಕೊಂಡಿದೆ.



ಚಿನ್ನದ ನಾಣ್ಯಗಳು

ಗೆದ್ದ ಮುಸ್ಲಿಂ ರಾಜರಿಗೆ ಸ್ವಮತ ಸ್ಥಾಪನೆ – ಪರಮತ ಖಂಡನೆಗಳ ಜೊತೆಗೆ ವಿಜಯನಗರದ ಸಂಪತ್ತಿನ ಮೇಲೆ ಕಣ್ಣಿತ್ತು. ಅದುವರೆಗೂ ಸೋಲಿಸಲಾಗದಿದ್ದ ವಿಜಯನಗರ ಸಾಮ್ರಾಜ್ಯವನ್ನು ಅವರು ಹೇಗೋ ಒಮ್ಮೆ ಸೋಲಿಸಿದ ನಂತರ ಅದನ್ನು ಪೂರ್ತಿಯಾಗಿ ಮಣಿಸಬೇಕಿತ್ತು. ಅಲ್ಲದೆ ಯುದ್ಧದಲ್ಲಿ ಗೆದ್ದ ತಮ್ಮ ಸೈನಿಕರನ್ನು ಸಂತೋಷಪಡಿಸುವ ಉದ್ದೇಶದಿಂದಲೂ ಅವರು ಲೂಟಿಯನ್ನು ಉತ್ತೇಜಿಸಿದರು. ವೈದಿಕ ಮತಗಳು ಕೂಡ ಮುಸ್ಲಿಂ ಧರ್ಮದಂತೆ ಸ್ವಮತ ಪ್ರತಿಪಾದನೆ ಮತ್ತು ಪರಮತ ಖಂಡನೆಯ ನೀತಿಯನ್ನು ಅನುಸರಿಸುತ್ತಿದ್ದುದರಿಂದ ಅವುಗಳ ನಡುವೆ ತಾರಕಕ್ಕೇರಿದ್ದ ಸಂಘರ್ಷವನ್ನು ತಳ್ಳಿಹಾಕಲಾಗದು. ಆ ಸಂದರ್ಭದಲ್ಲಿ ನಡೆದಿದ್ದಿರಬಹುದಾದ ವಿರೋಧಿ ದೇವಾಲಯಗಳ ಧ್ವಂಸ ಮತ್ತು ಲೂಟಿಗಳು ಮತೀಯ ಮನಃಸ್ಥಿತಿಗೆ ಅನುಗುಣವಾಗಿಯೆ ಇವೆ.

ಇವೆಲ್ಲವಕ್ಕಿಂತ ಸಮಾಜದ ತಳವರ್ಗಗಳಿಗೆ ಸೇರಿದ ಬ್ರಿಂಜಾರಿ, ಲಂಬಾಡಿ, ಕುರುಬ ಮತ್ತು ಕಾಡುಜನರ ತಂಡಗಳು ಆರು ಬಾರಿ ಲೂಟಿ ಮಾಡಿದುದು ಭಿನ್ನ ಬಗೆಯ ಸಂಗತಿಯಾಗಿ ಕಾಣುತ್ತದೆ. ಶಿಷ್ಟ ಸಮಾಜದ ಕೆಳಸಮುದಾಯಗಳು ಮತ್ತು ಊರಾಚೆ ವಾಸಮಾಡುತ್ತಿದ್ದ ಜನಸಮುದಾಯಗಳು ಯುದ್ಧದಲ್ಲಿ ಸೋಲುಂಡ ರಾಜ್ಯಗಳಲ್ಲಿ ಲೂಟಿ ಮಾಡಿದವು ಎಂದರೆ ಅವರ ಆರ್ಥಿಕ ಸ್ಥಿತಿ ಉತ್ತಮವಾಗಿರಲಿಲ್ಲ ಎಂದೇ ಅರ್ಥ. ದಮನಿತ ವರ್ಗಗಳಿಗೆ ಸೇರಿದ ಸಮುದಾಯಗಳು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಅಸಹಾಯಕರಾಗಿದ್ದಿರಬೇಕು. ಅರಾಜಕತೆ ಉಂಟಾಗಿದ್ದ ಸಂದರ್ಭದಲ್ಲಿ ಅವು ತಮ್ಮ ಅವಕಾಶವನ್ನು ಬಳಸಿಕೊಂಡಿದ್ದಿರಬಹುದು. ನಿರ್ಗತಿಕರು, ಹಸಿವಿನ ಶೂಲೆ ತಾಳದವರು ಮಾತ್ರ ಲೂಟಿ ದರೋಡೆಯಂಥ ಅಕ್ರಮ ಸಂಪಾದನೆಗೆ ಮುಂದಾಗಲು ಸಾಧ್ಯ. ಈ ಜನತೆ ಅಕ್ಕಿ, ಗೋಧಿ, ಮುಸುಕಿನ ಜೋಳ, ಜವೆ, ಅವರೆ, ಹಸಿಕಡಲೆ, ಬೇಳೆಕಾಳು, ಹುರುಳಿ ಮತ್ತಿತರ ಧಾನ್ಯಗಳ ದಾಸ್ತಾನುಗಳಿದ್ದ ಮಳಿಗೆ - ಅಂಗಡಿಗಳ ಮೇಲೆ ದಾಳಿ ನಡೆಸಿದ್ದು ಗಮನಾರ್ಹವಾಗಿದೆ.

ವಿಜಯನಗರದ ಬೀದಿಗಳಲ್ಲಿ ಮುತ್ತು ರತ್ನ ವಜ್ರ ವೈಡೂರ್ಯಗಳನ್ನು ಬಳ್ಳದಿಂದ ಅಳೆದು ಮಾರಾಟ ಮಾಡುತ್ತಿದ್ದ, ಚಿನ್ನದ ತಟ್ಟೆಯಲ್ಲಿ ಊಟ ಮಾಡುತ್ತಿದ್ದ ಚಿತ್ರಗಳ ನಡುವೆ ಈ ಪ್ರಶ್ನೆ ನಮ್ಮನ್ನು ಮತ್ತೊಂದು ದಿಕ್ಕಿಗೆ ಎಳೆದೊಯ್ಯುತ್ತದೆ. ವಿಜಯನಗರದ ಚರಿತ್ರೆಯ ಬಹುಪಾಲು ಪಠ್ಯಗಳು ಆ ಸಾಮ್ರಾಜ್ಯದ ಗತವೈಭವವನ್ನೇ ಕಟ್ಟಿಕೊಟ್ಟಿರುವ ಹಿನ್ನೆಲೆಯಲ್ಲಿ ಅಂದಿನ ಕಾಲದಲ್ಲಿದ್ದಿರಬಹುದಾದ ದಟ್ಟದಾರಿದ್ರ್ಯ ಸ್ಥಿತಿಗತಿಗಳು ಮಧ್ಯಯುಗದ ಸಂಸ್ಕೃತಿಯನ್ನು ಅರಿಯುವಲ್ಲಿ ವೈಭವದಷ್ಟೆ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ.

ಎ. ಎನ್. ಲಾಂಗ್‌ಹರ್ಸ್ಟ್ ತನ್ನ 'ಹಂಪಿ ರೂಯಿನ್ಸ್' ಕೃತಿಯಲ್ಲಿ ಬಡವರ ಮನೆಗಳಂತೂ ಕೊಳಕಿನ ಮುದ್ದೆಯಾಗಿ ಇವತ್ತಿನ ದೊಡ್ಡ ನಗರಗಳ ಕೊಳಚೆ ಪ್ರದೇಶಗಳನ್ನು ನೆನಪಿಗೆ ತರುವಂತಿದ್ದವು ಎಂದು ಹೇಳುತ್ತಾನೆ. ಲಾಂಗ್‌ಹರ್ಸ್ಟ್‌ನಿಗೆ ವಿಜಯನಗರದಲ್ಲಿದ್ದ ಜನರ ದಾರುಣ ಜೀವನ ಕಣ್ಣು ಕಟ್ಟಿದೆ. ಆದರೆ ಅವರು ಸಮಾಜದ ಯಾವ ಸಮುದಾಯಗಳಿಗೆ ಸೇರಿದವರೆಂಬ ಅರಿವು ಅವನಿಗೆ ಇದ್ದಂತೆ ಇಲ್ಲ.

ಪೋರ್ಚುಗೀಸ್ ಪ್ರವಾಸಿಗ ಡಾರ್ಟೆ ಬಾರ್ಬೋಸಾ ತನ್ನ 'ದಿ ಬುಕ್ ಆಫ್ ಡಾರ್ಟೆ ಬಾರ್‌ಬೋಸಾ' ಎಂಬ ಪ್ರವಾಸಕಥನದಲ್ಲಿ, ಸಾಮಾನ್ಯ ಜನರ ಮನೆಗಳು ಹುಲ್ಲುಹೊದಿಸಿದವಾಗಿದ್ದವು. ಅವನ್ನು ಅವರವರ ವೃತ್ತಿಗಳಿಗೆ ಅನುಗುಣವಾಗಿ ವಿಂಗಡಿಸಲಾಗಿತ್ತು. ಉದ್ದ ಬೀದಿಯ ಅಕ್ಕಪಕ್ಕದಲ್ಲಿ ಅಗಲವಾದ ಅಂಗಳದಿಂದ ಅವು ಕೂಡಿದ್ದವು ಎನ್ನುತ್ತಾನೆ. ಅವನು ಕೆಳಸಮುದಾಯಗಳ ಕೇರಿಗಳನ್ನು ಕುರಿತು ವಿವರಣೆ ನೀಡಿದ್ದಾನಾದರೂ ಅದು ಭಾರತೀಯ ಸಮಾಜದ ಏಣಿಶ್ರೇಣಿ ವ್ಯವಸ್ಥೆಗೆ ಅನುಗುಣವಾಗಿ ಖಚಿತವಾಗಿಲ್ಲ.

ಎ. ಬಿ. ಸಾಲತೊರೆ ತಮ್ಮ 'ವಿಜಯನಗರ ಸಾಮ್ರಾಜ್ಯದ ರಾಜಕೀಯ ಮತ್ತು ಸಾಮಾಜಿಕ ಜೀವನ' ಕೃತಿಯಲ್ಲಿ ''ವಿಜಯನಗರ ಕಾಲದಲ್ಲಿ ಶ್ರೇಣಿಗಳು ಹಿಂದಿನ ಯಾವ ಶತಮಾನಕ್ಕಿಂತಲೂ ಹೆಚ್ಚಿನ ಮಟ್ಟದಲ್ಲಿ ಸಂಘಟನೆಯನ್ನೂ ಪ್ರಭಾವವನ್ನೂ ಪಡೆದಿದ್ದವೆಂದು ಹೇಳಬಹುದು. ಶ್ರೇಣಿಗಳ ಸದಸ್ಯರನ್ನು ವೀರ ಬಣಜಿಗರೆಂದು ಕರೆಯಲಾಗುತ್ತಿತ್ತು. ಅವರು ಬಲವತ್ತರವಾದ ಪ್ರಭಾವವುಳ್ಳವರೇ ಆಗಿದ್ದರು. ಶ್ರೇಣಿಗಳ ಧುರೀಣರು ರಾಜ್ಯಾಲಯದಲ್ಲಿಯೂ ಸಹ ಬಲವಾದ ಹಿಡಿತವುಳ್ಳವರಾಗಿದ್ದಂತೆ ಕಂಡುಬರುತ್ತದೆ. ಶ್ರೇಣಿ ಧುರೀಣರು ಸರ್ಕಾರಕ್ಕೆ ಅರ್ಜಿ ಸಲ್ಲಿಸಿದಂತೆ ಅದು ಹೊಸ ಪಟ್ಟಣಗಳನ್ನು ನಿರ್ಮಿಸಿತು. ಅಲ್ಲದೆ ಶ್ರೇಣಿಯ ಪ್ರಮುಖರು ಸರಕಾರದಿಂದ ಕೆಲ ಕರ ವಿನಾಯಿತಿಯನ್ನೂ ಪಡೆದರು,'' ಎಂದು ಹೇಳಿದ್ದಾರೆ. ಜಾತಿ ವ್ಯವಸ್ಥೆಯ ಮಧ್ಯಮ ಕ್ರಮಾಂಕದಲ್ಲಿ ಬರುವ ವ್ಯಾಪಾರಿ ವರ್ಗ ವಿಜಯನಗರ ಕಾಲದಲ್ಲಿ ಆಡಳಿತ ವ್ಯವಸ್ಥೆಯೊಂದಿಗೆ ಲಾಭದಾಯಕ ಸಂಬಂಧ ಹೊಂದಿತ್ತು. ಸಮಕಾಲೀನ ಶ್ರೀಮಂತ ಸಮಾಜದಲ್ಲಿ ಸಮಪಾಲು ಪಡೆದ ಜನವರ್ಗವಾಗಿತ್ತು.

ವಿಜಯನಗರದ ಕಾಲದಲ್ಲಿ ಜಾತಿ ವ್ಯವಸ್ಥೆಯನ್ನು ಕಟ್ಟುನಿಟ್ಟಾಗಿ ಪಾಲಿಸಲಾಗುತ್ತಿತ್ತು. ಈ ವ್ಯವಸ್ಥೆಯಲ್ಲಿ ಮೇಲುವರ್ಗಗಳು ಆಳುವ ವರ್ಗಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದವು ಮತ್ತು ಸ್ವಕೇಂದ್ರಿತ ನೀತಿಯನ್ನು ಅನುಸರಿಸಿದ್ದವು. ಅಂದಿನ ಕಾಲದಲ್ಲಿ ದೇವಾಲಯಗಳು ಸಾಮಾಜಿಕ-ಆರ್ಥಿಕ ಕೇಂದ್ರಗಳಾಗಿ ರೂಪಿತವಾಗಿದ್ದವು. ವಿಜಯನಗರದ ದೇವಾಲಯಗಳು ಕ್ರೋಡೀಕೃತ ಸಂಪತ್ತಿನ ಕೇಂದ್ರಗಳಾಗಿದ್ದವು. ಸಂಪತ್ತಿನ ಉಪಭೋಗದಲ್ಲಿ ಆಳುವ ಸಾಮಾಜಿಕ-ರಾಜಕೀಯ ವರ್ಗಗಳು ಸಿಂಹಪಾಲು ಹೊಂದಿದ್ದವು. ಈ ಮಾತನ್ನು ಡೊಮಿಂಗ್ ಪಯೇಸ್‌ನ ಬಣ್ಣನೆ ಸಮರ್ಥಿಸುತ್ತದೆ : ''ಬಂಗಾರದ ಗಿಲೀಟು ಮಾಡಿದ, ತಾಮ್ರ ಹೊದಿಸಿದ ಚಿಕ್ಕ ಪಾವಟಿಗೆಗಳಿವೆ. ಮತ್ತು ಅಲ್ಲಿಂದ ಮೇಲಿನವರೆಗೆ ಪೂರ್ತಿ ಬಂಗಾರದ ಪದರ ಕೂಡಿಸಲಾಗಿದೆ... ದ್ವಾರ ಮಂಟಪವಿದೆ. ಅದರ ಮೇಲೆ ಮಾಣಿಕ್ಯ, ವಜ್ರ ಇತರ ಎಲ್ಲ ಬೆಲೆಯುಳ್ಳ ಹರಳುಗಳು ಮತ್ತು ಮುತ್ತುಗಳ ಕೆಲಸವಿದೆ. ದ್ವಾರಮಂಟಪದ ಮೇಲೆ ಎರಡು ಸುವರ್ಣ ಲೋಲಕಗಳಿವೆ. ಈ ಕೋಣೆಯಲ್ಲಿ ಒಂದು ಮಂಚವಿದೆ. ಅದರ ಕಾಲುಗಳು ದ್ವಾರಮಂಟಪದಂತೆಯೆ ಇವೆ. ಅಡ್ಡಪಟ್ಟಿಗಳನ್ನು ಬಂಗಾರದಿಂದ ಹೊದಿಸಲಾಗಿತ್ತು.'' ಹಾಗೆಯೇ ''...ಮೂರು ಬಂಗಾರದ ಕಡಾಯಿಗಳನ್ನು ಕಂಡೆವು. ಅವುಗಳು ಎಷ್ಟು ದೊಡ್ಡವಿದ್ದವೆಂದರೆ ಪ್ರತಿಯೊಂದರಲ್ಲಿ ಅರ್ಧ ಆಕಳನ್ನು

ಬೇಯಿಸಬಹುದಿತ್ತು. ಅವುಗಳೊಂದಿಗೆ ಬಹಳ ದೊಡ್ಡ ಬೆಳ್ಳಿಯ ಕಡಾಯಿಗಳು ಮತ್ತು ಕೆಲವು ಚಿಕ್ಕ ಹಾಗೂ ಕೆಲವು ದೊಡ್ಡ ಬಂಗಾರದ ಪಾತ್ರೆಗಳಿದ್ದವು.'' ಇದು ವಿಜಯನಗರದ ಅರಮನೆಯ ಬಣ್ಣನೆಯ ಸಣ್ಣ ಉದಾಹರಣೆ. ಅಲ್ಲಿ ಮರ, ಕಲ್ಲು, ಮಣ್ಣು, ಕಬ್ಬಿಣ ಮತ್ತಿತರ ಲೋಹಗಳ ಬದಲಿಗೆ ಚಿನ್ನವನ್ನು ಬಳಸಲಾಗಿತ್ತು. ಆಳುವ ವರ್ಗಗಳ ಜೀವನ ವಿಧಾನದಲ್ಲಿ ಸಂಪತ್ತಿನ ದುಂದು ಬಳಕೆ ಯಥೇಚ್ಛವಾಗಿತ್ತು.

ಅಸ್ಪೃಶ್ಯರು ಊರ ಹೊರಗೆ ವಾಸಿಸುತ್ತಿದ್ದು, ನಡುಹಗಲಿನಲ್ಲಿ ಮಾತ್ರ ಊರು ಪ್ರವೇಶ ಮಾಡುವ ನಿಯಮವಿತ್ತು. ಆ ಸಂದರ್ಭದಲ್ಲಿ 'ಸಂಬೋಳಿ' ಎಂದರಚಿ ಕೋಲು ಕುಟ್ಟುತ್ತ, ತಮ್ಮ ಬರುವಿಕೆ ಬಗ್ಗೆ ಎಚ್ಚರಿಕೆ ನೀಡಬೇಕಿತ್ತು. ಈ ಸೂತಕಾಚರಣೆ ಕೆಳಜಾತಿಗಳ ಮೇಲೆ ಬಹಿಷ್ಕೃತ ಜೀವನ ಹೇರುವ ಮೂಲಕ ಅವರ ಹಕ್ಕುಗಳನ್ನು ಜೀವಿತಾವಧಿ ಪೂರ್ತಿ ಕಸಿದುಕೊಂಡಿತ್ತು. ಅವರು ತಮ್ಮ ಮೇಲೆ ಹೊರಿಸಲಾಗಿದ್ದ ಮುಟ್ಟದ, ನೆರಳು ಬೀಳದ ಮತ್ತು ನೋಡದ ಬಹಿಷ್ಕಾರವನ್ನು ಸ್ವಹಿತ ದೃಷ್ಟಿಕೋನದಿಂದ ಪಾಲನೆ ಮಾಡಬೇಕಿತ್ತು. ಸಂಬೋಳಿ ಆಚರಣೆ ಸಾರ್ವಜನಿಕ ಪ್ರದೇಶಗಳ ಸ್ವಚ್ಛತೆ ಮಾಡುವ ಭಾಗವಾಗಿದ್ದು, ಅಸ್ಪೃಶ್ಯರ ಸಾಮಾಜಿಕ ಜೀವನ ಅಧೋಗತಿಯಲ್ಲಿದ್ದ ಸಂಕೇತವಾಗಿದೆ. ಅವರ ಆರ್ಥಿಕ ಜೀವನ ಆಧುನಿಕ ಜಾಡಮಾಲಿಗಳ ಸ್ಥಿತಿಯನ್ನು ಹೋಲುತ್ತದೆ. ಮೀಸಲಾತಿ ಸೌಲಭ್ಯ ದೊರೆತು ಐದು ದಶಕಗಳು ಕಳೆದರೂ ಅಸ್ಪೃಶ್ಯರ ಆರ್ಥಿಕ ಸ್ಥಿತಿ ಸಂಪೂರ್ಣ ಸುಧಾರಿಸದೆ ಮಲವನ್ನು ಮೈಮೇಲೆ ಸುರಿದುಕೊಂಡು ತಮ್ಮ ಹೀನಸ್ಥಿತಿಯ ವಿರುದ್ಧ ಪ್ರತಿಭಟನೆ ನಡೆಸುವ ಹಂತ ತಲುಪಿರುವ ಇಂದಿನ ಸ್ಥಿತಿಗೆ ಹೋಲಿಸಿದರೆ, ಊಹಿಸಲೂ ಸಾಧ್ಯವಿಲ್ಲದ ಅಂದಿನ ಸ್ಥಿತಿ ಅಸಹನೀಯವೂ ದಯನೀಯವೂ ಆಗಿತ್ತು. ಅಂದು ಗುಲಾಮರು, ಸೂಳೆದೆರೆ ಕಟ್ಟಲಾಗದಂಥ ಕಡು ಬಡತನದಲ್ಲಿದ್ದ ಮಹಿಳೆಯರ ಬಗ್ಗೆಯೂ ಪ್ರಸ್ತಾಪಗಳಿವೆ.

ವಿಜಯನಗರ ಸಾಮ್ರಾಜ್ಯದ ಆರ್ಥಿಕ ವ್ಯವಸ್ಥೆ ಸಂಪೂರ್ಣವಾಗಿ ಬೇಸಾಯವನ್ನು ಅವಲಂಬಿಸಿತ್ತು. ಭೂ ಕಂದಾಯ ಸಾಮ್ರಾಜ್ಯದ ಮುಖ್ಯ ಮೂಲ ಆದಾಯವಾಗಿತ್ತು. ಸಾಮಾನ್ಯವಾಗಿ ಭೂಕಂದಾಯ ಕೃಷಿ ಉತ್ಪನ್ನದ ೧/೬ ಭಾಗದಷ್ಟು, ಕೆಲವು ವೇಳೆ ೧/೪ರಷ್ಟು ನೀಡಬೇಕಿತ್ತು. ಆದರೆ ಬ್ರಾಹ್ಮಣರು ಮತ್ತು ದೇವಾಲಯಗಳ ಭೂಮಿಗೆ ಉತ್ಪನ್ನದ ೧/೨೦ರಿಂದ ೧/೩೦ ಭಾಗವಾಗಿರುತ್ತಿತ್ತು. ರೈತ ಸಮುದಾಯ ಅನೇಕ ಬಗೆಯ ಸಮಸ್ಯೆಗಳನ್ನು ಎದುರಿಸಿದ ಪರಿಣಾಮವಾಗಿ ವಸಾಹತು ಮತ್ತು ವಸಾಹತೋತ್ತರ ಕಾಲದಲ್ಲಿ ರೈತ ಹೋರಾಟಗಳು ನಡೆದಿವೆ. ಅದು ವಸಾಹತುಪೂರ್ವ ಕಾಲದ ಸಣ್ಣಪುಟ್ಟ ರಾಜ್ಯಗಳು ಮತ್ತು ಸಾಮ್ರಾಜ್ಯಗಳಲ್ಲಿದ್ದ ಸ್ಥಿತಿಯ ಮುಂದುವರಿದ ಭಾಗವಾಗಿದ್ದಿರಬೇಕು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲೂ ನೂರಾರು ರೈತ ದಂಗೆಗಳು ನಡೆದವೆಂದು ತಿಳಿದುಬರುತ್ತದೆ. ಅಂದಿನ ಕಾಲದಲ್ಲಿ ರೈತ ಸಮುದಾಯ ಎದುರಿಸಿದ ಸಮಸ್ಯೆಗಳು, ಆರ್ಥಿಕ ಸ್ಥಿತಿಗತಿಗಳು ಅಧ್ಯಯನದ ವಿಷಯವಾಗಿದೆ.

ಶಿಷ್ಟ ಸಮಾಜದ ಹಿಂದುಳಿದ ಮತ್ತು ಕೆಳಸಮುದಾಯಗಳು ಮತ್ತು ಊರಾಚೆ ಜೀವಿಸುತ್ತಿದ್ದ ಸಮುದಾಯಗಳ ಆರ್ಥಿಕ ಜೀವನದ ಬಗ್ಗೆ ಹೆಚ್ಚಿನ ಮಾಹಿತಿ ಇಲ್ಲ. ಆದರೆ ವಿಜಯನಗರ ಕಾಲದಲ್ಲಿ ಜೀವಿಸಿದ್ದ ಕನಕ - ಪುರಂದರರು ತಮ್ಮ ರಚನೆಗಳಲ್ಲಿ ನೀಡುವ ಚಿತ್ರಣ ಅಧಿಕೃತವಾಗಿದೆ. ಅವರು ಭಾಗವತರಾಗಿ ಸಾಮ್ರಾಜ್ಯದುದ್ದಗಲ ತಿರುಗಿದವರೂ ಒಟ್ಟು ಸಮಾಜದ ನಿಕಟ ಸಂಪರ್ಕ ಪಡೆದಿದ್ದವರೂ ಆಗಿದ್ದರು.




ಕನಕದಾಸರ 'ಮೋಹನ ತರಂಗಿಣಿ'ಯ ೧೯ನೆಯ ಅಧ್ಯಾಯ 'ಅನಿರುದ್ಧನ ಬೇಟೆ' ಅಷ್ಟಾದಶ ಬಣ್ಣನೆಯ ಭಾಗವಾಗಿದೆ. ಅನಿರುದ್ಧನ ಸೈನಿಕ ಪಡೆ ಅವನನ್ನು ಹಿಂಬಾಲಿಸಿ ಕಾಡಿನ ಬೇಟೆಯಲ್ಲಿ ಭಾಗವಹಿಸುತ್ತದೆ. ಬೇಡರ ಪಡೆ ಬೇಟೆಯ ಉಜ್ಜುಗದಲ್ಲಿ ವ್ಯಕ್ತಪಡಿಸಿರುವ ಉತ್ಸಾಹ, ಹುಮ್ಮಸ್ಸು, ಸಂಭ್ರಮದ ಭಾವನೆಗಳು ಹಂಪಿ ಸುತ್ತಮುತ್ತಲಿನ ಇಂದಿನ ಕಾಲದ ಬೇಡ ಜನತೆ ಯುಗಾದಿಯ ಕರಿಹಬ್ಬ ದಿನದಂದು ಬೇಟೆಯಾಡಿದ ಮಿಗಗಳ ಮೆರವಣಿಗೆಯಲ್ಲಿನ ಮನಃಸ್ಥಿತಿಯನ್ನು ಹೋಲುತ್ತದೆ. ಇಂದಿನ ಹೊಸಪೇಟೆ ಮತ್ತು ಕೊಪ್ಪಳದ ಸುತ್ತಮುತ್ತಲ ಪ್ರದೇಶಗಳಲ್ಲಿ ಬೇಡ ಮತ್ತು ಕುರುಬ ಸಮುದಾಯಗಳೇ ಪ್ರಮುಖ ಸಮುದಾಯಗಳಾಗಿದ್ದು, ಇದು ಅಂದಿಗೂ ಅನ್ವಯವಾಗುವ ವಾಸ್ತವಾಂಶವಾಗಿದೆ. ಕನಕದಾಸರು ತಮ್ಮ ಕಾವ್ಯದಲ್ಲಿ ಬೇಡರ ಬಗ್ಗೆ ನೀಡಿರುವ ಮಾಹಿತಿ ಅಂದಿನ ಬೇಡ ಸಮುದಾಯದ ಸ್ಥಿತಿಗತಿಗಳನ್ನು ತಿಳಿಸುತ್ತದೆ. ಬಹುಸಂಖ್ಯಾತರಾಗಿದ್ದ ಅವರು ವಿಜಯನಗರದ ಸೈನಿಕ ಪಡೆಯಲ್ಲಿ ಸೇವೆ ಸಲ್ಲಿಸುತ್ತಿದ್ದರೆಂದು ಇದರಿಂದ ತಿಳಿಯಬಹುದು. ಅಂದು ರಾಜನಿಂದ ನೇಮಕವಾಗಿ ನಿಗದಿತ ಸಂಬಳ ಪಡೆಯುತ್ತಿದ್ದ ಸೈನಿಕರು ಮತ್ತು ಯುದ್ಧ ಕಾಲದಲ್ಲಿ ಸೈನಿಕರಾಗಿ ಹೋರಾಡಿ ಲಾಭದಾಯಕ ಇನಾಮು ಪಡೆಯಲು ಸಾವಿನ ಹಂಗು ತೊರೆದು ಹೋರಾಡುವ ಸೈನ್ಯಪಡೆ ಎಂದು ಎರಡು ವಿಭಾಗಗಳಿದ್ದವು. ಅಂದಿನ ಬೇಡ ಸಮುದಾಯದ ಪಡೆ ಯಾವ ಬಗೆಯದಾಗಿತ್ತು ಮತ್ತು ಅವರ ಆರ್ಥಿಕ ಸ್ಥಿತಿ ಹೇಗಿತ್ತು ಎಂಬುದರ ಕುರಿತು ಅಧ್ಯಯನವಾಗಬೇಕಿದೆ.

ಅನಿರುದ್ಧನು ಸೈನ್ಯದೊಡನೆ ಹೊರಟು ಮುಂಬನದಲ್ಲಿದ್ದ ಬುಡಕಟ್ಟು ಮಹಿಳೆಯರಾದ ಚೆಂಚಿತಿಯರ ಆಟಗಳನ್ನು ನೋಡಲು ಬರುತ್ತಾನೆ. ಯೌವನ ತುಂಬಿದ ಆ ಮಹಿಳೆಯರ ಗುಂಪು ಗಜದಂತ ಮುಸಲದಿಂದ ಬಿದಿರಕ್ಕಿ ಕುಟ್ಟುತ್ತಿದ್ದು 'ರಂಗುನೀಲದ ಪುತ್ಥಳಿಗಳಂತೆ' ಕಂಡಿದ್ದಾರೆ. ಬಳ್ಳಾರಿ ಮತ್ತು ನೆಲ್ಲೂರು ಜಿಲ್ಲೆಗಳಲ್ಲಿ ಚೆಂಚು ಬುಡಕಟ್ಟು ಇಂದಿಗೂ ಕಂಡುಬರುತ್ತದೆ. ವಿಜಯನಗರದ ಶಿಲ್ಪಗಳಲ್ಲಿ ಕೆತ್ತನೆ ಮಾಡಿರುವ ಬಿಲ್ಲುಗಾತಿಯರನ್ನು ಚೆಂಚು ಬುಡಕಟ್ಟಿನ ಮಹಿಳೆಯರೆಂದೂ ಚೆಂಚುಲಕ್ಷ್ಮಿಯರೆಂದೂ ಕರೆಯಲಾಗುತ್ತದೆ. ಚೆಂಚಿತಿಯರು ಚೆಂಚು ಬುಡಕಟ್ಟಿನ ಮಹಿಳೆಯರಾಗಿದ್ದು, ತಮ್ಮಲ್ಲಿಗೆ ಬಂದ ರಾಜನಿಗೆ ಪತ್ರೋಪಹಾರವನ್ನು ಹಾಕಿ ಸ್ವಾಗತ ನೀಡುತ್ತಾರೆ. ನಂತರ ಅವರು ಕಾಡಿನಲ್ಲಿ ಸಂಗ್ರಹಿಸಿದ ಆಹಾರ ಮತ್ತು ಕಾಡಿನಲ್ಲಿ ಸಾಹಸ ಮೆರೆದು ಬೇಟೆಯಾಡಿ ಪಡೆದ ಕ್ರೂರ ಪ್ರಾಣಿಗಳ ವಿಶಿಷ್ಟ ವಸ್ತುಗಳನ್ನು ಅರ್ಪಿಸುತ್ತಾರೆ. ಅವರು ಸಮರ್ಪಿಸಿದ ಆಹಾರ ಪದಾರ್ಥಗಳಲ್ಲಿ ಬಿದಿರಕ್ಕಿ, ಜೇನುತುಪ್ಪ, ಖರ್ಜೂರ, ದ್ರಾಕ್ಷಿ, ಬದರಿ ಮುಂತಾದ ಸತ್ವಗಳು ಮತ್ತು ಉದುರಿದ ಕಳಿತ ಹಣ್ಣುಗಳಿದ್ದುದು ಗಮನಿಸತಕ್ಕದ್ದಾಗಿದೆ. ಬಿದರಕ್ಕಿ ಬರಗಾಲದಲ್ಲಿ ಫಸಲು ಬಿಡುವ ಧಾನ್ಯವಾಗಿದೆ. ವಿಜಯನಗರದಲ್ಲಿ ದಾಸ್ತಾನು ಮಾಡುತ್ತಿದ್ದ ಮತ್ತು ಬಳಸುತ್ತಿದ್ದ ಅಕ್ಕಿ, ಗೋಧಿ, ಜವೆ, ಬೇಳೆ ಕಾಳು ಮತ್ತಿತರ ದವಸ ಧಾನ್ಯಗಳ ಬಳಕೆಯೆ ಬುಡಕಟ್ಟುಗಳಲ್ಲಿ ಇರಲಿಲ್ಲವೆಂಬುದು ಮುಖ್ಯ. ಇಂಥ ಕಾಡು ಜನತೆಗೆ ಕಾಡಿನಲ್ಲಿ ಬರ ಬಂದು ಆಹಾರ ಉತ್ಪಾದನೆಯಿಲ್ಲದೆ ಕಾಡು ಫಲಾಹಾರಗಳು ಸಂಗ್ರಹವಾಗದೆ ಇದ್ದ ಸಂದರ್ಭಗಳಲ್ಲಿ ಗೆಡ್ಡೆ ಗೆಣಸು, ಕಂದ ಮೂಲಗಳನ್ನು ಅಗೆದು ತಿಂದು ಹಸಿವು ನೀಗಿಸುವುದು ಅನಿವಾರ್ಯವಾಗಿತ್ತು. ಅದಕ್ಕೂ ಕೊರತೆಯುಂಟಾದಾಗ ನಗರಗಳಲ್ಲಿ ದಾಸ್ತಾನು ಮಾಡಿರುವ ಧ್ಯಾನ್ಯಗಳನ್ನು ಪಡೆಯಬೇಕಿತ್ತು. ಆದರೆ ಅದನ್ನು ಪಡೆಯಲು ಅಗತ್ಯವಾದ ಹಣಕಾಸು ಮತ್ತು ಸಂಪತ್ತಿಲ್ಲದ ಹೀನ ಸ್ಥಿತಿಯಲ್ಲಿ ಹಸಿವನ್ನು ಹಿಂಗಿಸಿಕೊಳ್ಳುವುದು ಹೇಗೆ ? ಸೋತ ವಿಜಯನಗರದಲ್ಲಿ ಆರು ಬಾರಿ ಉಗ್ರಾಣ ಮತ್ತು ಅಂಗಡಿಗಳನ್ನು ಲೂಟಿ ಮಾಡಿದ ಬ್ರಿಂಜಾರಿಗಳು, ಲಂಬಾಡಿಗಳು, ಕುರುಬ ಮತ್ತು ಕಾಡುಜನರ ತಂಡಗಳ ಸ್ಥಿತಿಯೂ ಇದೇ ಆಗಿತ್ತು.

ಕನಕದಾಸರ 'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎಂಬ ಹಾಡಿನ ಸಾಲು ಜೀವನದ ಮೂಲ ಅವಶ್ಯಕತೆಯಾದ ಅನ್ನ, ಬಟ್ಟೆ ಮತ್ತು ಸೂರಿನ ಸಮಸ್ಯೆ ವಿಜಯನಗರದ ಬಹುಪಾಲು ಸಮುದಾಯಗಳ ಸಮಸ್ಯೆಯಾಗಿತ್ತೆಂದು ಕಾಣಿಸಿದೆ. ಅಂದು 'ಕೊಟ್ಟಣವನು ಕುಟ್ಟಿಕೊಂಡು ಕಟ್ಟಿಗೆಯನು ಹೊತ್ತುಕೊಂಡು ಕಷ್ಟ ಮಾಡಿ ಬದುಕುವುದು' ಮತ್ತು 'ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಸಮನುಮಾಡಿ ರೆಂಟೆ ಹೊಡೆದು ಬೆಳೆಸುವುದು' ಸಾಮಾನ್ಯವಾಗಿತ್ತು. ಸಮಾಜದಲ್ಲಿ ನೆಲೆಸಿದ್ದ ಜೀವನ ವೃತ್ತಿಗಳೆಲ್ಲ ಶ್ರಮಜೀವಿಗಳಿಗೆ ಅವರ ಶ್ರಮಕ್ಕೆ ತಕ್ಕ ಫಲವಾಗಿ ಸಂಪತ್ತು ದೊರೆಯದಂತೆ ಮಾಡುವ ವೃತ್ತಿಗಳಾಗಿದ್ದವು. ಈ ಸಾಮಾಜಿಕಾಂಶ ಬೌದ್ಧಿಕ ಶರಣಾಗತಿ ಮತ್ತು ಭೌತಿಕ ಶರಣಾಗತಿಯನ್ನು ಉಂಟುಮಾಡಿತ್ತು. ಕೆಳಜಾತಿಯವರನ್ನು ಪರರ ಸೇವೆಗೆ,

ದಾಸ್ಯವೃತ್ತಿಗೆ, ಊಳಿಗತನಕ್ಕೆ ಮಾತ್ರ ಯೋಗ್ಯರನ್ನಾಗಿಸಿತ್ತು. ಬಂಟನಾಗಿ ಬಾಗಿಲ ಕಾಯ್ವೆ ಹರಿಯ/ವೈಕುಂಠದ ಸೊಂಪಿನ ದಾಸರ ಮನೆಯ/ಎಂಜಲ ಹರಿವಾಣಂಗಳ ಬೆಳಗುವೆ/ಸಂಜೆಗೆ ಪಂಜಿನ ದಾಸನಾಗಿರುವೆ/ ಮೀಸಲೂಳಿಗವ ನಾ ಮಾಡಿಕೊಂಡಿರ್ಪೆ/ಶೇಷ ಪ್ರಸಾದವ ನಾ ಮಾಡಿಕೊಂಡಿರುವೆ ಎಂಬ ಸಾಲುಗಳು ಅಂದಿನ ಪರಿಸ್ಥಿತಿಯನ್ನು ಸೂಚಿಸುತ್ತವೆ. ಕಸ ಗುಡಿಸುವ, ರಂಗೋಲಿ ಹಾಕುವ, ರತ್ನಗಂಬಳಿ ಹಾಸುವ ಮತ್ತು ಮಡಚಿಡುವ ಮನೆಗೆಲಸದ ಕಾಯಕ ದಾಸ್ಯತನದಿಂದ ಕೂಡಿದ್ದು ಕೆಳಜಾತಿಗಳ ಬದುಕು ದಾರಿದ್ರ್ಯವೇ ಆಗಿತ್ತು. (ಪುಟ್ಟಿದಂದಿನಾರಭ್ಯ.../ಕಷ್ಟಪಟ್ಟೆನು...ದಟ್ಟದಾರಿದ್ರ್ಯವನು ಪರಿಹರಿಸದಿದ್ದರೆ/ ಮುಟ್ಟುವುದು ದೂರು ನಿನಗೆ ಕೃಷ್ಣ). ಆರ್ಥಿಕ, ಸಾಮಾಜಿಕ, ನೈತಿಕ ಕ್ಷೇತ್ರಗಳಲ್ಲಿ ಆವರಿಸಿಕೊಂಡಿದ್ದ ದಟ್ಟ ದಾರಿದ್ರ್ಯ, ಅಸ್ಪೃಶ್ಯತೆಯ ಆಚರಣೆ ಮತ್ತು ಮಾನವೀಯ ದೌರ್ಜನ್ಯಗಳಿಂದ ಕೆಳಜಾತಿಗಳ ಬದುಕು ಭೀಕರವಾಗಿತ್ತು. ಮನುಷ್ಯನಲ್ಲಿ ಮನುಷ್ಯತ್ವ ಕಾಣಲಾಗದ ಸ್ಥಿತಿ ಮನೆಮಾಡಿತ್ತು. ದಾಸಾರ್ಯರ ದಾಸರ ದಾಸ ನಾನು/ಗುಟ್ಟು ಮಾಡಿಕೊಂಡಿರದೆ ಕಂಡವರಿಗೆ ಕಾರ್ಪಣ್ಯ/ಪಟ್ಟು ಬಡವನಾದೆನಲ್ಲ, ಎಂಬ ಹಳಹಳಿಕೆಯ ಹಿಂದೆ ಅಡಿಯಾಳುತನ, ಬಡತನ, ಅನ್ಯಾಯ, ದುಸ್ಥಿತಿ, ಶೋಷಣೆ, ಅಪಮಾನ, ನೋವು ಅಸಹಾಯಕತೆ ತುಂಬಿವೆ. ಹುಟ್ಟು ದಾಸಿಯ ಮಗನು ಪರದೇಶಿಯೋ ಎಂಬ ಮಾತು ಕೆಳಜಾತಿಯ ಹೆಂಗಸನ್ನು ತಾಯಿಯಾಗಿ ಪಡೆದ ತಪ್ಪಿಗೆ ಇಡೀ ಜೀವನಪರ್ಯಂತ ದಾಸನಾಗಿ ಮೇಲುವರ್ಗದವರ ಸೇವೆ ಮಾಡಿಕೊಂಡಿದ್ದ ಸ್ಥಿತಿ ಇತ್ತು. ದಾಸದಾಸರ ಮನೆಯ ದಾಸಿಯರ ಮಗ ನಾನು/ ಶಂಕುದಾಸರ ಮನೆಯ ಮಂಕುದಾಸನು ನಾನು/ ಮಂಕುದಾಸನು ನಾನು ಮರುಳದಾಸ/ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ/ಬಿಂಕದಿ ಬಾಗಿಲ ಕಾವ, ಬಡ ದಾಸ ನಾನಯ್ಯ/ಹಲವು ದಾಸರ ಮನೆಯ ಹೊಲೆಯ ದಾಸನು ನಾನು/ಕುಲವಿಲ್ಲದ ದಾಸ ಕುರುಬ ದಾಸ – ಹೀಗೆಲ್ಲ ಕನಕದಾಸರು ಶಿಷ್ಟ ಸಮಾಜದ ಹಿಂದುಳಿದ ಮತ್ತು ಬಲಹೀನ ಸಮುದಾಯಗಳ ಸಾಮಾಜಿಕ ಮತ್ತು ಆರ್ಥಿಕ ಹೀನಾಯ ಸ್ಥಿತಿಯನ್ನು ಕಟ್ಟಿಕೊಟ್ಟಿದ್ದಾರೆ.

ಪುರಂದರರ ರಚನೆಗಳಲ್ಲೂ ತೀವ್ರ ಬಡತನದ ಚಿತ್ರವಿದೆ. ಜೀವನದ ಅವಶ್ಯಕ ವಸ್ತುಗಳಾದ ಅನ್ನ, ನೀರು, ವಸತಿ ಸಮಸ್ಯೆಗಳಿಂದ ಪಾಡುಪಡುತ್ತಿದ್ದ ಸ್ಥಿತಿ ವಿಜಯನಗರ ಸಾಮ್ರಾಜ್ಯದ ಜನತೆಯದಾಗಿತ್ತೆಂದು 'ಅನುಗಾಲವು ಚಿಂತೆ ಜೀವಕೆ' ಮತ್ತು 'ಯಾರಿಗೆ ಯಾರುಂಟು ಎರವಿನ ಸಂಸಾರ' ದಾಖಲಿಸಿವೆ. ತೊಂಡನಾಗಿ ತಿರುಗಿ ತುತ್ತ ತರುವ ಚಿಂತೆ/ಅತ್ತು ಅನ್ನಕೆ ಕಾಡುವ ಚಿಂತೆಯು/ತುತ್ತಿನ ಆಸೆಗೆ ತುರುಗಳ ಕಾಯ್ದರು/ ಸುತ್ತೇಳು ಕಡೆಯಿಲ್ಲದಾ ಚಿಂತೆಯು ಮತ್ತು ಬಾಯಾರಿತು ಎಂದು ಬಾವಿ ನೀರಿಗೆ ಪೋದೆ.../ಬಿಸಿಲ ತಾಳದೆ ಮರದ ನೆರಳಿಗೆ ಪೋದೆ.../ಅಡವಿಲಿ ಮನೆ ಮಾಡಿ ಗಿಡಕೆ ತೊಟ್ಟಿಲ ಕಟ್ಟಿ... ಹೀಗೆ ಅಂಕೆಗೆ ಒಳಪಡದ ತೊಂಡು ದನವೊಂದು ಊರೂರಿನ ಕೇರಿ ಹೊಲಗದ್ದೆಗಳನ್ನು ಅಲೆಯುವ ಹಾಗೆ ಮಾನವನೂ ತುತ್ತು ಅನ್ನ ಸಂಪಾದಿಸಲು ಅಲೆಯುವಂಥ ಸ್ಥಿತಿಯಿತ್ತು. ಅಂದು ನದಿ, ಕಾಲುವೆ, ಕೆರೆ, ಬಾವಿಗಳ ವ್ಯವಸ್ಥೆ ಇದ್ದರೂ ಕುಡಿಯುವ ನೀರಿನ ವ್ಯವಸ್ಥೆ ವ್ಯಾಪಕವಾಗಿ ಸಮರ್ಪಕವಿರಲಿಲ್ಲ. ಜನರ ವಸತಿಯೂ ಸಮಸ್ಯೆಯಾಗಿತ್ತು. ಬಡವರು ಕಾಡಿನಲ್ಲಿ ಮರದ ನೆರಳಲ್ಲಿ ವಾಸಮಾಡುತ್ತಿದ್ದರು. ಹಣ ಗಳಿಸುವ ಧಾರಣ ಶಕ್ತಿ ಪಡೆಯದವರು ಜೀವನದ ಅವಶ್ಯಕತೆಯನ್ನು ಅಲೆಮಾರಿಗಳ ಹಾಗೆ, ಭಿಕ್ಷುಕರ ಹಾಗೆ ಪೂರೈಸಿಕೊಳ್ಳಬೇಕಾಗಿತ್ತು. ಸಮಾಜದಲ್ಲಿ ಆರ್ಥಿಕ ಶಕ್ತಿಯನ್ನಾಧರಿಸಿದ ಅಸಮಾನ ವರ್ಗಗಳ ಭಾಗವಾಗಿ ಬಡತನವಿತ್ತು. ಹಾಗಾಗಿ ಆರ್ಥಿಕ ಅಸಮಾನತೆಗೂ ಸಾಮಾಜಿಕವಾದ ಜಾತಿ ಆಧಾರಿತ ತಾರತಮ್ಯ ನೀತಿಗೂ ಪರಸ್ಪರ ಸಂಬಂಧ ಕಲ್ಪಿಸಬಹುದು.

ಬಡವರು ತಮ್ಮ ಜೀವನ ನಿರ್ವಹಣೆಗಾಗಿ ಸಾಲ ಮಾಡಿ ಅದನ್ನು ಹಿಂದಿರುಗಿಸಲಾಗದೆ ಏನೆಲ್ಲ ಅಪಮಾನಗಳನ್ನು ಎದುರಿಸುತ್ತಿದ್ದರೆಂದು ನಿರೂಪಿಸುವ ರಚನೆಗಳಿವೆ. ಕೆಳಜಾತಿಗೆ ಸೇರಿದ ಬಡವನೊಬ್ಬ ಸಾಲಮಾಡಿ ಅದನ್ನು ತೀರಿಸಲಾಗದ ಸ್ಥಿತಿಯಿತ್ತು. 'ಕೊಟ್ಟ ಸಾಲ ಕೊಡದೆ ಭಂಡಾಟ ಮಾಡುತ್ತಾನೆ' ರಚನೆಯಲ್ಲಿ ಬಡವರು ಜೀವನ ನಡೆಸಲೆಂದು ಸಾಲ ಪಡೆಯುವುದು, ಅದನ್ನು ಹಿಂದಿರುಗಿಸಲಾಗದ ಪಾಪಪ್ರಜ್ಞೆಯಿಂದ ನರಳುವುದು, ಸಾಲ ನೀಡಿದವನಿಗೆ ಮುಖ ತೋರಿಸಲಾಗದೆ ತಲೆಮರೆಸಿಕೊಂಡು ಅಡವಿಗಳಲ್ಲಿ ತಿರುಗುವುದು – ಹೀಗೆ ಉಭಯ ಸಂಕಟದಲ್ಲಿ ನರಳಿದ ಚಿತ್ರವಿದೆ. ಈ ಸಂಬಂಧ ಅನ್ನದ ಮೇಲೆ ಪ್ರಮಾಣ ಮಾಡಿದ್ದಲ್ಲಿ ಹಸಿದ ಹೊಟ್ಟೆಯಲ್ಲಿರುತ್ತಿದ್ದುದು, ಬೈದು ಅಪಮಾನಿಸಿದರೆ ತನಗಲ್ಲವೆಂಬಂತೆ ಸುಮ್ಮನಾಗಿ ಬಿಡುತ್ತಿದ್ದುದು, ಪಡೆದ ಹಣ ಹಿಂದಿರುಗಿಸದೆ ಮುಂದಡಿಯಿಡದಂತೆ ಕಟ್ಟಿಹಾಕಿದರೆ ತನ್ನ ನಿಲುವನ್ನು ಸಮರ್ಥಿಸಿ ಕಟ್ಟುಗ್ರವಾಗಿ ಹೋರಾಡುತ್ತಿದ್ದುದು ದಾರುಣ ಜೀವನದ ಭಾಗವಾಗಿತ್ತು.

ಪುರಂದರದಾಸರು ನಾಡಿನ ಸಂಚಾರದ ಸಮಯದಲ್ಲಿ ಕಂಡುಕೊಂಡ ವಾಸ್ತವ ಸಂಗತಿ – ಹಸಿವು ಮತ್ತು ಬಟ್ಟೆಯ ಸಮಸ್ಯೆಗಳು. 'ಲಂಗೋಟಿ ಬಲುವೊಳ್ಳೇದಣ್ಣ' ಅಂಥದೊಂದು ರಚನೆಯಾಗಿದೆ. ಲಂಗೋಟಿ ಬಡವರು, ಬೈರಾಗಿಗಳು, ಕಳ್ಳರು, ಬ್ರಾಹ್ಮಣರು, ಭಿಕ್ಷುಕರು, ಮಠದಯ್ಯ ಮೊದಲಾದ ಸಮಾಜದ ನಾನಾ ಜನವರ್ಗಗಳ ಉಡುಗೆಯಷ್ಟೇ ಆಗಿರದೆ ಭಿಕ್ಷುಕರ ಸ್ಥಿತಿಗತಿ, ಸಾಕ್ಷರಹೀನತೆ, ಬಡತನ, ಅಧಿಕಾರಹೀನಸ್ಥಿತಿಯ ಸಂಕೇತವಾಗಿದೆ.

'ಈ ಗ್ರಾಮದಲಿ ವಾಸ ಇರುವುದೆ ಪ್ರಯಾಸ' ಎಂಬ ರಚನೆ ವಿಜಯನಗರ ಸಾಮ್ರಾಜ್ಯದ ಗ್ರಾಮಗಳಲ್ಲಿದ್ದ ದುಸ್ತರ ಸ್ಥಿತಿಯ ದಾಖಲೆಯಾಗಿದೆ. ವಿಜಯನಗರ ಸಾಮ್ರಾಜ್ಯ ಸಂಪದ್ಭರಿತವಾಗಿದ್ದು, ಹೊರದೇಶಗಳೊಂದಿಗೆ ವ್ಯಾಪಾರ ವಹಿವಾಟು ನಡೆಯುತ್ತಿತ್ತು. ಹಂಪೆಯ ಸಾಲು ಮಂಟಪಗಳಲ್ಲಿ ದವಸ ಧಾನ್ಯ ಮುತ್ತು ಹವಳಗಳನ್ನು ರಾಶಿ ಹಾಕಿ ಮಾರಲಾಗುತ್ತಿತ್ತು. ವಿಜಯನಗರ ಕಾಲದಲ್ಲಿ ಆರ್ಥಿಕ ಚಟುವಟಿಕೆಗಳಲ್ಲಿ ಉಂಟಾದ ಹೆಚ್ಚಳದಿಂದಾಗಿ ಗ್ರಾಮಗಳು ಪಟ್ಟಣಗಳಾಗಿಯೂ ಪಟ್ಟಣಗಳು ನಗರಗಳಾಗಿಯೂ ಬೆಳವಣಿಗೆ ಕಂಡವು.

ಅದರ ಪರಿಣಾಮವಾಗಿ ಸಂಚಾರಿ ಮಾರುಕಟ್ಟೆಗಳಾದ ಸಂತೆಗಳು ಸಂಘಟಿತವಾದುವು. ವಿಜಯನಗರದ ಸಾಮ್ರಾಜ್ಯ ಆರ್ಥಿಕವಾಗಿ ಸುಭದ್ರ ಸ್ಥಿತಿಯಲ್ಲಿತ್ತು. ಆದರೆ ವಿಜಯನಗರದ ಗ್ರಾಮಗಳಲ್ಲಿ ಇತರ ಸಾಮಾಜಿಕ ಸಮಸ್ಯೆಗಳಿಗೆ ಕಾರಣವಾಗುವ ಮಟ್ಟಿಗೆ ಬಡತನ ತೀವ್ರತರವಾಗಿ ಅಡರಿಕೊಂಡಿತ್ತು. ಇಲ್ಲಿನ ಜನ ತಮ್ಮ ಬಡತನದ ಬೇಗೆಯನ್ನು ಪರಿಹರಿಸಿಕೊಳ್ಳಲು ಅನುಸರಿಸಿದ ಮಾರ್ಗ ನಾಗರಿಕ ಸಮಾಜದ ರೀತಿಯದ್ದಾಗಿರಲಿಲ್ಲ. ಅವರ ಹಸಿವಿನ ಶೂಲೆ ಅವರನ್ನು ಕೆಡುಕರನ್ನಾಗಿ, ಕಳ್ಳರನ್ನಾಗಿ, ಸುಳ್ಳರನ್ನಾಗಿ, ಕಪಟಿಗಳನ್ನಾಗಿ, ಊರೂರು ತಿರುಗಿ ಹೊಟ್ಟೆ ಹೊರೆಯುವಂತೆ ಒಡವೆ - ವಸ್ತು ಹೊಂದುವಂತೆ ಮಾಡಿತ್ತು. ದುಡಿಮೆಯಿಲ್ಲದೆ ಜೀವನ ಸಾಗಿಸಲು ಹೆಣಗುತ್ತಿದ್ದುದು ಬಡಜನರು ಅಡ್ಡದಾರಿ ಹಿಡಿದು ಕಷ್ಟಪಡುತ್ತಿದ್ದುದನ್ನು ಕಟ್ಟಿಕೊಡುತ್ತದೆ.

ಈ ಹಿನ್ನೆಲೆಯಲ್ಲಿ ರಾಜಧಾನಿ ಕೇಂದ್ರಿತ ವೈಭವವನ್ನು 'ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ' ರಚನೆ ನಿರಾಕರಿಸಿದೆ. ಚರಿತ್ರೆ ಮತ್ತು ಪರಂಪರೆಯಲ್ಲಿ ಅಂದಿನ ಸುಭದ್ರ ಸೈನ್ಯ ವ್ಯವಸ್ಥೆ, ಕಾಮಜೀವನಕ್ಕೆ ನೀಡಿದ್ದ ಮಹತ್ವ, ದೊಡ್ಡ ಸಾಮ್ರಾಜ್ಯದ ಹಿರಿಮೆ, ಮತ್ತು ಮಾಣಿಕ್ಯಗಳ ವ್ಯಾಪಾರ ವಹಿವಾಟು, ಏಳುಸುತ್ತಿನ ಸುಭದ್ರ ಕೋಟೆ, ಉತ್ತಮ ಪ್ರಭುತ್ವ, ಮುಸ್ಲಿಂ ವೈರಿಗಳು, ಸಾಮಾಜಿಕ ಸಂಬಂಧಗಳನ್ನೆಲ್ಲ ಪ್ರಸ್ತಾಪಿಸಿದೆ. ಅವು ಹೊಂದಿರುವ ಮೌಲ್ಯ ವ್ಯವಸ್ಥೆಯಲ್ಲಿ ಕಂಡುಬರುತ್ತಿದ್ದ ವಾಸ್ತವದ ಭಿನ್ನ ನೆಲೆಯನ್ನು ಸ್ಥಾಪಿಸಿದೆ. ಅಂದಿನ ರಾಜಕೀಯ ವ್ಯವಸ್ಥೆ ಕುರಿತ ನಿರಾಸೆ ಆಡಳಿತ ವ್ಯವಸ್ಥೆಯ ಜನಪರ ವಿರೋಧಿ ನಿಲುವನ್ನು ಧ್ವನಿಸುತ್ತದೆ. ಈ ರಚನೆಯಲ್ಲಿ ಇಡೀ ವ್ಯವಸ್ಥೆಯ ಟೊಳ್ಳುತನ ಅಭಿವ್ಯಕ್ತವಾಗಿದೆ. ಜನಪರವಲ್ಲದ ವ್ಯವಸ್ಥೆಯ ವಿಫಲತೆಯನ್ನು ತಾತ್ವಿಕವಾಗಿ ಎತ್ತಿ ಹಿಡಿದಿಡಲಾಗಿದೆ.

ಬಡತನವೆಂದರೆ ಸಂಪತ್ತು ಇಲ್ಲದಿರುವಿಕೆ ಆಗಿರದೆ ಪಡೆಯದಿರುವಿಕೆ ಅಥವಾ ಪಡೆಯುವ ಅವಕಾಶ ಇಲ್ಲದಿರುವಿಕೆಯೆ ಆಗಿದೆ. ಜೀವನದ ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಶಕ್ತಿ ಪಡೆದುಕೊಳ್ಳದಿರುವುದು, ಮತ್ತು ಜೀವನಾವಶ್ಯಕ ವಸ್ತುಗಳು ಮಾರುಕಟ್ಟೆಯಲ್ಲಿ ದೊರಕಿದರೂ ಅವನ್ನು ಪಡೆದುಕೊಳ್ಳುವಲ್ಲಿ ಬಲಹೀನತೆ ಉಂಟಾಗಿರುವುದು ಬಡತನವಾಗುತ್ತದೆ. ಬಡತನಕ್ಕೂ ಸಮಾಜದಲ್ಲಿ ನೆಲೆಸಿರುವ ಅಸಮಾನತೆ ಅಥವಾ ಆಚರಣೆಯಲ್ಲಿರುವ ತಾರತಮ್ಯ ನೀತಿಗೂ ಪರಸ್ಪರ ಸಂಬಂಧವಿದೆ. ಇದು ಸಾಂಸ್ಕೃತಿಕ ಆಶಯಗಳಿಗೆ ಸಂಬಂಧಪಟ್ಟ ಸಮಸ್ಯೆಯಾಗಿದ್ದು, ಸಂಪತ್ತು ಸಮಾಜದಲ್ಲಿ ಎಲ್ಲರಿಗೂ ಸಮಾನ ಹಂಚಿಕೆಯ ಅವಕಾಶ ಇಲ್ಲದಿದ್ದ ದ್ಯೋತಕವಾಗಿದೆ.

ವಿಜಯನಗರ ಸಮೃದ್ಧ ಸಂಪತ್ತಿನಿಂದ ತುಂಬಿ ತುಳುಕಿ ವೈಭವದಿಂದ ಮೆರೆದಿದ್ದ ಹಾಗೆಯೇ ಕಡುಬಡತನದಿಂದಲೂ ನರಳಿದ್ದಕ್ಕೆ ಸೂಚಕವಾಗಿದೆ. ಸಾಮ್ರಾಜ್ಯದ ಈ ಎರಡು ಮುಖಗಳು ತಾಳಿಕೋಟೆ ಯುದ್ಧ ನಂತರದ ಹಲವು ಬಗೆಯ ಲೂಟಿಗಳಿಗೆ ಕಾರಣವಾಗಿವೆ.

ಶ್ರೀಧರ ಪಿಸ್ಸೆ
ನಂ. ೬೩, ದೇಸಾಯಿ ಓಣಿ
ಕಮಲಾಪುರ - ೫೮೩ ೨೨೧, ಬಳ್ಳಾರಿ ಜಿಲ್ಲೆ

# ಮಾರುತಿಪುರ

• ಪುಂಡಲೀಕ ಪಾಟೀಲ •



**ಊ**ರ ಹೊರಗಿನ ಮಾರುತಿಪುರ ಹೆಸರಿಗೆ ತಕ್ಕಂತೆ ನಗರದ ಹೊರಗೆ ಆಲದ ಮರದ ಬಿಳಿಲುಗಳಂತೆ ಬೆಳೆಯಲಾರಂಭಿಸಿತ್ತು. ಮಾರುತಿಪುರ ಬಡಾವಣೆ ಬೆಳೆದಂತೆ ಜನರ ಅವಶ್ಯಕತೆಗೆ ಅನುಸಾರವಾಗಿ ಹಡಪಿಗನ ಅಂಗಡಿ, ಧೋಬಿ ಅಂಗಡಿ, ದಿನಸಿ ಅಂಗಡಿ, ಅಲ್ಲಲ್ಲಿ ಗೂಡಂಗಡಿಗಳಾಗಿ ಬೆಳೆದು ಜನಜಂಗುಳಿಯಿಂದ ಕಿಲಿಬಿಲಿ ಹಿಡಿಸಿತು. 'ಹಂದಿ ಇದ್ದರೆ ಊರು ಚೆಂದ' ಎನ್ನುವ ಗಾದೆಗೆ ತಕ್ಕಂತೆ ಹಂದಿಗಳು ಕುರಿಹಿಂಡಿನಂತೆ ಬೆಳೆದಿದ್ದವು.

ಮಾರುತಿಪುರದ ಬಡ ಹೆಂಗಳೆಯರು ಕೈಯಲ್ಲೊಂದು ಮೊಬೈಲ ಇದ್ದರೂ ಶೌಚಾಲಯವಿಲ್ಲದ್ದರಿಂದ ತಾವೂ ಊರ ಹೊರಗಿನ ಗಿಡಗಂಟಿಗಳ ಮಗ್ಗುಲಲ್ಲಿ ತಮ್ಮ ನೈಸರ್ಗಿಕ ಕ್ರಿಯೆ ತೀರಿಸಿಕೊಳ್ಳುತ್ತಿದ್ದರು. ಮಕ್ಕಳನ್ನು ಬೀದಿ ಬದಿ ಎಳೆತಂದು ಬೈಲುಕಡೆ ಕೆಲಸ ತೀರಿಸಬೇಕಾದರೆ ಬಡಿಗೆ ಹಿಡಿದು ಹಂದಿಗಳ ಜತೆ ಹೋರಾಡಬೇಕಾಗುತ್ತಿತ್ತು. ಮಾರುತಿಪುರ ಬಡಾವಣೆಯಲ್ಲಿ ಎಲ್ಲರೂ ಹೀಗೆ ಅಂತ ಹೇಳಲಾಗದು. ನಾಗರಿಕತೆಯ ಮೇಲುಪ್ಪರಿಗೆ ಏರಿದ ಹಲವರು ಶೌಚಾಲಯವೇ ಅಲ್ಲದೆ ಇತರ ಎಲ್ಲ ನಾಗರಿಕ ಸೌಲಭ್ಯಗಳನ್ನೂ ಹೊಂದಿದ್ದರು. ಆದರೆ ಜನಸಾಮಾನ್ಯ ಇತರ ಜನರೊಂದಿಗೆ ಅವರು ಬೆರೆತುಕೊಂಡು ತಮ್ಮ ಅಂತಸ್ತನ್ನು ಇಳಿಸಲು ಯತ್ನಿಸುತ್ತಿರಲಿಲ್ಲ. ಅಲ್ಲದೆ ಅವರೊಂದಿಗೆ ಮಾತಾಡಿದರೂ ತಮ್ಮ ಮೇಲ್ಮಟ್ಟ ಕುಸಿಯುತ್ತದೆಂಬ ಮನವರಿಕೆಯೂ ಅವರನ್ನು ಕಾಡುತ್ತಿತ್ತು.

ಇಂತಹ ಸ್ಥೂಲ ಚಿತ್ರ ಹೊಂದಿದ ಮಾರುತಿಪುರದಲ್ಲಿ ಎರಡು ವರ್ಗಗಳಿದ್ದವು. ಉಳ್ಳವರು ತಮ್ಮ ತಮ್ಮ ಅವಶ್ಯಕತೆಗಳಿಗಾಗಿ ಬೆಳಗಾವಿ ನಗರಕ್ಕೆ ಕಾರಿನಲ್ಲಿ ಹೋಗಿ ತಮಗೆ ಬೇಕಾದ ತರಕಾರಿ, ದಿನಸಿ ಸಾಮಾನು ತರುತ್ತಿದ್ದರು.

ಆದರೆ ಸಾಮಾನ್ಯವರ್ಗದವರು ತಮ್ಮ ತಮ್ಮ ಅವಶ್ಯಕತೆಗಳಿಗೆ ಬೀದಿ ಬದಿಯ ತರಕಾರಿ ಅಂಗಡಿಗಳನ್ನೇ ಅವಲಂಬಿಸಬೇಕಾಗುತ್ತಿತ್ತು. ತರಕಾರಿ ಮಾರುವ ಮಹಿಳೆಯರ ಹಿಂದೆಯೇ ಬಾಲಕ ಬಾಲಿಕೆಯರು ತಮ್ಮ ತಮ್ಮ ನೈಸರ್ಗಿಕ ಒತ್ತಡವನ್ನು ಕಡಿಮೆ ಮಾಡಿಕೊಳ್ಳುತ್ತಿದ್ದರು. ಕಾರ್ಪೊರೇಶನ್ ಖಾಕಿ ಅಂಗಿಯ ಜವಾನ ಕೋಲು ಹಿಡಿದು ಬಂದರೆ ಕೈಯಲ್ಲಿ ಚಡ್ಡಿ ಹಿಡಿದುಕೊಂಡು ಬರಿ ಮುಕುಳಿ ಮುಚ್ಚಿಕೊಂಡು ಓಡುತ್ತಿದ್ದರು. ಆದರೆ ಅಲ್ಲಿಯೇ ಯಾವ ಭಯಭೀತಿಯಿಲ್ಲದೆ ಹಸುಗಳು, ಕರುಗಳು ಪತಪತವೆಂದು ಶೆಗಣಿ ಹಾಕಿ ಉಚ್ಚೆ ಹೊಯ್ಯುತ್ತಿದ್ದವು. ತೆಳುವಾದ ಅಂಬಲಿಯಂತಹ ಶೆಗಣೀ ಒಮ್ಮೊಮ್ಮೆ ತರಕಾರಿಗೂ ಸಿಡಿಯದೆ ಇರುತ್ತಿರಲಿಲ್ಲ. ಕಾಯಿಪಲ್ಲೆ ಮಾರುವ ಹುಸೇನಬಿ ಆಕಳ ಮೈಮುಟ್ಟಿ ನಮಸ್ಕರಿಸಿ ತನ್ನ ವ್ಯಾಪಾರ ಹೆಚ್ಚಾಗಿ ಆಗಲಿ ಎಂದು ಮನದಲ್ಲಿಯೇ ಬೇಡಿಕೊಳ್ಳುತ್ತಿದ್ದಳು.

ತರಕಾರಿ ಮಾರುವವರ, ಗೂಡಂಗಡಿಗಳವರ – ಅವಶ್ಯಕತೆ ತೀರಿಸಲು ಅಲ್ಲಿಯೇ ತಾಜಮಹಲ ಎಂಬ ಹೆಸರಿನ ಚಿಕ್ಕ ಚಹದಂಗಡಿ ನೆಲೆಸಿತ್ತು. ತೆಂಗಿನ ಗರಿ, ಪ್ಲಾಸ್ಟಿಕ್ ಹೊದಿಕೆಗಳಿಂದ ಅಂಗಡಿ ಶೋಭಿಸುತ್ತಿತ್ತು. ಗಿರಾಕಿಗಳು ಕುಳಿತುಕೊಳ್ಳಲು ಎರಡು ಡಬ್ಬಗಳ ಮೇಲೆ ಹಲಗೆ ಹಾಕಿ ವ್ಯವಸ್ಥೆ ಮಾಡಲಾಗಿತ್ತು. ಚಾಂದಬಿ ಆ ಅಂಗಡಿಯ ಯಜಮಾನತಿ. ಬಡೆಸಾಬ ಆಕೆಯ ಗಂಡ. ಆತ ಚಹದ ಪಾತ್ರೆ ಹಿಡಿದುಕೊಂಡು ಗ್ರಾಹಕರಿಗೆ ಚಹ ಕೊಡುತ್ತ ತಿರುಗಾಡುತ್ತಿದ್ದರೆ, ಚಾಂದಬಿ ಅಂಗಡಿಗೆ ಬಂದ ಗ್ರಾಹಕರಿಗೆ ಚಹ, ಚುನಮರಿ, ಬಡಂಗ, ಸಂಗೀತ, ಮಿಸೆಳ್ ಏನೇನೋ ಕೊಟ್ಟು ಉಪಚರಿಸುತ್ತಿದ್ದಳು.

ಚಹದ ಅಂಗಡಿಯ ಬದಿಗೆ ಒಂದು ಅತ್ತಿಮರ ಇತ್ತು. ಅತ್ತಿಮರದ ಸುತ್ತಮುತ್ತ ವರ್ತುಳಾಕಾರವಾಗಿ ಕಟ್ಟೆಯೊಂದನ್ನು ಭಕ್ತರು ನಿರ್ಮಿಸಿದ್ದರು. ಅತ್ತಿಮರಕ್ಕೆ ಅಪ್ಪಿಕೊಂಡು

ಮಾರುತಿ ದೇವರ ಮೂರ್ತಿ ಗಿಡದ ಕೆಳಗೆ ಅಲಂಕರಿಸಿರುವುದರಿಂದ ಭಕ್ತರ ಸಮೂಹವೇ ಅಲ್ಲಿಗೆ ಬಂದಿತು. ದಿನಾಲು ಭಕ್ತರ ಹಿಂಡು ಅಲ್ಲಿಗೆ ಬರುವುದರಿಂದ ರಾಧಾ ಮತ್ತು ಭೈರು ಬಂದವರಿಗೆ ತೀರ್ಥ ಪ್ರಸಾದ ನೀಡಿ ಅವರು ಕೊಟ್ಟ ಕಾಣಿಕೆ ಹಣ, ಅಕ್ಕಿ ಪಡೆದು ಸಂತೃಪ್ತಿಪಡತೊಡಗಿದರು. ತರಕಾರಿ ಮಾರುವ ಹೆಣ್ಣುಮಕ್ಕಳೂ ಬದನೆಕಾಯಿ, ಬೆಂಡೆಕಾಯಿ, ಹೀರೆಕಾಯಿ, ಮುಂತಾದವನ್ನು ಅಲ್ಲಿ ಒಂದೊಂದಾಗಿ ಇಟ್ಟು ಕೈ ಮುಗಿದು ತಮ್ಮ ವ್ಯಾಪಾರ ಚೆನ್ನಾಗಿ ಆಗಲಿ ಎಂದು ಹನುಮಂತನಲ್ಲಿ ಬೇಡಿಕೊಂಡು ಹೋಗುತ್ತಿದ್ದರು.

ಅರಳೀಮರವೂ ವಿಶಾಲವಾಗಿ ಬೆಳೆದಿತ್ತು. ಗಿಡಗಳ ಪಕ್ಕದಲ್ಲಿ ಒಡೆದ ಹಾಳಾದ ಶಿವ, ಪಾರ್ವತಿ, ಗಣಪತಿ, ಕೃಷ್ಣ ಲಕ್ಷ್ಮೀ, ಸರಸ್ವತಿ, ದುರ್ಗೆಯರ ಫೋಟೋಗಳೂ ಸುತ್ತುವರೆದು ಬಿದ್ದಿದ್ದವು.

ದಿನಾಲು ಮುತ್ತೈದೆಯರ ಹಿಂಡು ಬಂದು ಊದಿನಕಡ್ಡಿ ಬೆಳಗಿ, ಎಣ್ಣೆ ದೀಪ ಹಚ್ಚಿ ಸುತ್ತುಹಾಕಿ ಹೋಗುತ್ತಿದ್ದರು. ನೂಲು ಹುಣ್ಣಿಮೆ ದಿನ ಮಾತ್ರ ಮಹಿಳೆಯರು ಅರಳಿಮರಕ್ಕೆ ಉಸಿರಾಡಿಸಲು ಬಾರದಂತೆ ಒಬ್ಬರ ಮೇಲೆ ಒಬ್ಬರು ಮುಗಿಬಿದ್ದು ನೂಲನ್ನು ಸುತ್ತುತ್ತಿದ್ದರು. ಹೀಗಾಗಿ ಆ ಮರಗಳಿಗೆ ದೈವ ಭಾಗ್ಯ ಒದಗಿಬಂದಿತ್ತು.

ರಾಧಕ್ಕ ಬೆಳಕು ಹರಿಯುವುದರೊಳಗೆ ಅಲ್ಲಿಗೆ ಬಂದು ತುಪ್ಪದ ದೀಪ ಹಚ್ಚಿ ಅರಿಶಿನ ಕುಂಕುಮ ಬಟ್ಟು ಇಟ್ಟು ಗಿಡಗಳಿಗೂ, ಒಡೆದು ಚೂರಾದ ಫೋಟೋಗಳಿಗೂ ನಮಸ್ಕರಿಸಿ ಹೋಗುತ್ತಿದ್ದಳು. ಗಂಡ ಭೈರು ಎಮ್ಮೆಗಳ ಹಾಲು ಹಿಂಡಿ ಕ್ಯಾನುಗಳಲ್ಲಿ ಹಾಲು ಹಾಕಿ, ಅರ್ಧ ನೀರು ಹಾಕಿ ಮಾರಾಟಕ್ಕೆ ಹೋಗುತ್ತಿದ್ದ.

ರಾಧಕ್ಕನ ಬಗ್ಗೆ ತರಕಾರಿ ಮಾರುವ ಅಂಗಡಿಯ ಮಹಿಳೆಯೂ ಚಹದ ಅಂಗಡಿಗೆ ಬಂದ ಗ್ರಾಹಕರೂ ತರಕಾರಿ ಮಾರುವ ಹೆಂಗಳೆಯರೂ ಹಗುರಾಗಿಯೇ ಮಾತಾಡುತ್ತಿದ್ದರು. ರಾಧಾ ಶಿರಸಿಯಿಂದ ಗಂಡ, ಇಬ್ಬರು ಮಕ್ಕಳನ್ನು ಬಿಟ್ಟು ಭೈರೂನ ಸಂಗಡ ಓಡಿ ಬಂದಿದ್ದಾಳೆ; ಶಿರಸಿ ಜಾತ್ರೆಗೆ ಹೋದಾಗ ಆಕೆಯನ್ನು ಹಾರಿಸಿಕೊಂಡು ಭೈರು ಬಂದಿದ್ದಾನೆಂದು, ಆ ಘಟನೆಗೆ ಉಪ್ಪು ಕಾರ ಹಚ್ಚಿ ಎಳೆಎಳೆಯಾಗಿ ಬಿಡಿ ಬಿಡಿಸಿ, ಅದಕ್ಕೆ ಇನ್ನಷ್ಟು ಬಣ್ಣ ಹಚ್ಚಿ ಮಾತಾಡುವವರೇ ಹೆಚ್ಚು.

ರಾಧಕ್ಕ ಐವತ್ತರ ಗಡಿ ದಾಟಿದ್ದರೂ ಹಾದಿಹೋಕರು ಒಮ್ಮೆ ಅವಳತ್ತ ಹೊರಳಿ ನೋಡದೆ ಹೋಗುತ್ತಿರಲಿಲ್ಲ. ಈ ಕಾರಣಕ್ಕಾಗಿಯೇ ಭೈರು ಆಕೆಯೊಂದಿಗೆ ದಿನಾಲು ಜಗಳ ಮಾಡುತ್ತಿದ್ದ, ಒಮ್ಮೊಮ್ಮೆ ಕುಡಿದ ಮತ್ತಿನಲ್ಲಿ ಅವಳ ರವಿಕೆ, ಸೀರೆ ಹರಿಯುವಂತೆ ಹಿಡಿದೆಳೆದು ಕೂದಲು ಜಗ್ಗಿ ಬಡಿಯುತ್ತಿದ್ದ. ಗಂಡನ ಈ ಕಾಟ ನಿವಾರಣೆಗಾಗಿ ಹತ್ತು ದೇವರಿಗೆ ಕೈ ಮುಗಿದಿದ್ದಳು. ಮಾಟ ಮಂತ್ರ ಮಾಡಿಸಿದ್ದಳು, ಕರಿ ಬಟ್ಟೆಯ ಬೊಂಬೆ ತಂದು ಅರಳೀ ಮರಕ್ಕೆ ನೇತು ಹಾಕಿದ್ದಳು. ಅಮಾಸೆಗೊಮ್ಮೆ ಮೂರು ದಾರಿ ಕೂಡುವಲ್ಲಿ ಉಪ್ಪು ಮೆಣಸಿನ ಕಾಯಿ ಹಾಕಿ ಕರಿಗೊಂಬೆಯನ್ನಿಟ್ಟು ಮಾಟ ಮಾಡಿಸುತ್ತಿದ್ದಳು.

ಹೀಗೆ ಆಕೆ ಮಾಟ ಮಾಡಿಸಿದಾಗ ಆಕೆಯ ಗಂಡ ಕಾಕತಾಳೀಯವಾಗಿಯೊ ಏನೋ ತೆಪ್ಪಗಾಗಿದ್ದ. ಅವನನ್ನು ದೈವಭಕ್ತನನ್ನಾಗಿ ಪರಿವರ್ತನೆ ಮಾಡಲು ಶಕ್ತಿ ಮೀರಿ ಪ್ರಯತ್ನಿಸಿ ಯಶಸ್ವಿಯಾಗಿದ್ದಳು.

ಅದೊಂದು ಅಮಾಸೆಯ ದಿನ ಮುಂಜಾನೆ ರಾಜಸ್ತಾನದ ಬೊಂಬೆ ಮಾರುವವರು ತಮ್ಮ ಹರವಾದ ಬುಟ್ಟಿಗಳಲ್ಲಿ ಕೃಷ್ಣ, ನಟರಾಜ, ಮಾರುತಿ, ಶಿವ, ಪಾರ್ವತಿ, ದುರ್ಗೆ ಗೊಂಬೆಗಳನ್ನು ಹೊತ್ತು ಬಂದು ಚಹ ಸೇವಿಸಲು ಗೂಡಂಗಡಿ ಹೊಕ್ಕಿದ್ದರು.

ಅಲ್ಲಿಗೆ ಬಂದ ಗ್ರಾಹಕರು ಮೋಹಕವಾಗಿದ್ದ ಬಣ್ಣ ಬಣ್ಣದ ಗೊಂಬೆಗಳನ್ನು ಕಂಡು ಅವರ ಕಲಾಶೈಲಿಯನ್ನು ತಮ್ಮ ತಮ್ಮಲ್ಲಿಯೇ ಬಣ್ಣಿಸುತ್ತಿದ್ದರು.

ವಿವಿಧ ದೇವರ ಮೂರ್ತಿಗಳನ್ನು ಎತ್ತಿ ನೋಡಿ ಅವುಗಳ ಬೆಲೆ ಎಷ್ಟು ಎಂದು ವಿಚಾರಿಸುತ್ತಿದ್ದರು. ಅವರು ಬುಟ್ಟಿಯಲ್ಲಿದ್ದ ಮಾರುತಿ ಮೂರ್ತಿಯೊಂದರ ಬಾಲ ಮುರಿದಿದ್ದರಿಂದ, ಆ ಮೂರ್ತಿಯನ್ನು ಅತ್ತಿಮರದ ಕೆಳಗಡೆ ಇಟ್ಟು ರಾಜಾಸ್ತಾನದವರು ತಮ್ಮ ಇತರ ಮೂರ್ತಿಗಳ ಮಾರಾಟಕ್ಕಾಗಿ ಬಡಾವಣೆಯತ್ತ ಸಾಗಿದ್ದರು.

*　　*　　*

ಇತ್ತ ರಾಧಾ ಮತ್ತು ಭೈರು ದಿನಂಪ್ರತಿ ಬರುವಂತೆ ಅತ್ತಿಮರದ ಕಡೆಗೆ ಬಂದು ಪೂಜೆ ಪೂರೈಸಿ ದೀಪ ಬೆಳಗುವಾಗಲೇ ಮಾರುತಿಯ ಅಂದವಾದ ಮೂರ್ತಿ ಕಂಡು ಬೆಕ್ಕಸ ಬೆರಗಾಗಿಹೋದರು. ಮಾರುತಿ ಮೂರ್ತಿ ಇಲ್ಲಿ ಉದ್ಭವವಾಗಿದೆಯೆಂದು ಸುದ್ದಿಯನ್ನು ಹರಡಿದರು.

ಮಾರುತಿ ದೇವರ ಮೂರ್ತಿ ಗಿಡದ ಕೆಳಗೆ ಅಲಂಕರಿಸಿರುವುದರಿಂದ ಭಕ್ತರ ಸಮೂಹವೇ ಅಲ್ಲಿಗೆ ಬಂದಿತು. ದಿನಾಲು ಭಕ್ತರ ಹಿಂಡು ಅಲ್ಲಿಗೆ ಬರುವುದರಿಂದ ರಾಧಾ ಮತ್ತು ಭೈರು ಬಂದವರಿಗೆ ತೀರ್ಥ ಪ್ರಸಾದ ನೀಡಿ ಅವರು ಕೊಟ್ಟ ಕಾಣಿಕೆ ಹಣ, ಅಕ್ಕಿ ಪಡೆದು ಸಂತೃಪ್ತಿಪಡತೊಡಗಿದರು. ತರಕಾರಿ ಮಾರುವ ಹೆಣ್ಣುಮಕ್ಕಳೂ ಬದನೆಕಾಯಿ, ಬೆಂಡೆಕಾಯಿ, ಹೀರೆಕಾಯಿ, ಮುಂತಾದವನ್ನು ಅಲ್ಲಿ ಒಂದೊಂದಾಗಿ ಇಟ್ಟು ಕೈ ಮುಗಿದು ತಮ್ಮ ವ್ಯಾಪಾರ ಚೆನ್ನಾಗಿ ಆಗಲಿ ಎಂದು ಹನುಮಂತನಲ್ಲಿ ಬೇಡಿಕೊಂಡು ಹೋಗುತ್ತಿದ್ದರು. ಇಲ್ಲಿ ಮಾರುತಿ ದೇವರು ಉದ್ಭವವಾದ ಸುದ್ದಿ ಉಳ್ಳವರ ಕಿವಿಗೂ ಬಂದು ತಲುಪಿತು. ಉಳ್ಳವರು ಎಂದರೆ ಕೇಳುವದೇನು ? ವರ್ಷಾರು ತಿಂಗಳಲ್ಲಿ ರಸ್ತೆ ಬದಿಗೆ ಗಿಡಗಳ ಪಕ್ಕದಲ್ಲಿ ಮಾರುತಿ ಮಂದಿರ ತಲೆಯೆತ್ತಿ ನಿಂತಿತು.

ಮಾರುತಿಪುರಕ್ಕೆ ಮಾರುತಿ ದೇವಾಲಯ ವಿಶಾಲವಾಗಿ ನಿರ್ಮಾಣವಾಗಿದ್ದರಿಂದ ಅದರ ಉದ್ಘಾಟನೆಗೆ ಮಾರುತಿಪುರದವರ ಆಗ್ರಹದ ಮೇರೆಗೆ




ಊರಿನ ಶಾಸಕರು, ಸಂಸದರು ಬಂದು ಉದ್ಘಾಟನೆ ನೆರವೇರಿಸಿದರು. ದೇವಸ್ಥಾನಕ್ಕೆ ೧೦ ಲಕ್ಷ ರೂ. ನೀಡುವುದಾಗಿ ಶಾಸಕರು ಹೇಳಿದ್ದರಿಂದ ಮಾರುತಿಪುರದವರಿಗೆ ಸಗ್ಗವೇ ಇಳಿದು ಬಂದಂತಾಯಿತು.

ಮಾರುತಿ ದೇವಾಲಯದ ಮುಂದೆ ಹಾದುಬರುವ ಬಸ್ಸಿನ ಡ್ರೈವರ್ ದೇವರಿಗೆ ಹೂವಿನ ಮಾಲೆ ಅರ್ಪಿಸಿ ತನ್ನ ಚಾಲಕ ಕೆಲಸ ಯಾವ ಅಡೆತಡೆಯಿಲ್ಲದೆ ನಡೆಯಲಿ ಎಂದು ಬೇಡಿಕೊಂಡು ತಿಂಗಳುಗಟ್ಟಲೆ ರಿಪೇರಿ ಕಾಣದ ಬಸ್ಸನ್ನು ಪ್ರಯಾಣಿಕರಿಂದ ಕುಂಡಿ ಹಿಡಿದು ತಳ್ಳಿಸಿಕೊಂಡು ಅದು ಬುರ್ ಎಂದು ಕೂಡಲೇ ಜೀವ ಬಂದಂತಾಗಿ ಬಸ್ಸು ಹತ್ತಿ ಮುಂದೆ ಸಾಗುತ್ತಿದ್ದ.

ರಾಧಕ್ಕ, ಭೈರು ಇಬ್ಬರಿಗೂ ಕೈ ತುಂಬ ಕೆಲಸ ಸಿಕ್ಕಂತಾಗಿ ಸುಖಜೀವನಕ್ಕೆ ನಾಂದಿಯಾದಂತಾಯಿತು. ಮಾರುತಿಪುರದಲ್ಲಿ ರಾಧಾ ಭಜನೆ ಮಂಡಳಿಯೂ ಅಸ್ತಿತ್ವಕ್ಕೆ ಬಂದಿತು. ಪೇಟಿ, ತಬಲಗಳನ್ನು ಶಾಸಕರು ಕಾಣಿಕೆ ನೀಡಿದರು. ಪ್ರತಿ ಗುರುವಾರ, ತಪ್ಪಿದರೆ ಶನಿವಾರ ಭಜನಾ ಮಂಡಳಿ ತನ್ನ ಕಾರ್ಯಕ್ರಮವನ್ನು ಅಚ್ಚುಕಟ್ಟಾಗಿ ನಡೆಸುತ್ತಿತ್ತು.

ನಾಗರತ್ನ ಇನಾಮದಾರ ಸಂಗೀತ ವಿದ್ಯೆಯನ್ನು ತಕ್ಕಮಟ್ಟಿಗೆ ಬಲ್ಲವರಾಗಿದ್ದರು. ತನುವಿ ದೇಶಪಾಂಡೆ ತಬಲಾ ಬಾರಿಸುತ್ತಿದ್ದರು. ಹೀಗಾಗಿ ರಾಧಾ ಭಜನಾ ಮಂಡಳಿಯಲ್ಲಿ ಇಪ್ಪತ್ತಕ್ಕೂ ಮಿಕ್ಕಿ ಮಹಿಳಾ ಮಣಿಗಳು ಸದಸ್ಯರಾದರು. ದಾಸರ ಪದಗಳನ್ನು, ಭಕ್ತಿಗೀತೆಗಳನ್ನು ಮಧುರವಾಗಿ ಹಾಡಲು ನಾಗರತ್ನ ತರಬೇತಿ ನೀಡಿದರು. ವರ್ಷಾರು ತಿಂಗಳಲ್ಲಿಯೇ ಭಜನಾ ಮಂಡಳಿಯ ಹೆಸರು ನಗರದ ತುಂಬ ಪ್ರಸಿದ್ಧಿ ಪಡೆಯಿತು. ಭಜನಾ ಮಂಡಳಿಯಲ್ಲಿ ಎಲ್ಲ ವರ್ಗದ ಮಹಿಳೆಯರೂ ಪಾಲ್ಗೊಂಡಿದ್ದರು. ಅಲ್ಲಿಯೂ ಮೇಲು ಕೀಳು ಭಾವನೆ ಮುಸುಕಿನಲ್ಲಿ ಗುದ್ದಾಟ ನಡೆದೇ ಇತ್ತು. ಹೀಗಾಗಿ ಕೆಲವು ಮಹಿಳೆಯರು ಕಹಿ ಅನುಭವ ಸಹಿಸಬೇಕಾಯಿತು. ಪ್ರತಿ ತಿಂಗಳೂ ಒಬ್ಬೊಬ್ಬರ ಮನೆಯಲ್ಲಿ ಕಾರ್ಯಕ್ರಮಗಳು ನಡೆಯುತ್ತಿದ್ದವು. ಕಾರ್ಯಕ್ರಮ ನಡೆದಾಗ ತಮ್ಮ ತಮ್ಮ ಅಂತಸ್ತಿನ ಪ್ರಕಾರ ಉಡುಗೊರೆಯನ್ನು ನೀಡುತ್ತಿದ್ದರು. ಯಾರಾದರೂ ಮಹಿಳೆಯರು ತಿಂಗಳು ಕಾರ್ಯಕ್ರಮಕ್ಕೆ ಆಮಂತ್ರಣ ನೀಡದಿದ್ದರೆ, ''ಈಕೆ ತಿನ್ನಾಕಷ್ಟೆ ಬರುವವಳು'' ಎಂದು ಕೆಲವರು ಹಂಗಿಸುತ್ತಿದ್ದರು. ಅವರಿಂದ ತಾಳಗಳನ್ನು ಕಸಿದುಕೊಂಡು ಬೇರೆಯವರಿಗೆ ಕೊಟ್ಟು ಅವಮಾನ ಮಾಡತೊಡಗಿದರು. ಹೀಗಾಗಿ ರಾಧಾ ಮಹಿಳಾ ಮಂಡಳಿಯಲ್ಲಿಯೂ ಅತೃಪ್ತಿಯ ಹೊಗೆ ಆಡುತ್ತಿತ್ತು. ''ಆಕೆ ಹೀಗೆ'', ''ಈಕೆ ಹೀಗೆ'' ಎಂದು ಅವರವರ ಚರಿತ್ರೆಯ ಪಾಠವೂ ಅವರವರಲ್ಲಿ ನಡೆಯುತ್ತಿತ್ತು. ಇನ್ನೊಬ್ಬರ ಕಡೆಯಿಂದ ಏಕೆ ಅನ್ನಿಸಿಕೊಳ್ಳುವುದು ಎಂದು ತಮ್ಮ ತಮ್ಮ ಸರತಿ ಬಂದಾಗ ಅರಿಶಿನ ಕುಂಕುಮಕ್ಕೆ ಆಮಂತ್ರಣ ನೀಡಲಾಗುತ್ತಿತ್ತು.

ಈ ಸಲ ರಾಧಾ ಎಲ್ಲರಿಗೂ ಅರಿಶಿನ ಕುಂಕುಮಕ್ಕೆ ಆಮಂತ್ರಣ ನೀಡಿದಳು. ರಾಧಾಳ ಮನೆ ಚಿಕ್ಕದಾಗಿತ್ತು. ಮನೆಯ ಅಂಗಳದಲ್ಲಿ ತುಳಸಿ ಕಟ್ಟೆ, ಸುತ್ತಲೂ ಗಿಡಮರಗಳು ಬೆಳೆದಿದ್ದವು. ಭೈರೂನ ಮನೆ ಹತ್ತಿರದಲ್ಲಿ

# ವಿಶ್ವಕಥಾಕೋಶ ೨೫ ಸಂಪುಟಗಳ ಲೋಕಾರ್ಪಣೆ










## ಸುದ್ದಿ ಚಿತ್ರ

'ವಿಶ್ವಕಥಾಕೋಶ' ಮಾಲೆಯ ೨೫ ಸಂಪುಟಗಳ ಎರಡನೇ ಆವೃತ್ತಿಯ ಲೋಕಾರ್ಪಣೆ ಸಮಾರಂಭ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ತಾರೀಖು ೩-೪-೨೦೧೧ರಂದು ಯಶಸ್ವಿಯಾಗಿ ನೆರವೇರಿತು. ೯೬ ದೇಶಪ್ರದೇಶಗಳ, ೩೨೦ ಲೇಖಕರ ೩೨೪ ಶ್ರೇಷ್ಠ ಕಥೆಗಳ ಸಂಪುಟಗಳ ಮೊದಲನೇ ಆವೃತ್ತಿ ನಿರಂಜನರ ಸಂಪಾದಕತ್ವದಲ್ಲಿ ೧೯೮೦ರ ದಶಕದಲ್ಲಿ ಲೋಕಾರ್ಪಣೆಗೊಂಡಿದ್ದವು. ಚಂಡೆ ವಾದ್ಯ ವಾದನದೊಂದಿಗೆ ಅತಿಥಿಗಳನ್ನು ಬರಮಾಡಿಕೊಳ್ಳಲಾಯಿತು.

೩೦ ವರ್ಷಗಳ ಹಿಂದೆ ಸಂಪುಟಗಳ ಮೊದಲ ಆವೃತ್ತಿ ಆರು ಕಂತುಗಳಲ್ಲಿ ಪ್ರಕಟವಾದ ಸಂದರ್ಭದ, ಟಿ. ಎಲ್. ರಾಮಸ್ವಾಮಿ ಅವರು ತೆಗೆದಿದ್ದ ಅಪೂರ್ವ ಛಾಯಾಚಿತ್ರಗಳ ಪ್ರದರ್ಶನ ಸಾಹಿತ್ಯಾಸಕ್ತರನ್ನು ಆಕರ್ಷಿಸಿತು. ಶ್ರೀಮತಿ ಸುಮತಿ ಅವರು ಯುದ್ಧ ವಿರೋಧಿ ಗೀತೆಗಳನ್ನು ಹಾಡಿದರು. ವಿದ್ಯಾ ವೆಂಕಟರಾಮು ಸಂಯೋಜಿಸಿದ್ದ ಆಫ್ರಿಕ, ವಿಯೆಟ್ನಾಂ, ಭಾರತದ ನೃತ್ಯ ರೂಪಕಗಳನ್ನು ವಿಶ್ರುತ ಕಲಾ ತಂಡದ ಸದಸ್ಯರುಗಳು ಸಾದರಪಡಿಸಿದರು. ಪ್ರೊ॥ ಸಿ. ಎನ್. ರಾಮಚಂದ್ರನ್ ಸಮಾರಂಭದ ಅಧ್ಯಕ್ಷತೆ ವಹಿಸಿ, ಕೃತಿ ಅನಾವರಣ ಮಾಡಿದರು. ಎಸ್. ದಿವಾಕರ್ ಕೃತಿ ಪರಿಚಯ ಮಾಡಿಕೊಟ್ಟರು. ಡಾ॥ ಎಚ್. ನಾಗವೇಣಿ ಮುಖ್ಯ ಅತಿಥಿಯಾಗಿ, ಶ್ರೀಮತಿ ಸುಧಾ ಮೂರ್ತಿ ವಿಶೇಷ ಅತಿಥಿಯಾಗಿ ಭಾಗವಹಿಸಿದ್ದರು. ಮೂವತ್ತು ವರ್ಷಗಳ ಹಿಂದೆ ಕಥೆಗಳನ್ನು ಕನ್ನಡದಲ್ಲಿ ಅನುವಾದ ಮಾಡಿದ್ದ ಕೆಲವು ಲೇಖಕರು ಮತ್ತು ಈಗ ನಮ್ಮೊಂದಿಗಿಲ್ಲದ ಲೇಖಕರ ವಾರಸುದಾರರು, ಮುಖಚಿತ್ರಗಳನ್ನು ರಚಿಸಿದ ಕೆಲವು ಕಲಾವಿದರು ಗೌರವಪ್ರತಿಗಳನ್ನು ಸ್ವೀಕರಿಸಿದರು.







ಯಾವ ಮನೆಗಳೂ ಇರಲಿಲ್ಲವಾದ್ದರಿಂದ ತನ್ನ ಕಾರ್ಯವನ್ನು ಯಾರ ನೆರವಿಲ್ಲದೆ ಮಾಡಿಕೊಳ್ಳುತ್ತಿದ್ದಳು.

ಅಂದು ಶುಕ್ರವಾರ, ಬೆಳಿಗ್ಗೆ ಬೇಗನೆ ಎದ್ದು ಹತ್ತಾರು ದೇವರಿಗೆ ಕೈ ಮುಗಿದಳು. ಮನೆಯನ್ನೆಲ್ಲ ಶುಚಿಗೊಳಿಸಿ ಅಂಗಳದಲ್ಲಿ ರಂಗೋಲಿ ಹಾಕಿದಳು. ಬಂದವರಿಗೆಲ್ಲ ಉಡುಗೊರೆಯಾಗಿ ನೀಡಲು ಸ್ಟೀಲ್ ತಾಟು, ರವಿಕೆ, ಕಣ ತರಿಸಿ ಇಟ್ಟಿದ್ದಳು. ಇದೆಲ್ಲದರ ಖರ್ಚಿಗಾಗಿ ಭೈರು ಮತ್ತು ರಾಧಾ ನಡುವೆ ಹಿಂದಿನ ರಾತ್ರಿಯೇ ಜಗಳವಾಗಿತ್ತು. ''ನೀನು ಹೀಗೆ ಪದೇ ಪದೇ ಜಗಳವಾಡಿದರೆ ನನ್ನ ಮೊದಲಿನ ಗಂಡನ ಕಡೆಗೆ ಹೋಗುತ್ತೇನೆ ನೋಡು'' ಎಂದು ರಾಧಾ ಬೆದರಿಕೆ ಹಾಕಿದ್ದಳು. ರಾಧಾನ ಮೊದಲಿನ ಗಂಡನೂ ಭೈರು ಇಲ್ಲದಾಗ ಹಲವಾರು ಸಲ ಬಂದು ಹೋಗಿದ್ದ. ರಾಧಾ ತನ್ನ ಹಿಂದಿನ ಮಕ್ಕಳಿಗಾಗಿ ಮನೆಯಲ್ಲಿದ್ದ ಕಾಸು, ವಸ್ತು, ಒಡವೆ ಬಟ್ಟೆ ಬರೆ ಕೊಟ್ಟು ಕಳಿಸುತ್ತಿದ್ದಳು. ಮೊದಲಿನ ಗಂಡ ತುಂಬ ಸಂಭಾವಿತನಾಗಿದ್ದರಿಂದ ರಾಧಾನ ಬಗ್ಗೆ ಕೋಪವನ್ನೇ ತಾಳುತ್ತಿರಲಿಲ್ಲ. ಅರಿಶಿನ ಕುಂಕುಮ ನಡೆಯುವ ದಿನ ಬಂದು ಹೋಗಲು ಅವನಿಗೆ ಗುಟ್ಟಾಗಿ ಫೋನು ಮಾಡಿದ್ದಳು.

ನಾಲ್ಕು ಗಂಟೆಯ ಸುಮಾರಿಗೆ ಮಹಿಳಾ ಮಂಡಳದ ಸದಸ್ಯರು ಬರುವ ಪೂರ್ವದಲ್ಲಿಯೇ ರಾಧಾ ತುಳಸಿ ಕಟ್ಟೆಯ ಪೂಜೆ ಸಲ್ಲಿಸಲು ಕಾಯಿ, ಕರ್ಪೂರ, ಎಣ್ಣೆದೀಪ ಎಲ್ಲ ಒಬ್ಬಾಕೆಯೇ ಸಿದ್ಧಮಾಡಿಕೊಂಡು ಪೂಜೆ ಸಲ್ಲಿಸುತ್ತಿದ್ದಳು. ತುಳಸಿ ಕಟ್ಟೆಯ ಸುತ್ತಮುತ್ತ ದೀಪದ ಸಾಲು ಬೆಳಗುತ್ತಿದ್ದವು. ತೆಂಗಿನಕಾಯಿಯ ಮೇಲೆ ಕರ್ಪೂರ ಇಟ್ಟು ದೇವರಿಗೆ ಬೆಳಗುತ್ತಿದ್ದಳು. ನಾಯಿ ಬೊಗಳುವ, ಹುಡುಗರ ಚೀರಾಟ ದೂರದಲ್ಲಿ ನಡೆಯುತ್ತಿತ್ತು, ನಾಯಿಗಳು ಹಂದಿಯ ಹಿಂಡನ್ನು ಬೆನ್ನು ಹತ್ತಿ ಓಡಿಸುತ್ತಿದ್ದವು. ಹಂದಿಗಳು ಸಿಕ್ಕಾಪಟ್ಟೆ ಚೆಲ್ಲುವರಿದು ಪ್ರಾಣದ ಭಯದಿಂದ ಓಡುತ್ತಿದ್ದವು. ಓಡಿ ಬರುವ ದೊಡ್ಡ ಹಂದಿಯೊಂದು ರಾಧಾಳಿಗೆ ಹಾಯ್ದು ಕೆಡವಿತು. ರಾಧಾ ಉಟ್ಟಿದ್ದ ನೈಲಾನ್ ಸೀರೆ ಕ್ಷಣಾರ್ಧದಲ್ಲಿ ಬೆಂಕಿ ಹತ್ತಿಕೊಂಡು ಅವಳನ್ನು ಆವರಿಸಿತು. ತುಳಸಿ ಕಟ್ಟೆಗೆ ತಲೆ ಬಡಿದಿದ್ದರಿಂದ ತಲೆಗೂ ಭಾರಿ ಪೆಟ್ಟಾಗಿತ್ತು. ಕ್ಷಣಾರ್ಧದಲ್ಲಿಯೇ ಅವಳ ಪ್ರಾಣ ಪಕ್ಷಿ ಹಾರಿಹೋಯಿತು. ಹಾದಿಯಲ್ಲಿ ಹೋಗುವವರು ಇದೇನು ಹೊಗೆಯಾಡುತ್ತದೆ ಎಂದು ಗಿಡಗಂಟಿಗಳ ಪೊದೆಯಲ್ಲಿ ಬಂದು ನೋಡಿದಾಗ ರಾಧಾ ಕರಕಲಾಗಿ ಬಿದ್ದಿದ್ದಳು.

ಕೂಡಲೆ ಬಂದವರು ಪೊಲೀಸ್ ಠಾಣೆಗೆ ಫೋನು ಮಾಡಿ ಪೊಲೀಸರನ್ನು ಕರೆಸಿದರು. ಅಷ್ಟೊತ್ತಿನಲ್ಲಿಯೇ ಮಹಿಳಾ ಮಂಡಳದ ಸದಸ್ಯೆಯರು ಅರಿಶಿನ ಕುಂಕುಮಕ್ಕಾಗಿ ರಾಧಾಳ ಮನೆಯತ್ತ ಬರುತ್ತಿದ್ದರು. ಕರಕಲಾದ ರಾಧಾನ ಈ ಸ್ಥಿತಿ ನೋಡಿ ವಾಪಸ್ಸಾದರು.



ಪೊಲೀಸರು ಅಲ್ಲಿ ಯಾರನ್ನೂ ನಿಲ್ಲಿಸಗೊಡಲಿಲ್ಲ. ತಮ್ಮ ಕರ್ತವ್ಯವನ್ನು ಪೂರೈಸಿ ಶವ ಪರೀಕ್ಷೆಗಾಗಿ ಆಸ್ಪತ್ರೆಗೆ ಶವವನ್ನು ಸಾಗಿಸಿದರು. ಭೈರು ಎಲ್ಲಿ ಹೋಗಿದ್ದನೋ ಆತನನ್ನು ಫೋನು ಮಾಡಿ ಕರೆಸಿದಾಗ ಶವ ಆಸ್ಪತ್ರೆಗೆ ಸಾಗಿತ್ತು. ಪೊಲೀಸರು ಭೈರುವನ್ನು ವಿಚಾರಣೆಗೆ ಒಳಪಡಿಸಿದರು. ಅಷ್ಟರಲ್ಲಿಯೇ ಅವಳ ಮೊದಲಿನ ಗಂಡ ಬಂದು ಕಣ್ಣೀರು ಹಾಕಿದ. ರಾಧಾ ಸಾಯಲು ಭೈರೂನೇ ಕಾರಣ ಎಂದು ರಾಧಾನ ಹಳೆಯ ಗಂಡ ಪೊಲೀಸರಿಗೆ ದೂರು ನೀಡಿದ. ಪೊಲೀಸರು ಭೈರೂನನ್ನು ಬಂಧಿಸಿ ಠಾಣೆಗೆ ಕರೆದೊಯ್ದರು. ಇತ್ತ ಮಹಿಳಾ ಮಂಡಳದ ಸದಸ್ಯರು ರಾಧಾಳ ನೀತಿ ಅನೀತಿ ಮೆಲಕು ಹಾಕುತ್ತ ಮಾರುತಿ ಮಂದಿರದತ್ತ ನಡೆದರು.

**ಪುಂಡಲೀಕ ಪಾಟೀಲ**
'ಶಾಂತಲಾ', ಫ್ಲಾಟ್ ನಂ. ೨೧೮, ವಿದ್ಯಾನಗರ ಪ್ರಥಮ ಬಸ್ ನಿಲ್ದಾಣ,
ಸಹ್ಯಾದ್ರಿ ನಗರ ರಸ್ತೆ, ಬಾಕ್ಸಾಯಿಡ್ ರೋಡ್, ಬೆಳಗಾವಿ - ೫೯೦ ೦೧೮

# ಬದಲಾವಣೆ



ಬರೆದ ಮೇಲೆ ಕವಿತೆ
ಏನಾದರೂ ಬದಲಾಯಿತೆ ?

ಮೊಳಕೆಯೊಡೆಯಿತೆ
ಪ್ರೀತಿ ಗರಿಕೆ
ಮಾಯವಾಯಿತೆ
ಅಹಮ್ಮಿನ ಒಳ ತುರಿಕೆ ?
ಅಲೆಮಾರಿ ಹಕ್ಕಿಗೆ ಸ್ಥಾವರ ಸಿಕ್ಕಿತೆ ?
ಅಂತರಾಳದ ನೋವಿಗೆ ಸಾಂತ್ವನ ದಕ್ಕಿತೆ ?

ಬರೆದ ಮೇಲೆ ಈ ಕವಿತೆ ತಾನು
ಹೊಸ ಹೊಂಗನಸ ಹಡೆಯಿತೆ ?
ಮನಸುಗಳ ನಡುವಣ ಗೋಡೆಗಳ ಒಡೆಯಿತೆ ?
ಗೆಳತಿ, ಏನಾಯಿತೆ ?

**ಕು. ಸ. ಮಧುಸೂದನ**
ವಿಜಯಾ ಬ್ಯಾಂಕ್ ಮಹಡಿ
ರಂಗೇನಹಳ್ಳಿ - ೫೭೭ ೧೪೪, ಚಿಕ್ಕಮಗಳೂರು ಜಿಲ್ಲೆ



# ಖಜುರಾಹು - ಸೃಷ್ಟಿತತ್ವದ ದೇವ ಮಂದಿರಗಳ ನಡೆಮುಡಿಯಲ್ಲಿ...

ನಾವು ಕೃಷ್ಣಾ ಇನ್‌ಸ್ಟಿಟ್ಯೂಟ್ ಆಫ್ ಇಂಡಾಲಜಿಯ ವಿದ್ಯಾರ್ಥಿಗಳಾಗಿ ೨೦೦೪ರಲ್ಲಿ ಪ್ರವಾಸ ಹೊರಟಾಗ ದಿಲ್ಲಿಯಲ್ಲಿ ಮುಸುಕಿದ್ದ ಮಂಜು ನಮ್ಮನ್ನು ಖಜುರಾಹು ತಲುಪದಂತೆ ತಡೆದಿತ್ತು. ಹೀಗಾಗಿ ಈ ಪ್ರವಾಸದಲ್ಲಿ ನನ್ನ ಆದ್ಯತೆ ಖಜುರಾಹುಗೆ ಇತ್ತು. ನಮ್ಮ ಮಗಳು ಸರಿತಾ ದಿಲ್ಲಿಯಲ್ಲಿ ನಮ್ಮನ್ನು ಸೇರಿಕೊಂಡು ಖಜುರಾಹು ಪ್ರವಾಸಕ್ಕೆ ಜತೆ ನೀಡಿದಳು.

**ಖಜುರಾಹು :** ಖಜುರಾಹು ಅಥವಾ ಖಾಜ್ರವಾಹಿಲಾ, ಅಂದರೆ ಖರ್ಜೂರ. ಇಲ್ಲಿ ಖರ್ಜೂರದ ತೋಟ ಇತ್ತು, ಹೀಗಾಗಿ ಖಜುರಾಹು ಆಗಿದೆ ಎನ್ನುತ್ತಾರೆ ಕೆಲವರು. ಪಶ್ಚಿಮ ದೇವಾಲಯಗಳ ಹಿಂಭಾಗದಲ್ಲಿ ಈಗಲೂ ಬೆಳೆದ ಮರಗಳ ಕಾಡು ಇರುವುದು ನಿಜ. ಈ ಕಾಡುದಾರಿಯಲ್ಲಿ ೧೮೩೮ರಲ್ಲಿ ಬಂದ ಕ್ಯಾ|| ಟಿ. ಎಸ್. ಬರ್ಟ್ ಎಂಬ ಬ್ರಿಟಿಷ್ ಅಧಿಕಾರಿ ಕಾಡಿನೊಳಗೆ ಪಾಳುಬಿದ್ದ ಸುಂದರ ದೇವಾಲಯಗಳನ್ನು ಕಂಡು ಸಮ್ಮೋಹನಕ್ಕೊಳಗಾಗಿ ಈ ದೇವಾಲಯದ ಕಟ್ಟಡಗಳಿಗೆ ಜೀವ ನೀಡಲು ಕಾರಣನಾದ. ರಾಜ ವಂಶಗಳ ಏಳುಬೀಳುಗಳೊಂದಿಗೆ ದೇವರು ಧರ್ಮ - ಇವುಗಳ ಏಳು ಬೀಳುಗಳೂ ಹೆಣೆದುಕೊಂಡಿರುತ್ತವೆ.

ಮಧ್ಯಪ್ರದೇಶದ ಚಾತ್‌ಪುರ ಜಿಲ್ಲೆಯಲ್ಲಿ ಇರುವ ಒಂದು ಪುಟ್ಟ ಹಳ್ಳಿ ಖಜುರಾಹು. ಸುಮಾರು ೨೧ ಚದರ ಕಿಲೋಮೀಟರ್ ವ್ಯಾಪ್ತಿಯ ಹಳ್ಳಿ ಇದು. ಈ ಹಳ್ಳಿ ಮಿಥುನ ಶಿಲ್ಪಗಳ ಗೋಡೆಗಳನ್ನು ಹೊಂದಿರುವ ನಾಗರ ಶೈಲಿಯ ಸುಂದರ ದೇವಸ್ಥಾನಗಳಿಗೆ ವಿಶ್ವ ಪ್ರಸಿದ್ಧ. ಇಷ್ಟೇ ಸುಂದರ ಬಸದಿಗಳೂ ಪ್ರವಾಸಿಗರ ಆಕರ್ಷಣೆಯ ಕೇಂದ್ರ. ಖಜುರಾಹು ಯುನೆಸ್ಕೋದ ವಿಶ್ವ ಪರಂಪರೆಯ ಪಟ್ಟಿಗೆ ಸೇರ್ಪಡೆಯಾಗಿದೆ.

ಇದೊಂದು ಸಜ್ಜನರಿಂದ ತುಂಬಿದ ಸಾಮಾನ್ಯ ಬಡ ಹಳ್ಳಿ ಈ ಹಳ್ಳಿಯಲ್ಲಿ ಕೃಷಿಯೇ ಪ್ರಧಾನ. ಎರಡನೆಯದು ಪ್ರವಾಸೋದ್ಯಮ. ಪ್ರವಾಸೋದ್ಯಮದಿಂದಾಗಿ ಕೆಲವೊಂದು ಹೋಟೇಲುಗಳು, ವಸತಿಗೃಹಗಳು ಮತ್ತು ಪ್ರವಾಸೋದ್ಯಮಕ್ಕೆ ಪೂರಕವಾದ ವಾಣಿಜ್ಯ ಮಳಿಗೆಗಳು ಈ ಹಳ್ಳಿಯಲ್ಲಿ ತೆರೆದಿವೆ. ಈ ಮೂಲಕ ಪ್ರವಾಸೋದ್ಯಮ ಕೆಲವರಿಗೆ ಉದ್ಯೋಗ ನೀಡಿದೆ.

ಈ ಊರಲ್ಲಿ ಗೋಧಿ ರಾಗಿ ಹೆಚ್ಚಾಗಿ ಬೆಳೆಯುತ್ತಾರೆ. ೫ ವರುಷಗಳಿಂದ ಮಳೆ ಇಲ್ಲದ ಭೂಮಿಗೆ ಕಳೆದೆರಡು ವರ್ಷಗಳಿಂದ ಸ್ವಲ್ಪ ಮಳೆ ಸುರಿದಿದೆ. ಆದರೆ ನಾವು ಹೋಗುವುದಕ್ಕೆ ೩ ತಿಂಗಳ ಹಿಂದೆ ಬೆಳೆದು ನಿಂತ ಬೆಳೆಯ ಮೇಲೆ ಆಲಿಕಲ್ಲಿನ ಮಳೆ ಸುರಿದು ಕಟಾವಿಗೆ ಬಂದ ಬೆಳೆ ಧ್ವಂಸವಾಗಿದೆ. ಎಲ್ಲಾ ಹೊಲಗಳಿಗೂ ಹಾನಿಯಾಗಿಲ್ಲ.

ಡಾ|| ಇಂದಿರಾ ಹೆಗ್ಗಡೆ

ಆಲಿಕಲ್ಲಿನಿಂದ ಹಿಮಪಾತ ಆದ ಕಡೆ ಮಾತ್ರ ಹಾನಿ ಆಗಿದೆ.

ಖಜರಾಹುನಲ್ಲಿ ಕುಂಬಾರನಿಂದ ತಯಾರಿಸಲ್ಪಟ್ಟ ಬೆರಣಿಯಾಕಾರದ ಹೆಂಚುಗಳ ಪುಟ್ಟ ಮನೆಗಳೇ ಹೆಚ್ಚು. ಕೆಲವೊಂದು ಪುಟ್ಟ ಮಹಡಿಗಳು ಕೊಳವೆಯಾಕಾರದ ಹೆಂಚಿನವು. ಇವುಗಳನ್ನು ತಯಾರಿಸುವವರು ಸ್ಥಳೀಯ ಕುಂಬಾರರು. (ಇದನ್ನು ತುಳು ಭಾಷೆಯಲ್ಲಿ 'ದಂಬೆ ಓಡು' ಎನ್ನುತ್ತಾರೆ). ಖಜುರಾಹು ಹಳ್ಳಿಗಳು ಸ್ವಚ್ಛವಾಗಿವೆ. ದಿನಾ ಮನೆ ಬಾಗಿಲುಗಳ ಮುಂದೆ ಸೆಗಣಿ ಸಾರಿಸುತ್ತಾರೆ. ಪಶುಪಾಲನೆಯೂ ಇಲ್ಲಿ ಮುಖ್ಯ ವೃತ್ತಿ.

**ಬಯಲು ಪಾಯಿಖಾನೆ :** ನಾವು ಪ್ರವಾಸ ಹೋಗುವಾಗ ಬರೇ ಕಟ್ಟಡಗಳನ್ನು, ಪ್ರಾಕೃತಿಕ ಸೊಬಗನ್ನು ನೋಡಿ ಬಂದರೆ ಸಾಕೆ ? ನಮ್ಮ ಕಣ್ಣು ತೆರೆದಿಟ್ಟರೆ ಏನೆಲ್ಲ ಕಾಣಬಹುದು ? ನಾನೇನು ಕಂಡೆ, ಅದನ್ನು ಕೇಳಿ.

ಹಳ್ಳಿಯ ಮಹಿಳೆಯರು ಮುಂಜಾವಿನಲ್ಲಿ ಮರಗಳಿರುವ ಕಾಡಿನಲ್ಲಿ (ತೋಟ) ಬಹಿರ್ದೆಸೆಗೆ ಕುಳಿತುಕೊಳ್ಳುತ್ತಾರೆ. ಇದು ಕುರುಚಲು ಗಿಡಗಳ ಕಾಡು ಅಲ್ಲ. ನೆಲದ ಮೇಲೆ ಕುಳಿತ ಮಹಿಳೆಯರಿಗೆ ಎತ್ತರೆತ್ತರ ಬೆಳೆದು ನಿಂತ ಮರಗಳು, ಮರೆಯನ್ನು ಒದಗಿಸುವುದಿಲ್ಲ. ಸಾಲು ಸಾಲಾಗಿ ಕುಳಿತುಕೊಳ್ಳುತ್ತಾರೆ. ಬಹಿರ್ದೆಸೆಗೆ ಹೋಗುವುದು ಅನಿವಾರ್ಯ ಕರ್ಮ. ಅದು ಪ್ರಕೃತಿ ನಿಯಮ. ಹೀಗಾಗಿ ಬೆಕ್ಕು ಹಾಲು (ಕದ್ದು)





ಕುಡಿಯುವಾಗ ಕಣ್ಮುಚ್ಚಿ ತನ್ನನ್ನು ಯಾರೂ ನೋಡುವುದಿಲ್ಲ ಎಂದುಕೊಳ್ಳುವಂತೆ ಮಹಿಳೆಯರು ತಲೆಯನ್ನು, ಮುಖವನ್ನು ಸೆರಗಿನಿಂದ ಮರೆಮಾಡಿ, (ಪರದಾ ಹಾಕಿ) ಕಣ್ಮುಚ್ಚಿ ಕುಳಿತುಕೊಂಡರೆ ಸಾಕೆ ? ಮಹಿಳೆಯರು ತಲೆಯನ್ನು, ಮುಖವನ್ನು ಸೆರಗಿನಿಂದ ಮರೆಮಾಡದೆ ಇದ್ದಲ್ಲಿ ಆ ವಂಶದ ಮಾನ ಹೋಯಿತು ಎನ್ನುವ ಸಂಸ್ಕೃತಿ ಇಲ್ಲಿಯದು ! ಇಲ್ಲಿ ನಮಗೊಂದು ಕುಚೋದ್ಯದ ಮಾತು ಹೇಳಿದರು. ಪರದಾ ಸಂಪ್ರದಾಯದ ಮಹಿಳೆ, ಮನೆಯಲ್ಲಿ ಒಬ್ಬಳೇ ಕುಳಿತು ಅಕ್ಕಿ ಕೇರುತ್ತಿದ್ದಳಂತೆ. ತೆರೆದ ಬಾಗಿಲಿನಿಂದ ಒಮ್ಮೆಲೇ ಅಳಿಯ ಒಳ ಬರುತ್ತಾನೆ. ತಲೆಯ ಮೇಲೆ "ಪರದಾ ಇಲ್ಲದ್ದಕ್ಕೆ ಗಾಬರಿಗೊಂಡು ಆಕೆ ನೆಲದ ಮೇಲಿದ್ದ ನೆರಿಗೆಯನ್ನು ಎತ್ತಿ ತಲೆಯ ಮೇಲೆ ಹಾಕಿ ತಲೆಯನ್ನು ಮರೆಮಾಡುತ್ತಾಳೆ." ಇದರಿಂದ ಅವರ ಗಮನ ಪರದಾದ ಕಡೆಗೆ ಮಾತ್ರ ಇರುತ್ತದೆ ಎಂದು ವೇದ್ಯವಾಗುತ್ತದೆ. ಇಲ್ಲಿಯೂ ಹಾಗೆಯೇ ಆಗಿದೆ.

ಭಾರತದ ಅದೆಷ್ಟೋ ಹಳ್ಳಿಗಳಲ್ಲಿ ಪಾಯಿಖಾನೆಗಳು ಇಲ್ಲ ನಿಜ. ನನ್ನ ಹಳ್ಳಿಯಲ್ಲೂ ಹೆಚ್ಚಿನವರು ಬಯಲು ಪಾಯಿಖಾನೆಯನ್ನು ಅವಲಂಬಿಸುತ್ತಿದ್ದಾರೆ. ಆದರೆ ಇದು ಪ್ರವಾಸಿಗರು ಓಡಾಡುವ ಐತಿಹಾಸಿಕ ಸ್ಥಳ. ಇಲ್ಲಿ ಕುಳಿತವರನ್ನು ಮರೆಯಾಗಿಸಬಲ್ಲ ಕುರುಚಲು ಗಿಡಗಳೂ ಇಲ್ಲ ಎಂದಾಗ ಇಲ್ಲಿ ಬಯಲು ಪಾಯಿಖಾನೆ ಎಷ್ಟು ಸರಿ ?. ವಿಶ್ವ ಪ್ರವಾಸಿಗರು ಗುಂಪು ಗುಂಪಾಗಿ ಇಲ್ಲಿಗೆ ಬರುತ್ತಾರೆ. ಪುಟ್ಟ ಹಳ್ಳಿಯ ಮೂಲೆ ಮೂಲೆಗಳಲ್ಲಿ ಕಾಲ್ನಡಿಗೆಯಲ್ಲಿ ಸುತ್ತುತ್ತಾರೆ. ಭಾರತ ದರ್ಶನ ಮಾಡುತ್ತಾ ಮಿಥುನ ಶಿಲ್ಪಗಳ ನಾಡಿಗೆ ಬಂದ ಪ್ರವಾಸಿಗರಿಗೆ ನಾವು ಈ ದೃಶ್ಯವನ್ನೂ ತೋರಿಸಬೇಕೇನೋ? ಇಲ್ಲಿಯ ಪ್ರವಾಸಿಗರಲ್ಲಿ ಸುಮಾರು ಪ್ರತಿಶತ ೯೦ರಷ್ಟು ವಿದೇಶಿಯರು. "ಮೇರಾ ಭಾರತ್ ಮಹಾನ್ !" ಎನ್ನುವುದಕ್ಕೆ ಖಜುರಾಹು ದೇವಸ್ಥಾನಗಳ ಸಮುಚ್ಚಯ ಸಾರ್ಥಕತೆಯನ್ನು ಒದಗಿಸಿದೆ, ನಿಜ. ಬಯಲು ಪಾಯಿಖಾನೆಗಳು ಮಹಾನ್ ಭಾರತದ ಇನ್ನೊಂದು ಮಗ್ಗುಲು ಎನ್ನೋಣವೆ ? ಇಲ್ಲಿಯ ಬಡವರು ಪಾಯಿಖಾನೆ ಕಟ್ಟಿಸಿಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಮಧ್ಯಪ್ರದೇಶದ ಸರಕಾರ ಬಹಿರ್ದೆಸೆಗೆ ಕುಳಿತ ಇಲ್ಲಿಯ ಮಹಿಳೆಯರಂತೆ ಕಣ್ಮುಚ್ಚಿದೆ. ಆದರೆ ಪ್ರವಾಸಿಗರು ಕಣ್ಣು ಬಿಟ್ಟೇ ನಡೆಯುತ್ತಾರಲ್ಲ. ಬೆಳಿಗ್ಗೆ ಹಳ್ಳಿ ಸುತ್ತಲು ಹೋದ ನನಗೆ ಮತ್ತು ಹೆಗ್ಗಡೆಯವರಿಗೆ ತುಂಬ ನೋವಾಯಿತು. ನಾವು ಆ ಊರು ಬಿಟ್ಟು ಬಂದಮೇಲೆ ನಾವಾರೋ ಅವರಾರೋ. ಆದರೆ ಆ ಊರಿನವರು ಅದೇ ದಾರಿಯಲ್ಲಿ ಓಡಾಡುತ್ತಿರುತ್ತಾರೆ. ಇಲ್ಲಿ ಜೈನ ಸಮುದಾಯದ ಮಂದಿರಗಳಿವೆ. ಜೈನ ಸಮುದಾಯದವರು ಸಮಾಜ ಸೇವೆಯಲ್ಲಿ ಆಸಕ್ತರು. ಆವರಾದರೂ ಈ ಕಡೆ ಯಾಕೆ ಗಮನ ಹರಿಸಲಿಲ್ಲವೊ!

**ಸೃಷ್ಟಿತತ್ವದ ದೇವಾಲಯಗಳು** : ಕ್ರಿ. ಶ. ೧೩೩೫ರಲ್ಲಿ ಭಾರತವನ್ನು ಸಂದರ್ಶಿಸಿದ ಇಬ್ನ ಬತೂತಾ ಎಂಬ ಹೆಸರಿನ ಅರಬ ಪ್ರವಾಸಿಯು ಚಾಂಡೇಲಾ ಕೋಟೆ ಮತ್ತು ವಿಶಾಲ ಸರೋವರ ತೀರದ ಹಲವು ಮಂದಿರಗಳನ್ನು ಉಲ್ಲೇಖಿಸುತ್ತಾನೆ. ಈ ಪ್ರದೇಶದ ಜೋಗಿಗಳು ತಾಂತ್ರಿಕ ವಿದ್ಯೆಯನ್ನು ಬಲ್ಲವರಾಗಿದ್ದರು ಎಂದು ಬರೆಯುತ್ತಾನೆ.

ಚಾಂಡೆ/ದೆಲಾ ವಂಶದವರು ತಾಂತ್ರಿಕ ಪದ್ಧತಿಯ ಅನುಯಾಯಿಗಳು. ಇಲ್ಲಿಯ ದೇವಾಲಯಗಳ ಗೋಡೆಗಳ ಮೇಲೆ ಇರುವ ಮಿಥುನ ಶಿಲ್ಪಗಳು ಮಾತ್ರವಲ್ಲ ಇಲ್ಲಿರುವ ಯೋಗಿನಿಯರ ದೇವಾಲಯಗಳೂ ಈ ಅಭಿಪ್ರಾಯವನ್ನು ಸಮರ್ಥಿಸುತ್ತವೆ. ಇಲ್ಲಿ ಇರುವ ಮಾತಂಗೇಶ್ವರ ದೇವಾಲಯ, ಅದರೊಳಗೆ ಇರುವ ಗರ್ಭಗುಡಿಯನ್ನು ಆವರಿಸಿರುವ ಬೃಹತ್ ಯೋನಿ ಪೀಠ, ಹಾಗೂ ಅದರ ಮೇಲೆ ಇರುವ ಲಿಂಗ – ಇವೆಲ್ಲ ಶಾಕ್ತ - ತಾಂತ್ರಿಕ ಪರಂಪರೆಗೆ ಕನ್ನಡಿ ಹಿಡಿಯುತ್ತವೆ. ಹೀಗಾಗಿ ಇಲ್ಲಿಯ ದೇವಾಲಯಗಳ ಗೋಡೆಗಳು ಸೃಷ್ಟಿಯ ಮಹತ್ವವನ್ನು ಸಾರುವ – ಸ್ತ್ರೀ ಮತ್ತು ಪುರುಷ ತತ್ವಗಳ ಪ್ರತೀಕಾತ್ಮತೆಯ ಸುಂದರ ಮಿಥುನ ಶಿಲ್ಪಗಳಿಂದ ಅಲಂಕೃತಗೊಂಡಿವೆ. ಕೆಲವಂತೂ ನಗ್ನ ಮೂರ್ತಿಗಳು ; ಜೀವಂತ ಭಾವ ಇರುವ, ಬಹಳ ವಿಶಿಷ್ಟ ಮೂರ್ತಿಗಳು. ಈ ದೇವಾಲಯಗಳ ಗೋಡೆಗಳಲ್ಲಿ ಇರುವ ಕಲಾ ವೈಭವವನ್ನು ವೀಕ್ಷಿಸುವವರಲ್ಲಿಯೂ ಗಾಂಭೀರ್ಯ ಇರಬೇಕಾಗುತ್ತದೆ. ಒಂದು ವಾದದ ಪ್ರಕಾರ ಆ ದಿನಗಳಲ್ಲಿ ಬ್ರಹ್ಮಚಾರಿಯರು ಗ್ರಹಸ್ಥಾಶ್ರಮಕ್ಕೆ ಪ್ರವೇಶಿಸುವ ಮೊದಲು ತಮ್ಮನ್ನು ಗ್ರಹಸ್ಥಾಶ್ರಮಕ್ಕೆ ಸಿದ್ಧಗೊಳಿಸಲು ಇಲ್ಲಿಯ ಮಿಥುನ ಶಿಲ್ಪಗಳನ್ನು ವೀಕ್ಷಿಸುತ್ತಿದ್ದರು ಎನ್ನುತ್ತಾರೆ. ಈ ಅಭೂತಪೂರ್ವ ದೇವಾಲಯಗಳ ಎಲ್ಲಾ ಗೋಡೆಗಳು ಮಿಥುನ ಶಿಲ್ಪಗಳಿಂದ ಮಾತ್ರ ಅಲಂಕೃತಗೊಂಡಿಲ್ಲ. ಜನಸಾಮಾನ್ಯರ ಬದುಕಿನ ಜೀವನ ಚಕ್ರಗಳಿಗೆ ಸಂಬಂಧಪಟ್ಟ ಶಿಲ್ಪಗಳು, ಸೃಷ್ಟಿಯಿಂದ ಹೊಮ್ಮುವ ವಿಶ್ವದ ಅನೇಕ ಜೀವಿಗಳ ಶಿಲ್ಪಗಳು ಇಲ್ಲಿವೆ. ಆದರೆ ಶಾರ್ದೂಲ ಎಂಬ ಪುರಾಣ ಕಲ್ಪಿತ ಪ್ರಾಣಿ ಹಿಂದೂ ಮತ್ತು ಜೈನ ದೇವಾಲಯಗಳಲ್ಲಿ ಹೆಣ್ಣಿನೊಡನೆ ಸರಸವಾಡುವುದರ ಹಿಂದಿನ ರಹಸ್ಯ ಅರಿವಾಗುವುದಿಲ್ಲ.

ಚಾಂಡೇ/ದೆಲಾ ವಂಶದ ಅರಸರು ಸ್ಥಾಪಿಸಿ ಪೂಜಿಸಿರುವ ಖಜುರಾಹು ದೇವಾಲಯಗಳು ವಿಶ್ವ ಪರಂಪರೆಯ ಪಟ್ಟಿಗೆ ಸೇರಿವೆ. ಈ ದೇವಾಲಯಗಳನ್ನು ಪೂರ್ವ, ದಕ್ಷಿಣ, ಮತ್ತು ಪಶ್ಚಿಮ ಎಂದು ವಿಭಜಿಸಿದ್ದಾರೆ. ಪಶ್ಚಿಮ ಭಾಗದಲ್ಲಿ ಅನೇಕ ದೇವಾಲಯಗಳು ಒಂದು ಸಮುಚ್ಚಯದ ಒಳಗೆ ಇವೆ. ಈ ಕ್ಷೇತ್ರವು ಪುರಾತತ್ವ ಇಲಾಖೆಯ ರಕ್ಷಣೆಯಲ್ಲಿ ಬಿಗಿ ಬಂದೋಬಸ್ತ್‌ನಲ್ಲಿ ಇದೆ. ಪ್ರವಾಸಿಗರ ಆಕರ್ಷಣೆಗಾಗಿ ಈ ಕ್ಷೇತ್ರವನ್ನು ಸುಂದರ ಉದ್ಯಾನವನವನ್ನಾಗಿಯೂ ಸಿದ್ಧಗೊಳಿಸಲಾಗಿದೆ. ಜೀವಂತ ದೇವಾಲಯವೊಂದು ಈ ಕ್ಷೇತ್ರದ ಹೊರಗಿದೆ.

ಎಲ್ಲಾ ದೇವಾಲಯಗಳೂ ಪುರಾತತ್ವ ಇಲಾಖೆಯ ಸುಪರ್ದಿನಲ್ಲಿಯೇ ಇವೆ. ಪಶ್ಚಿಮ ಭಾಗ ಪೇಟೆಯಾಗಿ ಪರಿವರ್ತಿತವಾಗಿದ್ದರೆ ಪೂರ್ವ ಭಾಗ ಈಗಲೂ ಹಳ್ಳಿಯೇ. ಈ ಹಳ್ಳಿಯ ಮೂಲಕ ಪೂರ್ವ ಭಾಗದ ಬಸದಿ ಮತ್ತು ದೇವಾಲಯಗಳಿಗೆ ಹೋಗಲು ರಸ್ತೆ ಇದೆ. ಈ ರಸ್ತೆಯ ಒಂದು ಭಾಗದಲ್ಲಿ ಬೆಳೆಗಳಿಗೆ ನೀರುಣಿಸುತ್ತಿದ್ದ ವಿಶಾಲ ಖಜುರಾಸಾಗರ ಕೆರೆ ಇದೆ. ಮಳೆ ಚೆನ್ನಾಗಿ ಬರುತ್ತಿದ್ದ ದಿನಗಳಲ್ಲಿ ಈ ಕೆರೆ ತುಂಬುತ್ತಿತ್ತು ಎನ್ನುತ್ತಾರೆ. ಕೆರೆಯ ಇನ್ನೊಂದು ಮಗ್ಗುಲಲ್ಲಿ ಹಳ್ಳಿ ಇದೆ. ಕೆರೆ ಮತ್ತು ಹಳ್ಳಿಯ ನಡುವೆ ಇರುವ ರಸ್ತೆಯ ಮೂಲಕ ಜೈನ ಬಸದಿಗಳಿಗೆ ಹೋಗುವ ದಾರಿ ಇದೆ.

ಸುಮಾರು ಕ್ರಿ.ಶ. ೯೫೦ರಿಂದ ೧೦೫೦ರ ಕಾಲಾವಧಿಯಲ್ಲಿ ಚಾಂದೇಲಾ ವಂಶದ ರಜಪೂತ ಅರಸರಿಂದ ಖಜುರಾಹುನಲ್ಲಿ ಒಟ್ಟು ೮೫ ದೇವಾಲಯಗಳ ರಚನೆಯಾಗಿದೆ. ಅವುಗಳಲ್ಲಿ ೨೨ ದೇವಾಲಯಗಳು ಸುಸ್ಥಿತಿಯಲ್ಲಿ ಇವೆ. ೧೧ ಎಕರೆ ಭೂಮಿಯಲ್ಲಿ ಶಿವ, ವಿಷ್ಣು, ಸೂರ್ಯ, ಗಣಪತಿ ಮತ್ತು ದುರ್ಗೆಯ ದೇವಾಲಯಗಳು ಇವೆ. ಇಲ್ಲಿಯ ವಿಶ್ವ ಪ್ರಸಿದ್ಧ ಹಿಂದೂ ದೇವಾಲಯಗಳಲ್ಲಿ ಮಾತಂಗೇಶ್ವರ ದೇವಾಲಯದಲ್ಲಿ ಮಾತ್ರ ಪೂಜೆ ನಡೆಯುತ್ತಿದೆ. ಸಾರ್ವಜನಿಕರಿಗಾಗಿ ಇದನ್ನು ಪುರಾತತ್ವ ಇಲಾಖೆಯ ಗೇಟಿನ ಹೊರಗೆ ಉಳಿಸಲಾಗಿದೆ.

ಖಜುರಾಹು ದೇವಾಲಯಗಳ ಅಧಿಷ್ಠಾನವೇ ಸುಮಾರು ೧೦-೨೦ ಅಡಿ ಎತ್ತರದ ಜಗತಿಯ ಮೇಲೆ ರಚಿತವಾಗಿದೆ. ಈ ಜಗತಿಯ ಮೇಲೂ ಅನೇಕ ಮೆಟ್ಟಿಲುಗಳು ಇವೆ. ಅವುಗಳನ್ನು ಹತ್ತಿ ದೇವಾಲಯ ಪ್ರವೇಶ ಮಾಡಬೇಕು. ನದಿ ತಟದ ಮುಳುಗಡೆ ಭಾಗದ ಮಂದಿರಗಳಲ್ಲೂ ಇಷ್ಟು ಎತ್ತರದ ಜಗತಿ/ವೇದಿಕೆ ಇರುವ ದೇವಾಲಯಗಳನ್ನು ನಾನು ಕಂಡಿಲ್ಲ. ಇಲ್ಲಿಯ ಇನ್ನೊಂದು ವೈಶಿಷ್ಟ್ಯವೆಂದರೆ ದೇವಾಲಯಗಳ ಒಳಗೆ ಇರುವ ಸ್ಥಳಾಭಾವ. ಎಲ್ಲಾ ಮಂದಿರಗಳ ಗರ್ಭಗುಡಿಗಳಲ್ಲಿ ದೇವರಿಗೆ ಮಾತ್ರ ಸ್ಥಳ ಇರುವುದು. ಪ್ರವೇಶ ದ್ವಾರದ ಬಳಿ ಇಕ್ಕೆಲಗಳಲ್ಲಿ ಎತ್ತರದ ಬಾಲ್ಕನಿಗಳಿವೆ. ಇವು ಅರಸ ಮತ್ತು ರಾಣಿಯರು ಮಾತ್ರ ಕುಳಿತುಕೊಳ್ಳುವಷ್ಟು ಸ್ಥಳಾವಕಾಶವನ್ನು ಹೊಂದಿವೆ. ಪ್ರವೇಶ ದ್ವಾರ (ಅರ್ಧ ಮಂಟಪ) ದಾಟಿದರೆ ಅಂತರಾಳ(ಸುಕನಾಸಿ) ನವರಂಗ. ಆದರೆ ಇವು ಎಲ್ಲಾ ದೇವಾಲಯಗಳಲ್ಲಿ ಒಂದೇ ಮಾದರಿಯಲ್ಲಿ ಇಲ್ಲ. ಮುಂದೆ ಎತ್ತರದ ಹೊಸ್ತಿಲು, ಅದರ ಮೆಟ್ಟಿಲೂ ಬಲು ಎತ್ತರ. ಹೊಸ್ತಿಲ ಒಳಗೆ ದೇವರನ್ನು ಪ್ರತಿಷ್ಠಾಪಿಸಿರುವ ಪುಟ್ಟ ಕೋಣೆ. ಅದೇ ಗರ್ಭಗುಡಿ. ಈ ಎಲ್ಲಾ ದೂರವು ಹೆಚ್ಚಿಗೆ ಇಲ್ಲ. ಇಲ್ಲಿಯ ಕೆಲವು ದೇವಾಲಯಗಳ ಮುಂಭಾಗದ ಶಿಖರ

ಭಾಗದ ಅಲಂಕರಣದಲ್ಲಿ ತಲೆಬುರುಡೆಯ ಮಾದರಿಯ ಶಿಲ್ಪವೂ ಇದೆ.

**ಚಾಂಡೇ(ದೆ)ಲಾ ವಂಶದ ಬಗ್ಗೆ ಇರುವ ದಂತ ಕಥೆ**

ಚಂದ್ರವಂಶವನ್ನು ಚಾಂದೇಲಾ ವಂಶ ಎಂದು ರೂಢಿಯಲ್ಲಿ ಕರೆಯುತ್ತಾರೆ. ದಂತಕಥೆಯ ಪ್ರಕಾರ ಬ್ರಾಹ್ಮಣ ಅರ್ಚಕನ ಮಗಳು ಒಂದು ದಿನ ನದಿಯಲ್ಲಿ ಸ್ನಾನ ಮಾಡುತ್ತಿದ್ದಾಗ ಆಕೆಯನ್ನು ಚಂದ್ರ ಮೋಹಿಸುತ್ತಾನೆ. ಪರಿಣಾಮವಾಗಿ ಆಕೆಗೆ ಮಗು ಹುಟ್ಟುತ್ತದೆ. ಮೋಹಿಸಿದ ಚಂದ್ರ ಮರಳಿ ಬಾನಿನಲ್ಲಿ ಸೇರಿಕೊಂಡ. ಅಪ್ಪನಿಲ್ಲದ ಮಗುವನ್ನು ಸಾಕಲು ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾಗುವ ಭಯದಿಂದ ತಾಯಿ ಮಗನನ್ನು ಕಾಡಿನಲ್ಲಿದ್ದುಕೊಂಡು ಬೆಳೆಸುತ್ತಾಳೆ. ಈ ಮಗ ಚಂದೇಲಾ ವಂಶದ ಉದಯಕ್ಕೆ ಕಾರಣನಾದ ಪ್ರಥಮ ರಾಜ. ವಿದ್ವಾಂಸರ ಪ್ರಕಾರ ಋಷಿ ಅತ್ರಿ, ಚಂದ್ರಮ ಹಾಗೂ ಚಂದ್ರತ್ರೇಯರ (ಅತ್ರಿಯ ಮಗ) ಹೆಸರುಗಳನ್ನು ಇಲ್ಲಿಯ ಶಿಲಾ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಇದು ದಂತ ಕಥೆಯ ಭಾಗ. ಐತಿಹಾಸಿಕವಾಗಿ ಚಂಡೇಲಾ ಅರಸರು ಗುರ್ಜರ ರಜಪೂತರು. ಮೊದಲನೆಯ ಅರಸ ನಾನ್ನುಕ. ಇವರು ೯ರಿಂದ ೧೩ನೆಯ ಶತಮಾನಗಳವರೆಗೆ ಮಧ್ಯಭಾರತವನ್ನು ಆಳಿದವರು. ದೆಹಲಿಯ ಪೃಥ್ವೀರಾಜ್ ಚವ್ಹಾಣ್ ಚಂದ್ರವಂಶದ ಚಂಡೇಲಾರ ವಂಶದವರನ್ನು ಸೋಲಿಸುತ್ತಾನೆ. ಅಲ್ಲಿಗೆ ಚಂಡೇಲಾ ವಂಶ ಇತಿಹಾಸದಲ್ಲಿ ಲೀನವಾಗುತ್ತದೆ. ಆದರೆ ಇಲ್ಲಿಯ ಮಂದಿರಗಳು, ಅವುಗಳ ಶಿಲ್ಪ ಕಲೆಗಳು, ಚಾಂಡೇಲಾ ವಂಶದ ಹೆಸರನ್ನು ಇಂದಿಗೂ ಜೀವಂತ ಇಟ್ಟಿವೆ. ಇನ್ನೂ ಕೆಲವು ದೇವಾಲಯಗಳ ಪರಿಚಯವನ್ನು ಮಾಡೋಣ.

**ಚತುರ್ಭುಜ ಟೆಂಪಲ್ :** ಇದು ರಿಪೇರಿಯಲ್ಲಿದೆ. ಶಿಖರದ ಅಮಲಕ ಈಗಲೂ ಸುಂದರವಾಗಿ ಕಾಣುತ್ತಿದೆ. ಕಲಾ ಕೆತ್ತನೆಯ ಅಂತರಾಳ ಗರ್ಭಗುಡಿ ಮಾತ್ರ, ಗೋಪುರದ ಏಕ ಮಂದಿರ ಇದು. ಒಂದುವರೆ ಕಾಲಿನಲ್ಲಿ ನಿಂತ ಭಂಗಿಯ ನಾಲ್ಕು ಕೈಗಳ ಶಿಲ್ಪದ (ಚತುರ್ಭುಜ)ಬಲದ ಒಂದು ಕೈಯ ಮಣಿಗಂಟಿನಿಂದ ಕೆಳಭಾಗ ಭಗ್ನವಾಗಿದೆ. ಇನ್ನೊಂದು ಕೈ ಅಭಯ ಮುದ್ರೆಯಲ್ಲಿ ಇದೆ. ಎಡದ ಇಳಿಬಿಟ್ಟ ಕೈಬೆರಳುಗಳ ಭಾಗ ಭಗ್ನವಾಗಿದೆ. ಚಕ್ರ ಹಿಡಿದ ಕೈ ಸುಸ್ಥಿತಿಯಲ್ಲಿ ಇದೆ. ಇಲ್ಲಿ ಪೂಜೆ ನಡೆಯುತ್ತಿಲ್ಲ.

**ದೂಲಾದೇವ್ ಟೆಂಪಲ್ :** ದೂಲಾ ಎಂದರೆ ವರ. ದೂಲಾ ದೇವ್ ಅಥವಾ ಕನ್ವರನಾಥ ಮಂದಿರವು ಕ್ರಿ.ಶ. ೧೧೦೦-೧೧೫೦ರಲ್ಲಿ ರಚಿಲ್ಪಟ್ಟಿದೆ. ಶಾಸನಗಳ ಪ್ರಕಾರ ಶಿವಭಕ್ತ ಮದನ ವರ್ಮನ್ ಈ ಶೈವ ಮಂದಿರದ ನಿರ್ಮಾಪಕ. ಇದರ ಬಳಿ ಕುದಾರ್ ಹೊಳೆ ಹರಿಯುತ್ತಿದೆ. ಎರಡೂ ಮಂದಿರಗಳಲ್ಲಿ ಮಿಥುನ ಶಿಲ್ಪಗಳ ಜೊತೆ ಇತರೆ ಸುಂದರ ಶಿಲ್ಪಗಳಿವೆ. ಮಂದಿರದ ಮೇಲ್ಭಾಗದಲ್ಲಿ ಶಿವ ಪಾರ್ವತಿಯರ, ಅಪ್ಸರೆಯರ ಸುಂದರ ಕೆತ್ತನೆಗಳಿವೆ. ಶಿಖರದಲ್ಲಿ ಕಲಶ ಇಲ್ಲ, ಆದರೆ ಕಲಶದ ಪೀಠ (ಅಮಲಕದ ಅಡಿಯಲ್ಲಿ ಇರುವಂತಹದು) ಇದ್ದು, ಅದರ ಮೇಲೆ ಉದ್ದವಾದ ಕಬ್ಬಿಣದ ಸಲಾಕೆ ಇದೆ. ಇದು ಕಲಶ ಭಗ್ನವಾಗಿರುವ ಸಾಧ್ಯತೆಯನ್ನು ತೋರಿಸುತ್ತದೆ.

ಈ ಭಾಗದಲ್ಲಿ ಹೊಸದಾಗಿ ಉತ್ಖನನ ಮಾಡುತ್ತಿರುವ ಮಂದಿರಗಳಿವೆ. ಮಣ್ಣಿನ ಗುಡ್ಡದ ತುತ್ತ ತುದಿಯಲ್ಲಿ ಶಿವನು ಯೋನಿ ಪೀಠ ಸಮೇತ ಕುಳಿತಿದ್ದ, ಆ ಬೋಲು ಪ್ರದೇಶದ ಕಾವಲುಗಾರನಂತೆ ಕುಳಿತಿದ್ದ.

ಹಿಂದೆ ತಿಳಿಸಿದಂತೆ ಇಲ್ಲಿ ಎಲ್ಲಾ ದೇವಾಲಯಗಳು ಎತ್ತರದ ಜಗತಿಯ ಮೇಲೆ ರಚನೆಯಾಗಿವೆ. ಪೂರ್ವ ಭಾಗದಲ್ಲಿ ಎತ್ತರವಾಗಿ ಇರುವ ಕೆಲವು ದಿಬ್ಬಗಳಲ್ಲಿ ದೇವಾಲಯಗಳಿಗೆ ಸಂಬಂಧಪಟ್ಟ ಕೆಲವು ವಸ್ತುಗಳು ಹಳ್ಳಿಯ ಜನರಿಗೆ ಗೋಚರಿಸಿದಾಗ ಅವರು ಅದನ್ನು ಪುರಾತತ್ವ ಇಲಾಖೆಯ ಗಮನಕ್ಕೆ ತಂದರು. ಈ ದಿಬ್ಬಗಳ ಉತ್ಖನನ ಆರಂಭಿಸಿದ ಪುರಾತತ್ವ ಇಲಾಖೆಯವರು ಇನ್ನೂ ಮುಗಿಸಿಲ್ಲ. ಇಂತಹ ಎರಡು ದಿಬ್ಬಗಳನ್ನು ನಾವು ಕಂಡೆವು. ಎರಡೂ ದಿಬ್ಬಗಳ ತುದಿಯಲ್ಲಿ ಯೋನಿ ಪೀಠ ಸಹಿತ ಶಿವಲಿಂಗಗಳು ಇವೆ. ಇಲ್ಲಿ ಇದ್ದ ಕಾವಲುಗಾರನು ದೂರ ದಲ್ಲಿ ಇರುವ ಇಂತಹುದೇ ಕೆಲವು ದಿಬ್ಬಗಳನ್ನು ತೋರಿಸಿ, ''ಇವೆಲ್ಲ ದೇವವಸ್ಥಾನಗಳೇ ಇರಬಹುದು ಎಂಬ ಸಂದೇಹ ಇದೆ. ಇನ್ನೂ ಉತ್ಖನನ ಮಾಡಬೇಕು'' ಎಂದ.

**ಪೂರ್ವ ದೇವಾಲಯಗಳು**

**ಜೈನ ದೇವಾಲಯಗಳ ಸಮುಚ್ಚಯ :** ಅಲ್ಲಿಂದ ನಾವು ಪೂರ್ವ ಭಾಗದ ಜೈನ ಬಸದಿಗಳ ಸಮುಚ್ಚಯಕ್ಕೆ ತೆರಳಿದೆವು. ದಾರಿಯಲ್ಲಿ ಏಕ ಗೋಪುರದ ಗುಡಿ ಇತ್ತು. ಅದು ಬ್ರಹ್ಮ ಟೆಂಪಲ್. ನನ್ನ ಕುತೂಹಲ ಕೆರಳಿತು. ಖಜುರಸಾಗರ ಕೆರೆ ದಡದ ಬ್ರಹ್ಮ ಟೆಂಪಲ್ ದಾಟಿ, ಹಳ್ಳಿಯ ರಸ್ತೆಯಿಂದ ಜೈನ ದೇವಾಲಯಗಳ ಸಮುಚ್ಚಯಕ್ಕೆ ಹೋದೆವು. ಇಲ್ಲಿಯ ಪಾರ್ಶ್ವನಾಥ ಬಸದಿಯು ಶಿಲ್ಪಕಲೆಯ ಔನ್ನತ್ಯದಿಂದ ನಮ್ಮ ಗಮನ ಸೆಳೆಯುತ್ತದೆ. ವಾಸ್ತವದಲ್ಲಿ ಈ ಬಸದಿಯು ೧೧ನೆಯ ಶತಮಾನಕ್ಕೆ ಸೇರಿದ ಆದಿನಾಥ ಮಂದಿರ. ಕ್ರಿ.ಶ. ೯೫೦ ಮತ್ತು ೯೭೦ರಲ್ಲಿ ದಂಗದೇವ ಎಂಬ ಅರಸನು ಇದನ್ನು ನಿರ್ಮಿಸುತ್ತಾನೆ. ಆತನಿಗೆ ಸಂಬಂಧಿಸಿದ ಶಾಸನವೂ ಇಲ್ಲಿದೆ ಎಂದರು. ೧೮೬೦ರಲ್ಲಿ ಜೀರ್ಣೋದ್ಧಾರ ಆಗುವಾಗ ಇಲ್ಲಿ ಪಾರ್ಶ್ವನಾಥನ ಶಿಲ್ಪವನ್ನು ಪ್ರತಿಷ್ಠಾಪಿಸಲಾಯಿತಂತೆ. ಜೈನ ಸಮುಚ್ಚಯದಲ್ಲಿ ಎತ್ತರದ ಗೋಪುರ ಇರುವ ಮುಖ್ಯ ಮಂದಿರ ಇದು. ಈ ದೇವಾಲಯಗಳ ಗೋಡೆಗಳಲ್ಲಿ ಅಲಂಕಾರದಲ್ಲಿ ತಲ್ಲೀನರಾದ ಅಪ್ಸರೆಯರ ಚಿತ್ರಗಳು, ಪ್ರಾಣಿ ಪಕ್ಷಿಗಳ ಶಿಲ್ಪಗಳು ನಮ್ಮ ಗಮನ ಸೆಳೆಯುತ್ತವೆ. ಆಶ್ಚರ್ಯವೆಂದರೆ ಈ ಜೈನ ಬಸದಿಗಳಲ್ಲಿ ವಿಷ್ಣು, ಶಿವ, ಕೃಷ್ಣ ರಾಮ, ಬಲರಾಮ ಮುಂತಾದ ಹಿಂದೂ ದೇವತೆಗಳ ಚಿತ್ರಗಳೂ ಇರುವುದು. ಇದು ಜೈನ ಮಂದಿರವಾದರೂ ಇಲ್ಲಿಯೂ ಮಿಥುನ ಶಿಲ್ಪಗಳ ಕಾಮಕೇಳಿಯನ್ನು ಕಾಣಬಹುದು. ೮ ಕೈಗಳ ಜೈನ ದೇವತೆ ಗರುಡನ ಮೇಲೆ ಸವಾರಿ ಮಾಡುತ್ತಾನೆ. ಪ್ರವೇಶದ್ವಾರದಲ್ಲಿ ಇರುವ ಜೈನ ಇಂದ್ರ ಮತ್ತು ಉಪೇಂದ್ರರ ಶಿಲ್ಪಗಳೂ ವಿಷ್ಣುವನ್ನು ಹೋಲುತ್ತವೆ. ಆದರೆ ಬಾಗಿಲ ಬಳಿ ಹಾಗೂ ಹಾಲ್‌ನಲ್ಲಿ ರಕ್ಷಕದೇವತೆಗಳಾದ ಯಕ್ಷ ಚಕ್ರೇಶ್ವರಿ, ಆದಿನಾಥ ಮುಂತಾದ ಜೈನ ಶಿಲ್ಪಗಳಿವೆ. ಪಾರ್ಶ್ವನಾಥ ಬಸದಿಯ ಉತ್ತರಕ್ಕೆ ಆದಿನಾಥ ಬಸದಿ ಇದೆ. ಇದರ ಗೋಡೆಯಲ್ಲಿ ಮೈ ಪೂರ್ತಿ ಆಭರಣ ಧರಿಸಿರುವ ಅಪ್ಸರೆಯರ ನಾಟ್ಯ ಶಿಲ್ಪಗಳಲ್ಲದೆ, ಪದ್ಮಾವತಿ, ಚಕ್ರೇಶ್ವರಿ, ಅಂಬಿಕಾ, ಮಾನಸಿ, ಮುಂತಾದ ಯಕ್ಷ ಯಕ್ಷಿಯರ ಶಿಲ್ಪಗಳು ಗೋಡೆಯ ಕಿಂಡಿಯಲ್ಲಿ ಇವೆ. ಮಹಾವೀರನ ತಾಯಿಗೆ ಸಂಬಂಧಿಸಿದ ೧೬ ಕನಸುಗಳ ಚಿತ್ರವೂ ಇಲ್ಲಿದೆ.

**ಶಾಂತಿನಾಥ ಬಸದಿ :** ಇದರ ಅಕ್ಕ ಪಕ್ಕ ಏಕ ಗೋಪುರಗಳ ಅನೇಕ ದೇವಾಲಯ ಗಳಲ್ಲಿ ಜೈನ ತೀರ್ಥಂಕರರ ಶಿಲ್ಪಗಳಿವೆ. ಹೀಗಾಗಿ ಇದನ್ನು ಜೈನ ಬಸದಿಗಳ ಸಮುಚ್ಚಯ ಎಂದು ಕರೆಯುತ್ತಾರೆ. ಶಾಂತಿನಾಥ ದೇವಾಲಯದಲ್ಲಿ ನೃತ್ಯರೂಪಿ ಕ್ಷೇತ್ರಪಾಲನ ಶಿಲ್ಪ ಆಕರ್ಷಕವಾಗಿದೆ.

**ಗಂಟಾಯಿ ಮಂದಿರ :** ಕನ್ನಡ-ತುಳುವಿನಲ್ಲಿ ಇರುವ ಗಂಟೆ ಪದವು ಇಲ್ಲಿ 'ಗಂಟಾ' ಎಂದಿದೆ. ಹತ್ತನೆಯ ಶತಮಾನಕ್ಕೆ ಸೇರಿದ ಇಲ್ಲಿಯ ಬಸದಿಗಳ ಕಂಬದಲ್ಲಿ ಗಂಟೆಗಳ ಶಿಲ್ಪಗಳಿರುವುದರಿಂದ ಈ ಬಸದಿಗೆ 'ಗಂಟಾಯಿ ಮಂದಿರ' ಎಂದು ಹೆಸರು ಬಂದಿದೆ. ಈ ಬಸದಿಯ ಉಳಿದ ಭಾಗಗಳು ಜೀರ್ಣವಾಗಿವೆ. ಆದರೆ ಗಂಗಾ ಯಮುನೆಯರ ಮತ್ತು ಬೇರೆ ಕೆಲವು ಶಿಲ್ಪಗಳು ಬಾಗಿಲ ಬಳಿ ಇವೆ. 'ಗಂಟಾಯಿ ಮಂದಿರ'ದ ಬಳಿ ಮಾಡಿದ ಉತ್ಖನನದಲ್ಲಿ ದೊರೆತ ಬುದ್ಧನ ಶಿಲ್ಪವನ್ನು ಮ್ಯೂಸಿಯಮ್‌ನಲ್ಲಿ ಇಡಲಾಗಿದೆ. ಈ ಭಾಗದಲ್ಲಿ ಇನ್ನೂ ಅನೇಕ ಜೈನ ಶಿಲ್ಪಗಳು ದೊರಕಿವೆ. ಇವೆಲ್ಲ ಖಜುರಾಹು ವಸ್ತು ಸಂಗ್ರಹಾಲಯದಲ್ಲಿ ಇವೆ. ಜೈನ ದಿಗಂಬರ ಪಂಥಕ್ಕೆ ಸಂಬಂಧಿಸಿದ ಶಿಲ್ಪಗಳೇ ಹೆಚ್ಚಾಗಿವೆ. ಜೈನ ಸಮುಚ್ಚಯದ ದಾರಿಯಲ್ಲಿ ಅದಕ್ಕೆ ಹೊಂದಿಕೊಂಡಂತೆ ಜೈನರ ಧರ್ಮ ಛತ್ರ ಇದೆ.



ಇದು ಜೈನರ ಯಾತ್ರಾಸ್ಥಳವಾಗಿದೆ. ಇಲ್ಲಿ ಜೈನ ಧರ್ಮಕ್ಕೆ ಸಂಬಂಧಪಟ್ಟ ಪ್ರದರ್ಶನಾಲಯವೂ ಇದೆ.

**ಜವಾರಿ (ಜೋಳದ ಮೂಲದ ಹೆಸರು) ಮಂದಿರ :** ಇದು ವಿಷ್ಣು ಮಂದಿರ. ಇದೂ ಖಜುರಾಹು ಸಮುಚ್ಚಯದ ಸುಂದರ ಶಿಲ್ಪಕಲಾ ಮಂದಿರಗಳಲ್ಲಿ ಒಂದು.

**ಪಶ್ಚಿಮ ದೇವಾಲಯಗಳು :** ಪುರಾತತ್ವ ಇಲಾಖೆಯವರು ಅಚ್ಚುಕಟ್ಟಾಗಿ ಖಜುರಾಹು ದೇವಾಲಯಗಳ ಸಂಕೀರ್ಣವನ್ನು ನಿರ್ವಹಿಸುತ್ತಾರೆ. ಪಶ್ಚಿಮದ ದೇವಾಲಯಗಳು ವಿಶ್ವ ಪ್ರವಾಸಿಗರ ಪ್ರಮುಖ ಆಕರ್ಷಣೆ ಮಾತ್ರವಲ್ಲ, ಪುರಾತತ್ವ ನೆಲೆಯಿಂದಲೂ ಇವು ಹೆಚ್ಚಿನ ಮಹತ್ವ ಪಡೆದಿವೆ. ಬೃಹತ್ತು ಮತ್ತು ಮಹತ್ತುಗಳಿಂದ ಇವು ಪ್ರವಾಸಿಗರನ್ನು ಮೂರ್ಖರನ್ನಾಗಿಸುತ್ತವೆ. ಈ ದೇವಾಲಯಗಳ ಎಲ್ಲಾ ಶಿಲ್ಪಗಳು ಜೀವಂತವಾಗಿ ಕ್ರಿಯಾನಿರತವಾಗಿರುವಂತೆ ಕಲಾವಿದ ತನ್ನ ಕೈಚಳಕ ಪ್ರತಿಭೆಯನ್ನು ಜಗತ್ತಿಗೆ ತೋರಿಸುತ್ತಾನೆ. ಶಿಲ್ಪಗಳು ಮೂಕವಾಗಿವೆ ನಿಜ, ಆದರೆ ಅವುಗಳ ಭಾವ ನಮ್ಮ ಭಾವನೆಗಳೊಂದಿಗೆ ಸಂಭಾಷಿಸುತ್ತದೆ.

**ಮಾತಂಗೇಶ್ವರ :** ಪುರಾತತ್ವ ಇಲಾಖೆಯ ಸುಪರ್ದಿನಲ್ಲಿ ಇರುವ ಮಾತಂಗೇಶ್ವರ ದೇವಾಲಯ ಪುರಾತತ್ವ ಇಲಾಖೆಯ ಬೇಲಿಯ ಹೊರಗೆ ಇದೆ. ಮುಕ್ತ ಪ್ರವೇಶ. ಮಾತಂಗೇಶ್ವರ ದೇವಾಲಯದಲ್ಲಿ ನಿತ್ಯ ಪೂಜೆ ಇದೆ. ಅರ್ಚಕರು ಅಲ್ಲೇ ಇರುವುದರಿಂದ ಸ್ಥಳೀಯ ನೂರಾರು ಭಕ್ತರು ಇಲ್ಲಿಗೆ ಭೇಟಿಕೊಡುತ್ತಾರೆ. ಶಿವರಾತ್ರಿಯಲ್ಲಿ ಸಾವಿರಾರು ಜನರು ಇಲ್ಲಿ ಸೇರುತ್ತಾರೆ. ಆದರೂ ಇದೂ ಪುರಾತತ್ವ ಇಲಾಖೆಯ ಸುಪರ್ದಿನಲ್ಲಿ ಇದೆ. ಇತಿಹಾಸಕಾರರ ಪ್ರಕಾರ ಚಾಂಡೇಲ ಅರಸ ಹರ್ಷ ವರ್ಮನ್ ಕ್ರಿ. ಶ. ೯೨೦ರಲ್ಲಿ ಈ ದೇವಾಲಯವನ್ನು ನಿರ್ಮಿಸಿದ್ದಾನೆ.

ಮರಾಠ ಸಂಶೋಧಕ ಢೇರೆಯವರು, ಭಾರತದ ಜನಪದ ಉಪಾಸನೆಯಲ್ಲಿ ಮಾತಂಗಿಯು ಪೃಥ್ವೀ ರೂಪ ಮತ್ತು ಸ್ತ್ರೀ ತತ್ವ. ಮತಂಗವು ಪುರುಷ ತತ್ವದ ಮೇಘ ರೂಪ. ಮಾತಂಗೇಶ್ವರ ಗರ್ಭಗುಡಿಯನ್ನು ಸಂಪೂರ್ಣ ಆವರಿಸಿರುವ ಯೋನಿ ಪೀಠದ ಮೇಲೆ ಸೃಷ್ಟಿತತ್ವವನ್ನು ಸಾರುತ್ತಿದ್ದಾನೆ ಎಂದು ಹೇಳಲಾಗುತ್ತದೆ. ಆದರೆ ಶಾಕ್ತ-ತಾಂತ್ರಿಕರು ಈ ವಾದವನ್ನು ಒಪ್ಪುವುದಿಲ್ಲ. ಅವರ ಪ್ರಕಾರ ಶಿವನು ಶಿಶ್ನದ ಸಂಕೇತವಲ್ಲ. ಶಿವನು ಸ್ತ್ರೀ ಮತ್ತು ಪುರುಷ ತತ್ವ. ಅವನು ಹೆಣ್ಣೂ ಹೌದು ಗಂಡೂ ಹೌದು. ಈ ತತ್ವ ತುಳು ನಾಡಿನ ಭೂತಾರಾಧನೆಯಲ್ಲಿ ಈಗಲೂ ಉಳಿದುಬಂದಿದೆ.

ಹಿಂದೆ ತಿಳಿಸಿದಂತೆ ಖಜುರಾಹು ದೇವಸ್ಥಾನಗಳ ವೈಶಿಷ್ಟ್ಯವೆಂದರೆ ಎತ್ತರವಾದ ಜಗತಿಯ ಮೇಲೆ ದೇವಸ್ಥಾನ ನಿರ್ಮಾಣಗೊಂಡಿರುವುದು. ಪಶ್ಚಿಮದ ದೇವಾಲಯಗಳ ವೇದಿಕೆ ದಕ್ಷಿಣ ಮತ್ತು ಪೂರ್ವ ದೇವಾಲಯಗಳಿಗಿಂತಲೂ ಬಹಳ ಎತ್ತರವಾಗಿ ಇದೆ. ಅದರಲ್ಲೂ ಮಾತಂಗೇಶ್ವರ ದೇವಸ್ಥಾನಕ್ಕೆ ಹೊರಟಾಗ ಎರಡು ಮಹಡಿ ಹತ್ತಿದಂತೆ ಆಗುತ್ತದೆ. ಜಗತಿಯ ಮೇಲೆ ಹತ್ತಲು ಸುಮಾರು ೮ ಮೆಟ್ಟಿಲುಗಳಿವೆ. ಅಲ್ಲಿಂದ ಅಧಿಷ್ಠಾನ ತಲುಪಲು ಸುಮಾರು ೨೦ಕ್ಕಿಂತಲೂ ಹೆಚ್ಚಿನ ಮೆಟ್ಟಿಲುಗಳಿವೆ. ಮಹಡಿ ಹತ್ತಿದಂತೆ ಹತ್ತಿ ಗುಡಿಯ ಒಳಗೆ ಹೋದರೆ ಇಡಿಯ ಗರ್ಭಗೃಹವನ್ನು ಆವರಿಸಿದ ಯೋನಿ ಪೀಠ ನಮಗೆದುರಾಗುತ್ತದೆ. ಈ ಯೋನಿ ಪೀಠ ನಮ್ಮ ಹೆಗಲಿನಷ್ಟು ಎತ್ತರ ಇದೆ. ಇದರ ಮೇಲೆ ಸುಮಾರು ೮ ಅಡಿ ಎತ್ತರದ ಬೃಹತ್ ಲಿಂಗ ಇದೆ. ಎಡಕ್ಕೆ ಒಬ್ಬ ವ್ಯಕ್ತಿ ನಡೆಯಲು ಇರುವ ಓಣಿಯಲ್ಲಿ ಸಾಗಿ, ಭಕ್ತರು ಯೋನಿ ಪೀಠ ಹತ್ತಲು ಮೆಟ್ಟಲು ಇದೆ. ಎಲ್ಲರೊಂದಿಗೆ ಯೋನಿ ಪೀಠದ ಮೇಲೆ ಹತ್ತುವಾಗ ಸಾಂಪ್ರದಾಯಿಕ ಅಳುಕು ಉಂಟಾಯಿತು. ಕನ್ನಡ ನಾಡಿನ ಕರಾವಳಿ ಭಾಗದಲ್ಲಿ ಗರ್ಭಗುಡಿಯ ಹೊರಗೆ ನಿಂತು ಗರ್ಭಗುಡಿಯ ಒಳಗೆ ಇಣುಕಬೇಕಾಗುತ್ತದೆ. ಗರ್ಭಗುಡಿಯ ಒಳಗೆ ಅಂತರಾಳ ಮತ್ತು ವಿಗ್ರಹ ಇರುತ್ತದೆ. ಅಂದರೆ ಸುಮಾರು ೨೦ ಅಡಿ ದೂರ ನಿಂತು ದೇವರನ್ನು ನೋಡಲು ಅವಕಾಶ. ಇಲ್ಲಿ ಭಕ್ತರು ವೇದಿಕೆಯಂತಿರುವ ಯೋನಿ ಪೀಠದ ಮೇಲೆ ಹತ್ತಿ ಗಂಧ, ಪ್ರಸಾದ ಪಡೆಯಬೇಕು. ಭೂದೇವಿ ಅಂದರೆ, ಅಮ್ಮ, ಮಾತೆ, ಸೃಷ್ಟಿಕರ್ತೆ ಎಂಬ ತತ್ವದ ಆಧಾರದ ಮೇಲೆ ರಚನೆಯಾಗಿದೆ. ಭೂದೇವಿಯನ್ನು ಯೋನಿಗೆ ಕಲ್ಪಿಸಿ ಯೋನಿಪೂಜೆ ಮಾಡುವುದು ತಾಂತ್ರಿಕರ ಉಪಾಸನಾ ಪದ್ಧತಿ. ಭೂದೇವಿಯನ್ನು ಯೋನಿರೂಪಿ ಎಂದು ನಂಬಲಾಗಿದೆ. ಸೂರ್ಯನನ್ನು ಅಥವಾ ಮೇಘವನ್ನು ಪುರುಷ ತತ್ವದ ಪ್ರತೀಕ ಎಂಬ ಶಾಕ್ತ ತಾಂತ್ರಿಕರ ಪದ್ಧತಿಯಂತೆ ಸೂರ್ಯ ಅಥವಾ ಮೇಘದಿಂದಾಗಿ ಜೀವ ಸೃಷ್ಟಿಯಾಗುತ್ತದೆ. ಚರಾಚರಗಳ ಪ್ರಸವದಾತೆ ಪ್ರಕೃತಿಯನ್ನು ಪೂಜಿಸುವ ಪದ್ಧತಿ ಜನಪದರ ಕೃಷಿ ಸಂಸ್ಕೃತಿಯಲ್ಲಿ ಇಂದಿಗೂ ಇದೆ. ಯೋನಿ ಪೀಠದ ಮೇಲೆ ಕುಳಿತ ಅರ್ಚಕ ತೀರ್ಥ-ಪ್ರಸಾದವನ್ನು ವಿತರಿಸುತ್ತಿದ್ದ ಭೂಮಿಯೇ ಯೋನಿ ಎಂದಮೇಲೆ ನಾವು ಅದರ ಮೇಲೆ ಓಡಾಡುವುದು ಸಹಜವೆ. ನಾವು ಯೋನಿ ಪೀಠದ ಮೆಟ್ಟಲು ಇಳಿದು ಉತ್ತರದ ಬಾಗಿಲಿನಿಂದ ಇಳಿದುಬಂದೆವು.

**ಕಾಂದ್ರೀಯ ಮಹಾದೇವ :** ಸುಮಾರು ೩೫ ಮೀಟರ್ ಎತ್ತರದ ಹಾಗೂ ೨೦ ಮೀಟರ್ ಅಗಲದಲ್ಲಿ ಎದ್ದಿರುವ ಕಾಂದ್ರೀಯ ಮಹಾದೇವ ಈ ಸಮುಚ್ಚಯದ ದೇವಾಲಯಗಳಲ್ಲಿಯೇ ಅತ್ಯಂತ ಬೃಹತ್ತಾದ ದೇವಾಲಯ. ಈ ಮಂದಿರದ ಹೊರಗೋಡೆಯಲ್ಲಿ ೬೪೬ ಮತ್ತು ಒಳಗೋಡೆಯಲ್ಲಿ ೨೨೬ ಸುಂದರ ಶಿಲ್ಪಗಳ ರಚನೆಯಿದೆ. ಇತಿಹಾಸಕಾರರ ಪ್ರಕಾರ ಚಾಂಡೇಲ ಅರಸ ವಿದ್ಯಾಧರ ಈ



ದೇವಸ್ಥಾನವನ್ನು ಕ್ರಿ. ಶ. ೧೦೨೫ ಮತ್ತು ೧೦೫೦ರ ಕಾಲದಲ್ಲಿ ಕಟ್ಟಿದ್ದಾನೆ.

ಮಹಾದೇವ ಮಂದಿರದ ಪ್ರವೇಶ ದ್ವಾರದಲ್ಲಿ ಮಕರ ತೋರಣವಿದೆ. ಒಳಗೆ ಚತುಷ್ಪಾದದ ಅಮೃತ ಶಿಲೆಯ ೪.೫ ಅಡಿ ಎತ್ತರದ ಸದಾಶಿವ ಲಿಂಗವಿದೆ. ಇದರ ನಾಲ್ಕು ಪಾದಗಳು ಶೈವ ಪಂಥದ ನಾಲ್ಕು ನಂಬಿಕೆಗಳನ್ನು ಸಂಕೇತಿಸುತ್ತವೆ ಎನ್ನುತ್ತಾರೆ. ಇದಲ್ಲದೆ ಅಂತರಾಳ, ಗರ್ಭಗೃಹ, ಮುಖ ಮಂಟಪ, ಮಹಾ ಮಂಟಪ ಇವೆ. ಅರಸು ಮತ್ತು ಅವನ ರಾಣಿಯರು ಕುಳಿತುಕೊಳ್ಳಲು ಬಾಲ್ಕನಿಯಂತಹ ಜಗಲಿ ಇದೆ. ಬಲಭಾಗದಲ್ಲಿ ವಿಷ್ಣು ಮತ್ತು ಬ್ರಹ್ಮನ ಶಿಲ್ಪಗಳಿವೆ. ಸಣ್ಣ ಸಣ್ಣ ೮೪ ಶಿಖರಗಳನ್ನು ಹೊಂದಿರುವ ಈ ದೇವಾಲಯದ ಗೋಡೆಗಳ ಮೇಲೆ ಮಿಥುನ ಶಿಲ್ಪಗಳ ಜೊತೆಗೆ ಆನೆಗಳು, ಕುದುರೆಗಳು, ಯೋಧರು, ಬೇಟೆಗಾರರು, ಗಂಧರ್ವ ಕನ್ಯೆಯರು, ಸಂಗೀತಗಾರರು ಮತ್ತು ಸಂಗೀತ ವಾದನಗಳ ಶಿಲ್ಪಗಳಿವೆ. ಈ ದೇವಾಲಯದ ಛಾವಣಿಯು ಸುಂದರ ಕೆತ್ತನೆಯಿಂದ ಕೂಡಿದೆ.

**ಜಗದಂಬಾ ಮಂದಿರ :** ಕಾಂದ್ರೀಯ ಮಹಾದೇವ ದೇವಸ್ಥಾನದ ಜಗತಿಯ ಒಂದಷ್ಟು ದೂರದಲ್ಲಿ ಜಗದಾಂಬಾ ಮಂದಿರ ಇದೆ. ಕಾಂದ್ರೀಯ ಮಹಾದೇವ ಮಂದಿರಕ್ಕಿಂತಲೂ ಪುರಾತನವಾದುದು ಎಂದು ನಂಬಲಾಗಿರುವ ಜಗದಂಬೆಯ ಗೋಪುರ ಮತ್ತು ಒಟ್ಟು ಮಂದಿರ ಕಾಂದ್ರೀಯ ಮಹಾದೇವ ದೇವಸ್ಥಾನಕ್ಕಿಂತ ಚಿಕ್ಕದಾಗಿದೆ. ಈ ಮಂದಿರವು ಮೂಲತಃ ವಿಷ್ಣು ಮಂದಿರವಾಗಿತ್ತು ಎಂಬ ಮಾಹಿತಿ ಇದೆ. ಗರ್ಭಗೃಹದಲ್ಲಿ ಈಗ ಕಾಳಿಯ ದೊಡ್ಡ ವಿಗ್ರಹ ಇದೆ. ಈಕೆಯನ್ನು ಜಗದಾಂಬಾ ಎನ್ನುತ್ತಾರೆ. ಗೋಪುರದ ಚೌಕಾಕಾರದ ಒಳ ಅಲಂಕಾರದಲ್ಲಿ ಮತ್ತು ಹೊರ ಗೋಡೆಗಳಲ್ಲಿ ಮಿಥುನ ಶಿಲ್ಪಗಳ ಜೊತೆ ಕುಸುರಿ ಕೆಲಸಗಳ ಅಲಂಕರಣ ಇವೆ. ಮೇಲಿನ ಕೊನೆಯ ಹಂತದಲ್ಲಿ ಕೆಲವು ಮಿಥುನ ಶಿಲ್ಪಗಳಲ್ಲದೆ ಸೂಕ್ಷ್ಮ ಮತ್ತು ಸುಂದರ ಕೆತ್ತನೆಗಳ ದೇವ ದೇವತೆಗಳ ಶಿಲ್ಪಗಳಿವೆ. ಇದರ ಪ್ರವೇಶ ದ್ವಾರದಲ್ಲಿ ಉದ್ದ ವೆರಾಂಡದಂತಹ ಸ್ಥಳ ಇದ್ದು ಇದರ ಬಾಲ್ಕನಿ ಮತ್ತು ಮಹಾ ಮಂಟಪ ಇತರೆ ದೇವಸ್ಥಾನಗಳ ಮಂಟಪಕ್ಕಿಂತ ದೊಡ್ಡದಿದೆ.

**ಚಿತ್ರಗುಪ್ತ ಮಂದಿರ (ಸೂರ್ಯ ದೇವಾಲಯ) :** ಜಗದಾಂಬಾ ಮಂದಿರದ ಉತ್ತರಕ್ಕೆ ಚಿತ್ರಗುಪ್ತ ಮಂದಿರ ಇದೆ. ಹೆಸರು ಚಿತ್ರಗುಪ್ತ, ಗರ್ಭಗುಡಿಯ ಶಿಲ್ಪ ಸೂರ್ಯನದ್ದು. ಇದು ಈ ಸಂಕೀರ್ಣದ ಕೊನೆಯ ಮಂದಿರ. ಇಲ್ಲಿ ಭಗ್ನ ಶಿಲ್ಪ ನೋಡಿದೆವು. ಇದರಲ್ಲಿ ೨.೧೩(೭ ಅಡಿ) ಮೀಟರ್ ಎತ್ತರದ ಸೂರ್ಯನಾರಾಯಣನ ಶಿಲ್ಪ ಇದೆ. ಉತ್ತರ ಭಾರತೀಯರನ್ನು ಹೋಲುವ ಈ ಶಿಲ್ಪವು ಉಕ್ಕಿನ ಕೋಟು ಮತ್ತು ಬೂಟು ಧರಿಸಿದೆ. ಇದರ ಕರದ ಕಮಲಗಳು ಭಗ್ನವಾಗಿವೆ. ಇತರ ದೇವಾಲಯಗಳ ಗೋಡೆಗಳಲ್ಲಿ ಇರುವಂತೆ ಇಲ್ಲಿಯೂ ಆಕರ್ಷಕ ಶಿಲ್ಪಗಳಿವೆ. ಸಪ್ತಕುದುರೆಗಳು ರಥವನ್ನು ಎಳೆಯುತ್ತವೆ. ಈ ದೇವಾಲಯದ ಹಿಂಭಾಗದಲ್ಲಿ ಖಜುರಾಹು ಅರಣ್ಯ ಇದೆ. ಶಿವಸಾಗರ್ ಸರೋವರ ಇದೆ. ಈ ಅರಣ್ಯದ ದಾರಿಯಲ್ಲಿ ಕುದುರೆಯ ಮೇಲೆ ಬರುವಾಗ ಬ್ರಿಟಿಷ್ ಅಧಿಕಾರಿ ಪಾಳುಬಿದ್ದ ದೇವಾಲಯಗಳ ಅಪೂರ್ವ ಸ್ಥಳವನ್ನು ಬೆಳಕಿಗೆ ತಂದ ಎನ್ನುವುದು ಇತಿಹಾಸ.

**ವಿಶ್ವನಾಥ ಮಂದಿರ :** ದಕ್ಷಿಣ ಪ್ರವೇಶದ್ವಾರದ



ವಿಶ್ವನಾಥ ಮಂದಿರವು ದಾಂಗಾ ಅರಸನಿಂದ ಸುಮಾರು ೧೦-೧೧ನೆಯ ಶತಮಾನದಲ್ಲಿ ರಚನೆಯಾಗಿದೆ. ಇದು ಕಾಂದ್ರೀಯ ಮಹಾದೇವ ದೇವಾಲಯವನ್ನು ಹೋಲುತ್ತದೆ. ಪ್ರವೇಶ ದ್ವಾರದಲ್ಲಿ ಇರುವ ಸಿಂಹಗಳ ಶಿಲ್ಪಗಳು ದೇವಸ್ಥಾನದ ಕಾವಲುಗಾರನಂತೆ ನಿಂತಿವೆ. ಆನೆಗಳ ಶಿಲ್ಪ ಮಂದಿರದ ಜಗತಿಯೊಂದಿಗೆ ರಚನೆಯಾಗಿವೆ. ಗರ್ಭಗೃಹದಲ್ಲಿ ಅಮೃತಶಿಲೆಯಿಂದ ರಚನೆಯಾದ ಸುಂದರ ಶಿವಲಿಂಗದ ಜೊತೆ ಮೂರು ತಲೆಯ ಬ್ರಹ್ಮನ ಶಿಲ್ಪವೂ ಇದೆ. ಇದರ ಮುಂದೆ ಇರುವ ಜಗತಿಯಲ್ಲಿ ೬ ಅಡಿ ಎತ್ತರದ ನಂದಿ ಆಕರ್ಷಕವಾಗಿದೆ. ಇದರ ದಕ್ಷಿಣಕ್ಕೆ ಚಿಕ್ಕದಾಗಿರುವ ಪಾರ್ವತಿ ಮಂದಿರ ಇದೆ.

**ಲಕ್ಷ್ಮಣದೇವ್ ದೇವಸ್ಥಾನ :** ಲಕ್ಷ್ಮಣದೇವ್ ದೇವಸ್ಥಾನವೂ ಬೃಹತ್ತಾದ ದೇವಸ್ಥಾನ. ಲಕ್ಷ್ಮಣದೇವ್ ದೇವಸ್ಥಾನ ಎಂದಾಗ ಪ್ರವಾಸಿಗರು ರಾಮನ ಸೋದರನಾದ ಲಕ್ಷ್ಮಣನ ಶಿಲ್ಪವನ್ನು ನಿರೀಕ್ಷಿಸಿದರೆ ತಪ್ಪಲ್ಲ. ಆದರೆ ಗರ್ಭಗುಡಿಯಲ್ಲಿ ಪೂಜಿಸಲ್ಪಡುವ ಚತುರ್ಭುಜ ಶಿಲ್ಪ ವಿಷ್ಣುವಿನದ್ದು. ಇದನ್ನು ಟಿಬೆಟ್‌ನಿಂದ ತರಲಾಗಿದೆಯಂತೆ. ಚಂದೇಲಾ ವಂಶದ ಯಶೋಶರ್ಮ ಎಂಬ ಅರಸನು ಈ ಮಂದಿರವನ್ನು ಕ್ರಿ.ಶ. ೯೫೦ರಲ್ಲಿ ನಿರ್ಮಿಸುತ್ತಾನೆ. ಪಂಚಾಯತನ ಶೈಲಿಯ ಈ ದೇವಸ್ಥಾನ ೨೯ ಮೀಟರ್ ಎತ್ತರವಿದ್ದು ೧೩ ಮೀಟರ್ ಅಗಲ ಇದೆ. ಅಲಂಕೃತ ಪೀಠದ ಮೇಲೆ ಇರುವ ವಿಷ್ಣುವಿನ ಶಿಲ್ಪ ೧.೩ ಮೀಟರ್ ಉದ್ದ ಇದೆ. ಇಲ್ಲೂ ನವರಂಗ ಇದೆ. ಕಾಂದ್ರೀಯ ಮಹಾದೇವ ದೇವಾಲಯದಂತೆ ಇಲ್ಲೂ ಮಿಥುನ ಶಿಲ್ಪಗಳ ಜೊತೆ ವಿಭಿನ್ನ ಶೈಲಿಗಳ ಶಿಲ್ಪಗಳಿವೆ. ಲಕ್ಷ್ಮಿಯ ಎಡಬಲಗಳಲ್ಲಿ ವಿಷ್ಣು ಮತ್ತು ಬ್ರಹ್ಮರ ಶಿಲ್ಪಗಳಿವೆ!

ಅತಿ ಹೆಚ್ಚು ಮಿಥುನ ಶಿಲ್ಪಗಳ ಬೃಹತ್ ಗೋಪುರಗಳ ದೊಡ್ಡ ದೇವಾಲಯ ಇದು. ಕಾಮಸೂತ್ರದ ಪಾಠ ಹೇಳುವಂತಿದೆ ಈ ದೇವಾಲಯ. ಇಲ್ಲಿ ನಾವು ಕಾಣುವುದು ಸಂನ್ಯಾಸಿಗಳೊಂದಿಗೆ ಸರಸವಾಡುವ ಸುಂದರ ಸ್ತ್ರೀಯರನ್ನು. ಇದೂ ತಾಂತ್ರಿಕ ಪದ್ಧತಿಯ ಭಾಗವೇ! ಸಂನ್ಯಾಸಿಗಳು ಬ್ರಹ್ಮಚಾರಿಗಳಾಗಿರಬೇಕು ಎನ್ನುವುದು ಆಮೇಲೆ ಮೂಡಿದ ಆರ್ಯ ಬ್ರಾಹ್ಮಣರ ತತ್ವ.

**ವರಾಹ ಗುಡಿ:** ಲಕ್ಷ್ಮಣದೇವ್ ದೇವಾಲಯಕ್ಕೆ ಎದುರಾಗಿ ಅನತಿ ದೂರದಲ್ಲಿ ಎತ್ತರದ ವೇದಿಕೆಯಲ್ಲಿ ಬೃಹತ್ತಾಗಿ ಕಾಣುವ ೯ ಅಡಿ ಎತ್ತರದ ಹಂದಿ/ವರಾಹ ಶಿಲ್ಪವು (೨.೬೬ x ೧.೭೬) ಹಳದಿ ಮರಳು ಶಿಲೆಯಿಂದ ರಚನೆಯಾಗಿದೆ. ವರಾಹ ಶಿಲ್ಪದ ದೇಹದಲ್ಲಿ ೧೨ ಸಾಲುಗಳಲ್ಲಿ ಕ್ರಮವಾಗಿ ಗಣೇಶ, ಶಿವ, ಸಪ್ತಮಾತೃಕೆಯರು, ಗಂಗಾ, ಯಮುನಾ ಹೀಗೆ ಅನೇಕ ದೇವಾನುದೇವತೆಗಳ ಸುಮಾರು ೬೭೫ ಪುಟ್ಟ ಪುಟ್ಟ ಸುಂದರ ಶಿಲ್ಪಗಳನ್ನು ಕೆತ್ತಿರುವುದು ವಿಶೇಷ. ಸುಮಾರು ಹತ್ತು ಕಂಬಗಳ ಗೋಪುರದ ಒಳಗೆ ವರಾಹ ಶಿಲ್ಪ ಗಂಭೀರವಾಗಿ ನಿಂತಿದೆ. ಈ ಪುಟ್ಟ ಚೌಕಾಕಾರದ ಗೋಪುರದ ಒಳಭಾಗದಲ್ಲಿ ಇರುವ ಪಿರಮಿಡ್ ಅಲಂಕಾರವೂ ಸುಂದರವಾಗಿದ್ದು ಆಕರ್ಷಕವಾಗಿದೆ. ಪ್ರವೇಶ ದ್ವಾರದಲ್ಲಿ ಜೋಡಿ ಮಕರ ತೋರಣಗಳಿವೆ.

**ಯೋಗಿನಿ ಮಂದಿರ:** ತಾಂತ್ರಿಕ ಹಿನ್ನೆಲೆಯ ಖಜುರಾಹು ದೇವಸ್ಥಾನಗಳಲ್ಲಿ ಅತ್ಯಂತ ಹಳೆಯ ದೇವಸ್ಥಾನವೆಂದರೆ ಯೋಗಿನಿ ಮಂದಿರ. ಕಾಳಿದೇವಿಗೆ ಅರ್ಪಿಸಲಾದ ಈ ಚೌಸತ್ (೬೪) ಮಂದಿರದಲ್ಲಿ ಕಾಳಿ ಮತ್ತು ಆಕೆಯ ೬೪ ಅವತಾರಗಳು ಇದ್ದುವು. ಈಗ ೩೫ ಶಿಲ್ಪಗಳ ಗುಡಿಗಳಿವೆ. ೯ನೆಯ ಶತಮಾನಕ್ಕೆ ಈ ದೇವಸ್ಥಾನ ಸೇರಿದೆ. ಇವು ಹೆಚ್ಚಿನ ಅಲಂಕಾರಗಳಿಲ್ಲದ ಸಾಮಾನ್ಯ ಗುಡಿಗಳು. ಇದರ ವೇದಿಕೆಗಳು ೧೪ರಿಂದ ೧೮ ಅಡಿ ಎತ್ತರವಿದೆ.

ಖಜುರಾಹುನ ಪುರಾತತ್ವ ಇಲಾಖೆಯವರು ಈ ಸಮುಚ್ಚಯದ ಉತ್ತರ ಭಾಗದ ಉದ್ಯಾನವನದಲ್ಲಿ ರಾತ್ರಿ ಧ್ವನಿ ಬೆಳಕಿನ ವಿವರಣೆಯನ್ನು ನೀಡುತ್ತಾರೆ. ಇದಕ್ಕೆ ಟಿಕೆಟ್ ಪಡೆಯಬೇಕು. ಅಮಿತಾಬ್ ಬಚ್ಚನ್ ಅವರ ಶಾರೀರದಲ್ಲಿ ಖಜುರಾಹು ಮಂದಿರಗಳ ಇತಿಹಾಸ ಮತ್ತು ದಂತ ಕಥೆಯ ವಿವರಣೆ ಕೇಳಿಬರುತ್ತದೆ. ತಿಂಗಳ ಬೆಳಕಿನಲ್ಲಿ ನಡುವೆ ಧ್ವನಿ ಬೆಳಕಿನ ಸಂಯೋಜನೆಯಲ್ಲಿ ಇಲ್ಲಿಯ ಒಟ್ಟು ದೃಶ್ಯವನ್ನು ಹಿಡಿದಿಡುತ್ತಾ ಐತಿಹಾಸಿಕ ಮಹತ್ವವನ್ನು ತಿಳಿಸಲಾಗುತ್ತದೆ. ಉದಾಹರಣೆಗೆ, ಕುದುರೆಗಳ ಖುರಪುಟ ಧ್ವನಿ ಕೇಳಿ ಬಂದ ದಿಕ್ಕಿನತ್ತ ನಾವು ಒಮ್ಮೆಲೆ ಬೆಚ್ಚಿ ಕತ್ತು ತಿರುಗಿಸಿ ನೋಡುತ್ತೇವೆ. ಇದು ಮುಗಿದ ಮೇಲೆ ಪ್ರವಾಸಿಗರ ಆಕರ್ಷಣೆಗಾಗಿ ಇರುವ ಮಧ್ಯಪ್ರದೇಶದ ಜನಪದ ನೃತ್ಯವೈಭವವನ್ನು ಆಯೋಜಿಸುತ್ತಾರೆ. ಇದಕ್ಕೂ ಅದೇ ಪ್ರವೇಶ ಟಿಕೇಟು ಸಾಕು.

**ಹನುಮಾನ್ ಭಕ್ತ ಸರ್‌ದಾರ್‌ಜೀ :** ಬ್ರಹ್ಮ ಟೆಂಪಲ್ ನೋಡಲು, ಮುಂಜಾವದ ನಡಿಗೆಯ ನೆಪದಲ್ಲಿ ನಡೆದು ಹೋದೆವು. ದಾರಿಯಲ್ಲಿ ಹನುಮನ ಬೃಹತ್ ಶಿಲಾ ವಿಗ್ರಹ ಕಂಡೆವು. ಕ್ರಿ.ಶ. ೯೨೨ನೆಯ ಈ ಹನುಮಾನ್ ಮಂದಿರದ ಮೂರ್ತಿಯು ೨.೫ ಮೀಟರ್ ಎತ್ತರವಿದೆ. ಚಪ್ಪರದಡಿಯ ದೇವಾಲಯ ಇದು. ಕೆಂಪು ಶೀಷದಿಂದ ಇದರ ಮೈಗೆ ಬಣ್ಣ ಬಳಿಯಲಾಗಿದೆ. ರಕ್ತವರ್ಣನಾಗಿದ್ದ ಹನುಮ. ಇವನನ್ನು ಒಬ್ಬ ಸರ್‌ದಾರ್‌ಜಿ ಮತ್ತು ಇನ್ನೊಬ್ಬ ಯುವಕ ತಿಕ್ಕಿ ತಿಕ್ಕಿ ಮೀಯಿಸಿ ಸ್ವಚ್ಛಗೊಳಿಸುತ್ತಿದ್ದರು. ಎಣ್ಣೆಯ ಜಿಡ್ಡು ಹೋಗಲು ಬೇಕಾದ ವಸ್ತುಗಳೂ ಅವರಲ್ಲಿ ಇದ್ದುವು. ಪ್ರವೇಶ ದ್ವಾರದ ಬಳಿ ೨೫ ಲಕ್ಷದ ಗಾಡಿ ನಿಂತಿತ್ತು, ಆ ಶ್ರೀಮಂತ ಸರ್‌ದಾರ್‌ಜೀ ಹನುಮಂತನ 'ಕರಸೇವೆ' ಮಾಡಿ ತನ್ನ ಭಕ್ತಿಯನ್ನು ಹನುಮನಿಗೆ ತೋರಿಸುವ ರೀತಿ ಅದು. ''ಮೇರಾ ಭಾರತ್ ಮಹಾನ್'' !

**ಬ್ರಹ್ಮ ಟೆಂಪಲ್ :** ಇಡಿಯ ಹಿಂದೂಸ್ಥಾನದಲ್ಲಿ ಬ್ರಹ್ಮನಿಗೆ ಏಕೈಕ ಟೆಂಪಲ್ ಇರುವುದು, ಅದು ಪುಷ್ಕರದಲ್ಲಿ ಮಾತ್ರ ಎನ್ನುತ್ತಾರೆ. ಬಹುಶಃ ಪಿಂಡಪ್ರದಾನ ಮಾಡಬಹುದಾದ ಬ್ರಹ್ಮ ಟೆಂಪಲ್ ಪುಷ್ಕರದಲ್ಲಿ ಮಾತ್ರ. ಬ್ರಹ್ಮ ಟೆಂಪಲ್ ಖಜುರಾಹುನಲ್ಲಿಯೂ ಇದೆ. ದೊಡ್ಡ ಪಾಣಿಪೀಠದ ಮೇಲೆ ದೊಡ್ಡ ಲಿಂಗ ಇದೆ. ಅದು ನಾಲ್ಕು ಮುಖಗಳನ್ನು ಹೊಂದಿದೆ. ಕಿರೀಟ ಇರುವ ಬ್ರಹ್ಮನ ನಾಲ್ಕೂ ಮುಖಗಳನ್ನು ಭುಜ ಮತ್ತು ಎದೆಯ ಭಾಗದವರೆಗೆ ಲಿಂಗದ ನಾಲ್ಕು ದಿಕ್ಕುಗಳಲ್ಲಿ ಮೂಡಿಸಲಾಗಿದೆ. ಕೂದಲು ಇಳಿಬಿಟ್ಟ ಬ್ರಹ್ಮನಿಗೆ ಕತ್ತಿನಲ್ಲಿ ನೆಕ್‌ಲೇಸ್ ಮಾದರಿಯ ಒಡವೆ ಇದೆ. ಈ ಭಾಗದ ಪುರುಷರು ಕಟ್ಟುವ ಪೇಟಾದಂತೆ ಕಾಣುವ ಪಗೋಡಾ ಮಾದರಿಯ ಕಿರೀಟ ಇದೆ. ಬ್ರಹ್ಮನ ತಲೆಯನ್ನು ಮೀರಿ ಲಿಂಗ ಸುಮಾರು ಒಂದಡಿ ಬೆಳೆದಿದೆ. ಶಿವಲಿಂಗದಲ್ಲಿ ಶಿವನ ಶಿಲ್ಪವನ್ನು ಕೆತ್ತಿದಂತೆ ಭಾಸವಾಗುತ್ತದೆ. ಲಿಂಟಲ್‌ನಲ್ಲಿ ವಿಷ್ಣುವಿನ ಶಿಲ್ಪ ಇದೆ. ಖಜುರಾಸಾಗರ ಸರೋವರದ ದಂಡೆಯ ಮೇಲೆ ಪೂರ್ವಕ್ಕೆ ಈ ಏಕ ಗೋಪುರದ ಮಂದಿರ ಇದೆ. ಗರ್ಭಗುಡಿ ಮಾತ್ರ ಇರುವ ಈ ದೇವಾಲಯದ ನಾಲ್ಕು ಸುತ್ತಲಿನ ಕಿಟಕಿಯಿಂದ ಬ್ರಹ್ಮ ಲಿಂಗವನ್ನು ವೀಕ್ಷಿಸಬಹುದು. ಗುಡಿಗೆ ಬೀಗ ಹಾಕಿದ್ದರೂ ನಮಗೆ ನೋಡಲು ಸಾಧ್ಯವಾಯಿತು. ಪ್ರವೇಶ ದ್ವಾರದಲ್ಲಿ ಗಂಗಾ ಯಮುನರ ಶಿಲ್ಪಗಳಿವೆ. ಗ್ರಾನೈಟ್ ಶಿಲೆಯಿಂದ ರಚಿಸಿದ ಈ ಗೋಪುರದ ಶಿಖರವು ಮರಳು ಶಿಲೆಯದ್ದು. ಇದು ಜೈನ ದೇವಾಲಯಗಳಿಗೆ ಹೋಗುವ ಹಳ್ಳಿಯ ದಾರಿಯಲ್ಲಿ ಇದೆ. ಖಜುರಾಹುನಲ್ಲಿ ಇರುವ ಇತರ ದೇವಾಲಯಗಳಂತೆ ಇಲ್ಲಿ ಮಿಥುನ ಶಿಲ್ಪಗಳು ಕಂಡುಬರಲಿಲ್ಲ. ಆಕರ್ಷಕ ವಾಸ್ತುಶೈಲಿಯನ್ನು ಹೊಂದಿಲ್ಲ. ಸಾಮಾನ್ಯ ಮಂದಿರ ಇದು. ಈ ದೇವಸ್ಥಾನ ನೋಡಲು ನಡೆದು ಬರುವಾಗ ಖಜುರಸಾಗರದ ಬಯಲು ಪಾಯಿಖಾನೆ ಮತ್ತು ಮರಗಳಡಿ ಕುಳಿತ ಬಯಲು ಪಾಯಿಖಾನೆಯ ಪರದಾಧಾರಿ ಮಹಿಳೆಯರು ಕಣ್ಣಿಗೆ ಬಿದ್ದರು. ಮರಳುವಾಗ ಹಳ್ಳಿಯ ಕುಂಬಾರನ ಮಡಕೆ ಬೇಯಿಸುವ ಗುಂಡಿಯ ಫೋಟೋ ತೆಗೆದೆ. ಕ್ಯಾಮಾರಾ ಎತ್ತಿ ಹಿಡಿದಾಗ, ಅಲ್ಲಿದ್ದವ, ''ಫೋಟೋ ತೆಗೆಯಲಡ್ಡಿಯೇನಿಲ್ಲ, ಆದರೆ ಹಣ ನೀಡಬೇಕು'', ಎಂದ. ಫೋಟೋ ಕ್ಲಿಕ್ಕಿಸಿ ಅವನ ಮಾತಿನಂತೆ ನಡೆದೆ.

**ಡಾ|| ಇಂದಿರಾ ಹೆಗ್ಗಡೆ**
ನಂ. ೬, ಕೃಷ್ಣಾ ರೆಸಿಡೆನ್ಸಿ, ೪ನೇ ಅಡ್ಡರಸ್ತೆ, ಅಮರಜ್ಯೋತಿನಗರ
ವಿಜಯನಗರ ಬೆಂಗಳೂರು - ೫೬೦ ೦೪೦





# ಲಿಬಿಯ : ಪಶ್ಚಿಮ ರಾಷ್ಟ್ರಗಳ ಅನಗತ್ಯ ಹಸ್ತಕ್ಷೇಪ

ಪಶ್ಚಿಮ ಏಶಿಯಾದ ದೇಶಗಳಲ್ಲಿ ಬಿರುಗಾಳಿಯಂತೆ ಬೀಸುತ್ತಿರುವ ಪ್ರತಿಭಟನೆ ಸರ್ವಾಧಿಕಾರಿ ಆಡಳಿತಗಳನ್ನು ತಲ್ಲಣಗೊಳಿಸಿದೆ. ಅದೇ ಸಮಯದಲ್ಲಿ ಅದು ಪಶ್ಚಿಮ ರಾಷ್ಟ್ರಗಳ ವಸಾಹತುಶಾಹಿಯ ಇನ್ನೊಂದು ಮುಖವನ್ನು ತೋರಿಸುತ್ತಿದೆ. ಇಪ್ಪತ್ತನೆಯ ಶತಮಾನ ನಿರ್ವಸಾಹತೀಕರಣವನ್ನು ಕಂಡಿತಾದರೆ, ಇಪ್ಪತ್ತೊಂದನೆಯ ಶತಮಾನ ವಸಾಹತುಶಾಹಿಯ ಪುನರವತಾರವನ್ನು ತೋರುತ್ತಿದೆ ಎನ್ನುವ ಅನುಮಾನ ಬರುತ್ತಿದೆ. ಆದರೆ ಇದು ಹಳೆಯ ವಸಾಹತು ಆಡಳಿತಕ್ಕಿಂತ ಭಿನ್ನ. ನೇರವಾಗಿ ಆಡಳಿತ ನಡೆಸಿ ಶೋಷಣೆ ಮಾಡುವ ಬದಲು ಕೈಗೊಂಬೆ ಸರಕಾರ ಸ್ಥಾಪಿಸಿ ದುರಾಕ್ರಮಣವನ್ನು ಮುಂದುವರಿಸುವ ಹುನ್ನಾರ. ಆಫ್ಘಾನಿಸ್ತಾನ, ಇರಾಕ್ ಅದಕ್ಕೆ ತಕ್ಕ ಉದಾಹರಣೆ. ಈಗ ಸರದಿ ಲಿಬಿಯಾದ್ದು. ಮುಂದೆ ಸಿರಿಯಾಗೆ ವಿಸ್ತರಿಸುವ ಸೂಚನೆ ಕಾಣುತ್ತಿದ್ದೇವೆ.

ಟ್ಯೂನೀಷಿಯ ಮತ್ತು ಈಜಿಪ್ಟ್‌ಗಳಲ್ಲಿ ಭುಗಿಲೆದ್ದ ಜನಾಂದೋಳನ ಪಶ್ಚಿಮ ಏಶಿಯದ ಇತರ ಕಡೆಗಳಿಗೂ ಹಬ್ಬಿದೆ. ಲಿಬಿಯ, ಬಹ್ರೇನ್, ಯೆಮೆನ್, ಓಮಾನ್, ಮೊರಾಕ್ಕೊ ಮತ್ತು ಸೌದಿ ಅರೇಬಿಯದಲ್ಲೂ ಅದು ಪ್ರತಿಧ್ವನಿಸಿದೆ. ಬಹ್ರೇನ್ ಮತ್ತು ಯೆಮೆನ್‌ಗಳಲ್ಲಿ ನಡೆದ ಕ್ರೂರ ದಬ್ಬಾಳಿಕೆಯ ವರದಿಗಳು ಗಾಬರಿ ಹುಟ್ಟಿಸುತ್ತವೆ. ಸೌದಿ ಅರೇಬಿಯದ ಸೇನೆಗಳು ಕ್ರೌರ್ಯ ಪ್ರದರ್ಶನಕ್ಕೆ ಸಿದ್ಧವಾಗಿವೆ. ಸರ್ವಾಧಿಕಾರಿ ಆಡಳಿತಗಳ ವಿರುದ್ಧ ಬೇಸತ್ತ ಈ ಭೂಭಾಗದ ಜನರ ಆಂದೋಳನ ಒಂದು ಹೊಸ ಬೆಳವಣಿಗೆ, ಸ್ವಾಗತಾರ್ಹ. ಆದರೆ ಈ ಸ್ವಯಂಪ್ರೇರಿತ ಪ್ರತಿಭಟನೆ ಗೊತ್ತು ಗುರಿಯಿಲ್ಲದಾಗುತ್ತಿದೆ ಎನ್ನುವ ಕಾತುರವಿದೆ. ಏಕೆಂದರೆ, ಇದರಲ್ಲಿ ಮೂಲಭೂತವಾದಿಗಳು, ಸುನ್ನಿ ಷಿಯಾ ವೈಮನಸ್ಯಗಳು, ಬುಡಕಟ್ಟು ಜನಾಂಗಗಳ ವೈಷಮ್ಯ ಒಂದು ಕಡೆಯಾದರೆ, ಇನ್ನೊಂದು ಕಡೆ ಪಶ್ಚಿಮ ರಾಷ್ಟ್ರಗಳು ಈ ಸಂದರ್ಭವನ್ನು ಬಳಸಿಕೊಳ್ಳಲು ಹವಣಿಸುತ್ತಿರುವುದನ್ನು ನಾವು ಕಾಣಬಹುದು. ಲಿಬಿಯಾದಲ್ಲಿ ಇದು ಎದ್ದು ಕಾಣುತ್ತಿದೆ.

ಅಧಿಕಾರ ತ್ಯಜಿಸಲು ನಿರಾಕರಿಸಿರುವ ಗಡಾಫಿಗೆ ಲಿಬಿಯಾದ ಸೇನೆ ಬೆಂಬಲವಾಗಿದೆ. ಅಂತರ್ಯುದ್ಧದ ಪರಿಸ್ಥಿತಿ ಇರುವ ಈ ದೇಶದಲ್ಲಿ ಒಮ್ಮೆ ಗಡಾಫಿ ಸೇನೆ ಮೇಲುಗೈ ಸಾಧಿಸಿದರೆ, ಇನ್ನೊಮ್ಮೆ ಪ್ರತಿಭಟನಾಕಾರರು ಮುನ್ನಡೆ ಸಾಧಿಸುತ್ತಿದ್ದಾರೆ. ಈ ಮಧ್ಯೆ ಅಮೆರಿಕ ಮತ್ತು ಪಶ್ಚಿಮದ 'ನ್ಯಾಟೋ' ರಾಷ್ಟ್ರಗಳು ಬಾಂಬು ದಾಳಿ ನಡೆಸಿವೆ. ಲಿಬಿಯಾದ ಸೇನೆಯ ವಾಯುಪಡೆಯನ್ನು ನಿಷ್ಕ್ರಿಯಗೊಳಿಸುವುದು ಉದ್ದೇಶ. ಅದಕ್ಕೆ ಮಾಡಿರುವ ನಾಮಕರಣ 'ಹಾರಾಟಮುಕ್ತ ವಲಯ'. ಈ ಜಂಜಾಟದಲ್ಲಿ ಪರಿತಪಿಸುತ್ತಿರುವವರು, ಸಾವುನೋವುಗಳಿಗೀಡಾಗಿರುವವರು ಜನಸಾಮಾನ್ಯರು. ಇದಕ್ಕೆ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಸಮ್ಮತಿ. ಲಿಬಿಯಾದಲ್ಲಿ ಸರ್ವಾಧಿಕಾರಿ ಗಡಾಫಿ ವಿರುದ್ಧ ಹೋರಾಟ ಪ್ರಾರಂಭವಾಗುತ್ತಿದ್ದಂತೆಯೇ ಪಶ್ಚಿಮ ರಾಷ್ಟ್ರಗಳಲ್ಲಿ ಆತಂಕ ಶುರುವಾಯಿತು. ಅಮೆರಿಕ ಗಡಾಫಿಯನ್ನು ಅಧಿಕಾರದಿಂದ ಕಿತ್ತುಹಾಕಿ ತಮಗೆ ಅನುಕೂಲವಾಗಿರುವ ಆಡಳಿತ ಸ್ಥಾಪಿಸಲು ಸಿದ್ಧತೆ ನಡೆಸಿತು. ಈ ವಿಷಯದಲ್ಲಿ ಬರಾಕ್ ಒಬಾಮ ಜಾರ್ಜ್ ಬುಷ್‌ಅನ್ನು ಹಿಂದೆ ಹಾಕಿದ್ದಾರೆ. ಲಿಬಿಯಾದ ಪ್ರಾಂತ ಬೆಂಗಾಜಿಯಲ್ಲಿ ಸಿಐಎ ಕೈವಾಡ ಇರುವುದು ಈಗ ಬಹಿರಂಗಗೊಂಡಿದೆ. ಈ ಪ್ರದೇಶ ಪ್ರತಿಭಟನಾಕಾರರ ವಶದಲ್ಲಿದ್ದುದನ್ನು ಗಮನಿಸಬೇಕು. ವಿಶ್ವಸಂಸ್ಥೆಯ ಅಂಗೀಕಾರವಿರಲಿ ಬಿಡಲಿ ಪಶ್ಚಿಮ ರಾಷ್ಟ್ರಗಳು ಮಧ್ಯೆ ಪ್ರವೇಶಿಸುವುದು ಖಚಿತವಾಗಿತ್ತು. ಈ ಸಲ ಅಮೆರಿಕಾಗೆ ಬೆಂಬಲವಾಗಿ ನಿಂತಿರುವುದು ಫ್ರಾನ್ಸ್‌ನ ಅಧ್ಯಕ್ಷ ನಿಕೊಲಾಸ್ ಸಾರ್ಕೋಜಿ. ಇದಕ್ಕೆ ಕಾರಣ ಗಡಾಫಿ ಫ್ರೆಂಚ್ ರಫೇಲ್ ಫೈಟರ್ ಜೆಟ್ ವಿಮಾನಗಳನ್ನು ಖರೀದಿಸಲು ನಿರಾಕರಿಸಿದ್ದು. ಒಂದು ಸಂದರ್ಭದಲ್ಲಿ ಫ್ರಾನ್ಸ್ ಮತ್ತು ಬ್ರಿಟನ್‌ಗಳು ಗಡಾಫಿ ಆಡಳಿತವನ್ನು ಮುಗಿಸಿಬಿಡಲು ಹವಣಿಸಿದ್ದುವು. ಈಗ ಅದು ಕೂಡಿಬಂದಿದೆ. ಗಡಾಫಿಯನ್ನು ಅಧಿಕಾರದಿಂದ ಇಳಿಸುವುದು ಈಗ ಅಮೆರಿಕದ ಏಕೈಕ ಗುರಿಯಾಗಿದೆ.

ಲಿಬಿಯಾದ ಮೇಲೆ ಬಾಂಬು ದಾಳಿ ನಡೆದಿರುವುದನ್ನು ಖಂಡಿಸುತ್ತಿರುವ ರಷ್ಯಾ, ಚೀಣಾಗಳು ಭದ್ರತಾಮಂಡಳಿಯಲ್ಲಿ ಈ ಬಗ್ಗೆ ನಿರ್ಣಯ ಮಂಡನೆಯಾದಾಗ ಮೌನವಾಗಿದ್ದುದೇಕೆ ? ಈ ಎರಡು ರಾಷ್ಟ್ರಗಳು ವೀಟೋ ಅಧಿಕಾರವನ್ನು ಹೊಂದಿವೆ. ನಿರ್ಣಯ ವಿರೋಧಿಸಿ ವೀಟೋ ಚಲಾಯಿಸಿದ್ದರೆ ಬಾಂಬು ದಾಳಿಯ ದುರ್ಘಟನೆಯನ್ನು ತಡೆಯಬಹುದಾಗಿತ್ತು. ಏಕೆಂದರೆ ಮೊದಲನೇ ದಿನವೇ ಅಮೆರಿಕದ ಬಿ-೨ ಬಾಂಬರುಗಳು ಲಿಬಿಯದ ಮೇಲೆ ೧೦೦೦ ಕೆ. ಜಿ. ತೂಕದ ನಲವತ್ತೈದು ಬಾಂಬುಗಳನ್ನು ಸುರಿಸಿದವು ಮತ್ತು ೧೧೦ ಟಾಮೊಹಾಕ್ ಕ್ಷಿಪಣಿಗಳಿಂದ ದಾಳಿ ನಡೆಸಿದುವು. ಯಾವುದೇ ಸಮಯದಲ್ಲಿ 'ನ್ಯಾಟೋ' ಪಡೆಗಳು ಲಿಬಿಯಾದ ಆಕ್ರಮಣಕ್ಕೆ ಸೇನೆ ರವಾನಿಸಲು ಸಾಧ್ಯತೆಗಳಿವೆ. ಈ ರಾಷ್ಟ್ರಗಳು ಇಷ್ಟೆಲ್ಲ ನಡೆಸುತ್ತಿರುವುದು 'ನಾಗರಿಕರ ರಕ್ಷಣೆ'ಯ ಹೆಸರಿನಲ್ಲಿ. ಗಡಾಫಿ ಸೇನೆಯ ದಬ್ಬಾಳಿಕೆಯಿಂದ ಜನಸಾಮಾನ್ಯರನ್ನು ಕಾಪಾಡುವುದಕ್ಕಾಗಿ. ಹಾಗಿದ್ದರೆ, ಬಹ್ರೇನ್, ಯೆಮೆನ್‌ಗಳಲ್ಲಿ ದಬ್ಬಾಳಿಕೆ ನಡೆಯುತ್ತಿದ್ದಾಗ ಪಶ್ಚಿಮ ರಾಷ್ಟ್ರಗಳು ಸುಮ್ಮನಿದ್ದುದು ಏಕೆ ? ಹಾಗೆಯೇ ಐವರಿಕೋಸ್ಟ್‌ನಲ್ಲಿ ನಡೆದ ಹತ್ಯಾಕಾಂಡದ ಪರಿಣಾಮವಾಗಿ ಲಕ್ಷಾಂತರ ಜನ ವಲಸೆ ಹೋದಾಗ ಈ ರಾಷ್ಟ್ರಗಳು ಚಕಾರ ಎತ್ತಲಿಲ್ಲ. ಎರಡು ವರ್ಷಗಳ ಹಿಂದೆ ಗಾಜ಼ಾ ಪಟ್ಟಿ ಪ್ರದೇಶದಲ್ಲಿ ಸಾವಿರಾರು ಪ್ಯಾಲಸ್ತೀನಿಯನ್ನರನ್ನು ಕಗ್ಗೊಲೆ ಮಾಡಿದ ಇಸ್ರೇಲಿಗೆ ರಕ್ಷಣೆ ನೀಡಿದ್ದು ಪಶ್ಚಿಮ ರಾಷ್ಟ್ರಗಳು ತಾನೆ ? ಈಗ ಎಲ್ಲಿಲ್ಲದ ಅನುಕಂಪ ಲಿಬಿಯದ ಜನರ ಬಗ್ಗೆ.

ಪಶ್ಚಿಮ ಏಶಿಯಾ ಯಾವತ್ತೂ ಪಶ್ಚಿಮ ರಾಷ್ಟ್ರಗಳ ಆಡುಂಬೊಲ. ಅಲ್ಲಿರುವ ತೈಲ ಸಂಪತ್ತು ಅವರ ಹಿಡಿತದಿಂದ ಜಾರಿಹೋಗದಂತೆ ನೋಡಿಕೊಳ್ಳುವುದೀಗ ಮುಖ್ಯ ಗುರಿ. ಆ ಉದ್ದೇಶ ಸಾಧನೆಗಾಗಿಯೇ ಇರಾಕನ್ನು ಆಕ್ರಮಿಸಿಕೊಂಡಿದ್ದು. ಇರಾನಿನ ಮೇಲೆ ಕತ್ತಿ ಮಸೆಯುತ್ತಿರುವುದು. ಸಿರಿಯಾದಲ್ಲಿ ಮಧ್ಯೆ ಪ್ರವೇಶಿಸಲು ಹೊಂಚು ಹಾಕುತ್ತಿರುವುದು. ಪರಿವರ್ತನೆಯ ಹಾದಿಯಲ್ಲಿರುವ ಪಶ್ಚಿಮ ಏಶಿಯಾದ ಪ್ರದೇಶದಲ್ಲಿ ಮರು ಹೊಂದಾಣಿಕೆ ಯಾವ ದಿಶೆಯಲ್ಲಿ ಸಾಗುವುದೆಂಬುದನ್ನು ಈಗಲೇ ಖಚಿತವಾಗಿ ಹೇಳುವಂತಿಲ್ಲ. ಪ್ರಜಾಪ್ರಭುತ್ವದಲ್ಲಿ ಆಸಕ್ತಿ ಇರುವ ಶಕ್ತಿಗಳೂ ಒಕ್ಕೊರಲಿನಿಂದ ಈ ಪ್ರದೇಶದಲ್ಲಿ ಪಶ್ಚಿಮ ರಾಷ್ಟ್ರಗಳ ಹಸ್ತಕ್ಷೇಪದ ನೀತಿಯನ್ನು ವಿರೋಧಿಸಬೇಕಾಗಿದೆ, ಖಂಡಿಸಬೇಕಾಗಿದೆ.

**ಇನ್ನೂ ಪಾಠ ಕಲಿಯದ ಅಮೆರಿಕ**

* ಇಪ್ಪತ್ತು ವರ್ಷಗಳ ಕಾಲ ವಿಯೆತ್ನಾಮಿನಲ್ಲಿ ಹಸ್ತಕ್ಷೇಪ ಮಾಡಿ ಪರಮಾಣು ಬಾಂಬು ಒಂದನ್ನು ಬಿಟ್ಟು ತನ್ನ ಬಳಿ ಇದ್ದ ಎಲ್ಲ ಮಾರಕಾಸ್ತ್ರಗಳನ್ನು ಬಳಸಿ ಜನಜೀವನವನ್ನು ದುರ್ಭರಗೊಳಿಸಿದ ಅಮೆರಿಕ ಕಡೆಗೆ ಸೋಲನ್ನುಂಡು ಹಿಮ್ಮೆಟ್ಟಬೇಕಾಯಿತು. ಇದು ಇಪ್ಪತ್ತನೆಯ ಶತಮಾನದ ಒಂದು ದಾಖಲೆ. ಕಡೆಗೂ ಜಯ ಲಭಿಸಿದ್ದು ಸ್ವಾತಂತ್ರ್ಯಪ್ರಿಯ ವಿಯೆಟ್ನಾಮೀಯರಿಗೆ.

* ಈ ಶತಮಾನದ ಆರಂಭದಲ್ಲೇ ಆಫ್ಘಾನಿಸ್ತಾನ ಅಮೆರಿಕದ ಯುದ್ಧ ದಾಹಕ್ಕೆ ಬಲಿಯಾಯಿತು. ಆ ದೇಶವನ್ನು ಆಕ್ರಮಿಸಿಕೊಂಡು ಹತ್ತು ವರ್ಷಗಳ ಮೇಲಾಯಿತು. ಆದರೂ ಇನ್ನೂ ಯುದ್ಧ ಮುಗಿದಿಲ್ಲ. ಕೈಗೊಂಬೆ ಸರಕಾರ ಒಂದು ಅಸ್ತಿತ್ವದಲ್ಲಿದೆ. ಆದರೆ ರಾಜಧಾನಿ ಕಾಬೂಲಿನ ಆಚೆ ಅದರ ಅಧಿಕಾರ ಶಿಥಿಲ. ಸರಕಾರಿ ವಿರೋಧಿ ತಾಲಿಬಾನ್ ಮತ್ತು ಅಲ್‌ಖೈದಾ ಇನ್ನು ಕ್ರಿಯಾಶೀಲವಾಗಿವೆ. ದೇಶದ ಬಹುಭಾಗದಲ್ಲಿ ಪ್ರಭಾವಶಾಲಿಯಾಗಿವೆ. ಸಾಕಷ್ಟು ಮಂದಿ ಅಮೆರಿಕದ ಯೋಧರು ಅಸುನೀಗಿದ್ದಾರೆ. ೨೦೧೦ ಒಂದು ವರ್ಷದಲ್ಲೇ ೭೦೧ ಮಂದಿ ವಿದೇಶೀ ಯೋಧರು ಸಾವಿಗೀಡಾಗಿದ್ದಾರೆ. ಇದರ ಪೈಕಿ ಅಮೆರಿಕನ್ ಯೋಧರ ಸಂಖ್ಯೆ ೪೯೨. ಇದು ಅಧಿಕೃತವಾಗಿ ಪ್ರಕಟವಾಗಿರುವ ಸಂಖ್ಯೆ.

* ಇರಾಕಿನಲ್ಲಿ ಪರಿಸ್ಥಿತಿ ಭಿನ್ನವಾಗೇನಿಲ್ಲ. ಅಲ್ಲಿಯೂ ಅಮೆರಿಕನ್ ಯೋಧರು ಸಾಕಷ್ಟು ಸಂಖ್ಯೆಯಲ್ಲಿ ಸಾವಿಗೀಡಾಗಿದ್ದಾರೆ. ವರ್ಷಗಳು ಉರುಳಿದರೂ ಪರೋಕ್ಷ ಯುದ್ಧ ಈ ದೇಶದಲ್ಲಿ ಮುಂದುವರಿಯುತ್ತಿದೆ. ಇನ್ನೆಷ್ಟು ದಿನ ಈ ಆಕ್ರಮಣ ಮುಂದುವರಿಯುವುದು !

**ಸೀಯಾರ್ಕೆ**

'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಅಂತರಿಕ್ಷದಲ್ಲಿ 'ಜೀವ'ದ ಅಡುಗೆಮನೆ

ಜೀವವಿಕಾಸದ ಇತಿಹಾಸವನ್ನು ಅಧ್ಯಯನ ಮಾಡುವ ವಿಜ್ಞಾನಿಗಳು 'ಬೃಹತ್ ಜೀವವೃಕ್ಷ'ವೊಂದನ್ನು ಸಿದ್ಧಪಡಿಸಿದ್ದಾರೆ. ರೆಂಬೆ, ಕೊಂಬೆ, ಕಾಂಡಗಳಿಂದ ಕೂಡಿದ ಈ ಬೃಹತ್ ವೃಕ್ಷ ನಾಲ್ಕು ಬಿಲಿಯನ್ ವರ್ಷ ಹಳೆಯದು. ನಾಲ್ಕು ಬಿಲಿಯನ್ ವರ್ಷಗಳ ಹಿಂದೆ ಬದುಕಿದ್ದ ಆದಿಮ ಸೂಕ್ಷ್ಮಾಣು ಏಕಕೋಶಜೀವಿಯಿಂದ ಹಂತಹಂತವಾಗಿ ಜೀವಿಗಳು ಹೇಗೆ ವಿಕಾಸವಾಗುತ್ತಾ, ನಿರ್ಮಾಣವಾಗುತ್ತಾ ಬಂದಿವೆ ಎಂಬುದನ್ನು ಈ ವೃಕ್ಷ ತಿಳಿಸುತ್ತದೆ. ಮಾನವನನ್ನೊಳಗೊಂಡಂತೆ ಈಗ ಬದುಕಿರುವ ಮತ್ತು ಅಳಿದು ಹೋಗಿರುವ ಎಲ್ಲಾ ಜೀವಿಗಳ ಇತಿಹಾಸವನ್ನೂ, ಅವುಗಳು ವಿಕಾಸವಾದ ಬಗೆಯನ್ನೂ ಈ 'ಜೀವವೃಕ್ಷ' ತಿಳಿಸುತ್ತದೆ. ಆದರೆ ಒಂದು ವಿಷಯ ಮಾತ್ರ ಜೀವವಿಕಾಸದ ವಿಜ್ಞಾನಿಗಳನ್ನು ನಿರಂತರವಾಗಿ ಕಾಡುತ್ತಿದೆ. ಜೀವವಿಕಾಸದ ಗತ ಇತಿಹಾಸದಲ್ಲಿ ಹಿಂದೆ ಪ್ರಯಾಣ ಬೆಳೆಸಿದಂತೆ, ನಮ್ಮ ಪೂರ್ವಜರೆನಿಸಿಕೊಂಡ ಜೀವಿಗಳು ಸರಳವಾಗುತ್ತಾ ಹೋಗಬೇಕು. ಸರಳ, ಏಕಾಣು ಕೋಶಜೀವಿಗಳಿಂದ ಈಗಿನ ಬಹುಕೋಶಿ, ಸಂಕೀರ್ಣ ಜೀವಿಗಳಾದ ಆನೆ, ತಿಮಿಂಗಿಲ, ಮಾನವರು ವಿಕಾಸವಾಗಿದ್ದಾರೆ ಎನ್ನುವುದು ಜನರ ಸಾಮಾನ್ಯ ಕಲ್ಪನೆ. ಆದರೆ ಜೀವವಿಕಾಸ ಹೀಗೆ ನಡೆದಿಲ್ಲ. ಆನೆ, ಮೊಸಳೆ, ಮೊದಲಾದ ಆಧುನಿಕ ಜೀವಿಗಳು ಗಾತ್ರದಲ್ಲಷ್ಟೇ ಆದಿಮ ಬ್ಯಾಕ್ಟೀರಿಯಗಳಿಗಿಂತ ದೊಡ್ಡವು. ಆದರೆ ಅವುಗಳ ಜೀವಕೋಶಗಳು ಮತ್ತು ಅದರೊಳಗಿನ ಜೀವರಾಸಾಯನಿಕ ಕ್ರಿಯೆಗಳು ಬ್ಯಾಕ್ಟೀರಿಯಗಳನ್ನೇ ಬಹುತೇಕ ಹೋಲುತ್ತವೆ. ಭೂಮಿಯ ಅತಿ ಪ್ರಾಚೀನವೆನಿಸಬಹುದಾದ ಏಕಾಣು ಜೀವಿಯೂ ಕೂಡ ನಮ್ಮಷ್ಟೇ ಸಂಕೀರ್ಣವಾದ ಜೀವರಾಸಾಯನಿಕ ಕ್ರಿಯೆಯನ್ನು ಹೊಂದಿದೆ. ಎಲ್ಲಾ ಜೀವಿಗಳಲ್ಲಿ ಕಂಡುಬರುವ ಮೂರು ಸಾಮಾನ್ಯ ಅಂಶಗಳನ್ನು ಗಮನಿಸಬಹುದು. ಏಕಕೋಶ ಜೀವಿಗಳಾಗಲೀ ಅಥವಾ ಬೃಹತ್ ಬಹುಕೋಶ ಜೀವಿಗಳಾಗಲೀ ಅವುಗಳ ಜೀವಕೋಶಗಳು ಮಾತ್ರ ಡಿ.ಎನ್.ಎ ಮತ್ತು ಪ್ರೋಟೀನ್‌ಗಳಿಂದ ರಚಿತವಾಗಿವೆ. ಇವುಗಳು ಕ್ರಮವಾಗಿ ನ್ಯೂಕ್ಲಿಕ್ ಆಮ್ಲ ಮತ್ತು ಅಮೈನೋ ಆಮ್ಲ ಎಂಬ ಮೂಲ ದ್ರವ್ಯಗಳಿಂದ ರಚಿತವಾಗಿವೆ. ಡಿ.ಎನ್.ಎ ಜೀವಕೋಶದ ನಿರ್ದೇಶಕ. ಅಲ್ಲಿ ಏನು ಕೆಲಸಗಳಾಗಬೇಕು ಎಂಬುದನ್ನು ಸೂಚಿಸುತ್ತದೆ. ಈ ಸೂಚನೆಯನ್ನು ಪಾಲಿಸಿ ಪ್ರೋಟೀನ್‌ಗಳು ಜೀವಕೋಶದ ಉಳಿದೆಲ್ಲಾ ಕೆಲಸಗಳನ್ನೂ ನಿರ್ವಹಿಸುತ್ತವೆ. ಪ್ರೋಟೀನ್ ಮತ್ತು ಡಿ.ಎನ್.ಎ.ಗಳು ಹೊರಗಿನ ವಾತಾವರಣದಿಂದ ಘಾಸಿಗೊಳಗಾಗದಂತೆ, ಅವುಗಳಿಗೆ, ಅವುಗಳ ಸುತ್ತ ಕೋಟೆಯಂತಹ ಕೋಶಭಿತ್ತಿ ರಕ್ಷಣೆಯಿರುತ್ತದೆ. ಮೂರೂವರೆ ಬಿಲಿಯನ್ ವರ್ಷದ ಹಿಂದಿನ ಜೀವಿಯೂ ಪ್ರೋಟೀನ್, ಡಿ.ಎನ್.ಎ. ಮತ್ತು ಕೋಶಭಿತ್ತಿಗಳನ್ನು ಹೊಂದಿದ ಸಂಕೀರ್ಣ ಜೀವಿಯಾಗಿದೆ.



ಪ್ರೋಟೀನ್ ಮತ್ತು ಡಿ.ಎನ್.ಎ., ಎರಡೂ ದೊಡ್ಡ ಗಾತ್ರದ ಅಣುಸಂಯೋಜನೆಗಳು. ಪ್ರೋಟೀನ್‌ಗಳು ಇಪ್ಪತ್ತು ವಿಧದ ಅಮೈನೊ ಆಮ್ಲಗಳಿಂದ ರಚಿತವಾಗಿರುತ್ತವೆ. ವಿವಿಧ ಬಗೆಯ ಅಮೈನೋ ಆಮ್ಲಗಳು ಚಾಪೆಯಂತೆ ಹೆಣೆದುಕೊಂಡು, ಮಡಿಕೆಗಳಾಗಿ ಮಡಿಚಿಕೊಂಡು ಪ್ರೋಟೀನ್‌ಗಳಾಗಿರುತ್ತವೆ. ಡಿ.ಎನ್.ಎ ನಾಲ್ಕು ರೀತಿಯ ನ್ಯೂಕ್ಲಿಕ್ ಆಮ್ಲಗಳು, ರೈಬೋಸ್ ಸಕ್ಕರೆ ಮತ್ತು ಫಾಸ್ಫೇಟ್‌ಗಳಿಂದ ಏಣಿಯಾಕಾರದಲ್ಲಿ ರಚನೆಯಾಗಿ, ಮಡಿಕೆಗಳಾಗಿ ಮಡಿಚಿಕೊಂಡಿರುತ್ತವೆ. ಪ್ರೋಟೀನ್ ಮತ್ತು ಡಿ.ಎನ್.ಎ ಇವೆರಡೂ 'ಜೀವಿ'ಗಳು ತಯಾರಿಸಿಕೊಂಡ ರಾಸಾಯನಿಕಗಳು. ಇವು ಪ್ರಕೃತಿಯಲ್ಲಿ ಸ್ವಾಭಾವಿಕವಾಗಿ ಸಿಗಲು ಸಾಧ್ಯವಿಲ್ಲ. ಪ್ರೋಟೀನ್ ಮತ್ತು ಡಿ.ಎನ್.ಎ.ಗಳಿಗೆ ಹೋಲಿಸಿದರೆ ಅಮೈನೊ ಆಮ್ಲ, ನ್ಯೂಕ್ಲಿಕ್ ಆಮ್ಲಗಳು ಸರಳ ರಚನೆಗಳು. ಕೆಲವೊಮ್ಮೆ ಇವು ಸ್ವಾಭಾವಿಕವಾಗಿಯೇ ನಿಸರ್ಗದಲ್ಲಿ ದೊರಕುತ್ತವೆ.

**ಊಟ – ಮನೆಯದೋ, ಹೊರಗಿನದೋ**

ಜೀವದ ಉಗಮವನ್ನು ವಿವರಿಸುವ ಬಹುತೇಕ ವಿಜ್ಞಾನಿಗಳು ಜೀವಸೃಷ್ಟಿಗೆ ಬೇಕಾದ ಅಮೈನೋ ಆಮ್ಲ, ನ್ಯೂಕ್ಲಿಕ್ ಆಮ್ಲ, ಲಿಪಿಡ್‌ಗಳು ಭೂಮಿಯಲ್ಲಿಯೇ

ಎ. ಸುಬ್ರಮಣ್ಯ

**ಜೀವದ ಉಗಮದ ಕುರಿತು ಎರಡು ರೀತಿಯಲ್ಲಿ ವಿವರಿಸಬಹುದು. ಧೂಮಕೇತುವಿನಿಂದ ಬಂದ ಧೂಳು ಮತ್ತು ಅದರ ಆರ್ಗ್ಯಾನಿಕ್ ರಾಸಾಯನಿಕಗಳು ಆದಿಮ ಭೂಮಿಯ ನೀರಿನಲ್ಲಿ ತೇಲುತ್ತಿತ್ತು. ಅಂತಹ ಕೆಲವು ರಾಸಾಯನಿಕಗಳು ಆ ನೀರಿನಲ್ಲೇ ರೂಪುಗೊಂಡಿದ್ದ ಸೂಕ್ಷ್ಮ ಚೀಲಗಳಲ್ಲಿ ಬಂಧಿಯಾಗಿ, ಹೊರಗಿನ ವಾತಾವರಣದಿಂದ ರಕ್ಷಣೆ ಪಡೆದು, ಕಾಲಕ್ರಮೇಣ ಸಂಕೀರ್ಣ ಜೀವ ರಾಸಾಯನಿಕಗಳಾಗಿ ಬದಲಾಗಿ ಜೀವಿಗಳು ಉಗಮಿಸಿರಬಹುದು. ಇದು ಮೊದಲನೆಯ ವಿವರಣೆ. ಎರಡನೆಯ ವಿವರಣೆ ಇನ್ನೂ ಕುತೂಹಲಕರವಾಗಿದೆ. ಧೂಮಕೇತುವಿನ ಗರ್ಭದಲ್ಲಿರುವ ವಿಕಿರಣಶೀಲ ವಸ್ತುಗಳ ಶಾಖದಿಂದ ಅಲ್ಲಿಯೇ ಸೂಕ್ಷ್ಮ ಚೀಲಗಳು ರೂಪುಗೊಂಡಿರುತ್ತವೆ. ಆ ಚೀಲದಲ್ಲಿಯೇ ಆರ್ಗ್ಯಾನಿಕ್ ರಾಸಾಯನಿಕಗಳು ಸೇರಿಕೊಂಡು ಅಲ್ಲಿಯೇ ಮತ್ತಷ್ಟು ಸಂಕೀರ್ಣ ಜೀವ ರಾಸಾಯನಿಕಗಳು ರೂಪುಗೊಳ್ಳುತ್ತಾ ಸಾಗಿರಬಹುದು. ಧೂಮಕೇತುವಿನ ಧೂಳಿನಲ್ಲಿ ಭೂಮಿಯನ್ನು ಸೇರಿದ ಈ ಚೀಲಗಳ ಜೀವರಾಸಾಯನಿಕಗಳಿಂದ ಜೀವದ ಉಗಮವಾಗಿರಬೇಕು.**

ರೂಪುಗೊಂಡಿರಬಹುದು ಎಂದು ಅಭಿಪ್ರಾಯಪಡುತ್ತಾರೆ. ಆದಿಮ ಭೂಮಿಯ ಪ್ರಕ್ಷುಬ್ಧ ವಾತಾವರಣದಲ್ಲಿ ಈ ಸಂಕೀರ್ಣ ರಾಸಾಯನಿಕಗಳು ರೂಪುಗೊಂಡಿರಬಹುದು ಎಂದು ೧೯೨೦ರ ದಶಕದಲ್ಲಿಯೇ ಸೋವಿಯೆತ್ ವಿಜ್ಞಾನಿ ಅಲೆಕ್ಸಾಂಡರ್ ಒಪಾರಿನ್ ಮತ್ತು ಬ್ರಿಟನ್ನಿನ ಜೆ. ಬಿ. ಎಸ್. ಹಾಲ್ಡೇನ್ ಅಭಿಪ್ರಾಯಪಟ್ಟಿದ್ದರು. ೧೯೫೦ರ ದಶಕದಲ್ಲಿ ಹಾರೋಲ್ಡ್ ಉರೇ ಮತ್ತು ಸ್ಟಾನ್ಲೀ ಮಿಲ್ಲರ್ ಆದಿಮ ಭೂಮಿಯಲ್ಲಿ ಇದ್ದಿರಬಹುದಾದ ಅಮೋನಿಯ ಇಂಗಾಲದ ಡಯಾಕ್ಸೈಡ್, ಮೀಥೇನ್ ಮೊದಲಾದ ರಾಸಾಯನಿಕಗಳನ್ನು ಪ್ರಯೋಗಾಲಯದ ಪ್ರನಾಳದಲ್ಲಿಟ್ಟು, ಆದಿಮ ಭೂಮಿಯ ಪ್ರಕ್ಷುಬ್ಧ ವಾತಾವರಣವನ್ನು ಸೃಷ್ಟಿಸಿ, ಹಲವಾರು ಆರ್ಗ್ಯಾನಿಕ್ (ಇಂಗಾಲದ ಸಂಕೀರ್ಣ) ರಾಸಾಯನಿಕಗಳು ರೂಪುಗೊಳ್ಳುವುದನ್ನು ಗಮನಿಸಿದ್ದರು. ಆದರೆ ಸೌರಮಂಡಲದ ಉಗಮದ ಹಿನ್ನೆಲೆಯಲ್ಲಿ ಜೀವದ ಉಗಮವನ್ನು ವಿವರಿಸುವ ವಿಜ್ಞಾನಿಗಳು ಇಷ್ಟು ಸರಳವಾಗಿ ಭೂಮಿಯಲ್ಲಿ 'ಜೀವದ್ರವ್ಯ'ಗಳು ರೂಪುಗೊಂಡಿವೆ ಎನ್ನುವುದನ್ನು ತಳ್ಳಿಹಾಕುತ್ತಾರೆ. ಸೂರ್ಯನ ಉಗಮವಾಗಿ ಐದು ಬಿಲಿಯನ್ (೫,೦೦೦,೦೦೦,೦೦೦) ವರ್ಷಗಳಾಯಿತು.

ನಾಲ್ಕೂವರೆ ಬಿಲಿಯನ್ ವರ್ಷಗಳ ಹಿಂದೆ ರೂಪುಗೊಂಡ ಭೂಮಿ ಈಗಿನಷ್ಟು ಪ್ರಶಾಂತವಾಗಿಯೂ, ಮನಮೋಹಕವಾಗಿಯೂ ಇರಲಿಲ್ಲ. ಆದಿಮ ಸೌರಮಂಡಲದಲ್ಲಿ ಸಂಚರಿಸುತ್ತಿದ್ದ ಅಸಂಖ್ಯಾತ ಉಲ್ಕೆ, ಧೂಮಕೇತುಗಳು ಭೂಮಿಗೆ ಪದೇ ಪದೇ ನುಗ್ಗಿ ಘಾಸಿಗೊಳಿಸುತ್ತಿದ್ದವು. ಒಮ್ಮೊಮ್ಮೆ ಇಂತಹ ದೊಡ್ಡ ಧೂಮಕೇತುವಿನ ದಾಳಿ ನಡೆದಾಗಲೂ ಸಾಗರದ ನೀರು ಸಂಪೂರ್ಣ ಆವಿಯಾಗಿ ತಳದ ಶಿಲೆಗಳೂ ಕೂಡ ಹಲವಾರು ಮೀಟರ್ ಕರಗುತ್ತಿದ್ದವು. ಇಂತಹ ಘೋರ ಘಟನೆಗಳಲ್ಲಿ 'ಜೀವದ್ರವ್ಯ'ಗಳಷ್ಟು ಸಂಕೀರ್ಣ ರಾಸಾಯನಿಕಗಳು ರೂಪುಗೊಳ್ಳಲಾರವು. ಅಕಸ್ಮಾತ್ ಮೊದಲೇ ಇಂತಹ ರಾಸಾಯನಿಕಗಳು ಭೂಮಿಯಲ್ಲಿ ಇದ್ದರೂ, ಧೂಮಕೇತುವಿನ ದಾಳಿಯಲ್ಲಿ ನಾಶವಾಗುತ್ತವೆ ಎಂದು ಈ ವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ಧೂಮಕೇತು, ಉಲ್ಕೆಗಳ ಹಾವಳಿ ಕಡಿಮೆಯಾಗಿ ಭೂಮಿ 'ಶಾಂತ'ವೆನಿಸುವ ಸ್ಥಿತಿಯನ್ನು ೩.೯ ಬಿಲಿಯನ್ ವರ್ಷಗಳ ಹಿಂದೆ ತಲುಪಿತು. ಆದರೆ ಭೂಮಿಯಲ್ಲಿ ೩.೫ ಬಿಲಿಯನ್ ವರ್ಷಗಳಷ್ಟು ಹಿಂದೆಯೇ ಎಲ್ಲಾ ಸಂಕೀರ್ಣ ಜೀವದ್ರವ್ಯಗಳನ್ನು ಬಳಸಿ ರೂಪುಗೊಂಡ 'ಸಯನೋಬ್ಯಾಕ್ಟೀರಿಯಾ' ಜೀವಿಗಳು ಬದುಕಿದ್ದವು. ೩.೮೫ ಬಿಲಿಯನ್ ವರ್ಷಗಳ ಹಿಂದೆಯೇ ಜೀವಿಗಳಿದ್ದವು ಎಂದು ಗ್ರೀನ್‌ಲ್ಯಾಂಡ್‌ನಲ್ಲಿ ದೊರೆತಿರುವ ಸೂಕ್ಷ್ಮ ಪಳೆಯುಳಿಕೆಗಳು ತಿಳಿಸುತ್ತವೆ. ಹಲವೇ ಮಿಲಿಯನ್ ವರ್ಷಗಳಷ್ಟು ಕಡಿಮೆ ಅವಧಿಯಲ್ಲಿ ಇಂತಹ ಸಂಕೀರ್ಣ ಜೀವಿಗಳು ವಿಕಾಸವಾಗಲು ಸಾಧ್ಯವೇ ಇಲ್ಲ ಎಂದು ಈ ವಿಜ್ಞಾನಿಗಳ ಖಚಿತ ನಿಲುವು.

ಹಾಗಾದರೆ ಜೀವದ ಉಗಮಕ್ಕೆ ಬೇಕಾದ ಮೂಲ ಪರಿಕರಗಳು ಮೂಡಿದ್ದಾದರೂ ಹೇಗೆ? ಬಹುಶಃ ಭೂಮಿಗೆ ಹೊರಗಿನಿಂದಲೇ ಈ ಅಮೂಲ್ಯ ಪದಾರ್ಥಗಳು ರವಾನೆಯಾಗಿರಬಹುದೇ? ರವಾನೆಯಾಗಿರಬಹುದು ಎನ್ನುತ್ತಾರೆ ಮತ್ತೊಂದು ಪಂಗಡದ ವಿಜ್ಞಾನಿಗಳು. ಇದನ್ನೇ ಡಿ.ಎನ್.ಎ. ಸಂಶೋಧಕರಲ್ಲೊಬ್ಬರಾದ ಫ್ರಾನ್ಸಿಸ್ ಕ್ರಿಕ್ ಜೀವ ಪರಿಕರಗಳು ಭೂಮಿಗೆ ಸಣ್ಣಸಣ್ಣ ಕಣಗಳಾಗಿ ಉದುರಿರಬಹುದು ಎಂದು ವ್ಯಾಖ್ಯಾನಿಸಿದ್ದರು. ಖ್ಯಾತ ವಿಜ್ಞಾನಿ ಫ್ರೆಡ್ ಹಾಯ್ಲ್ ಧೂಮಕೇತುವಿನ ಒಡಲಲ್ಲೇ ಆದಿಮ ಜೀವಿಗಳು ರೂಪುಗೊಂಡಿರಬಹುದೆಂಬ ಕ್ರಾಂತಿಕಾರಿ ಸಿದ್ಧಾಂತವನ್ನು ಹೊರಹಾಕಿದ್ದರು. ಈ ಕ್ರಾಂತಿಕಾರಿ ಸಿದ್ಧಾಂತಕ್ಕಾಗಿ ಅವರು ನೊಬೆಲ್ ಪಾರಿತೋಷಕವನ್ನೇ ಕಳೆದುಕೊಳ್ಳಬೇಕಾಯಿತು.

**ಧೂಮಕೇತು - ಇತ್ತೀಚಿನ ಅಧ್ಯಯನಗಳು**

ಧೂಮಕೇತುಗಳು ಸಹಸ್ರಾರು ವರ್ಷಗಳಿಂದ ಮಾನವನಲ್ಲಿ ಕುತೂಹಲ, ರೋಮಾಂಚನ, ಭಯ, ಭೀತಿಗಳನ್ನು ಹುಟ್ಟುಹಾಕುತ್ತಲಿವೆ. ಆದರೆ ಇತ್ತೀಚಿನ ವರ್ಷಗಳಲ್ಲಷ್ಟೆ ಧೂಮಕೇತುಗಳ ಬಗ್ಗೆ ವ್ಯಾಪಕವಾದ ಶಾಸ್ತ್ರೀಯ ಅಧ್ಯಯನ ಸಾಧ್ಯವಾಗಿದೆ, ಹಾಗೂ ನಡೆಯುತ್ತಿದೆ. ಧೂಮಕೇತುಗಳು ಸೌರಮಂಡಲದ ಪಳೆಯುಳಿಕೆಗಳು ಎಂದು ಹೇಳಬಹುದು. ಸೌರಮಂಡಲ ವಿಕಾಸವಾದ ತಾರಾ ಮೇಘಗಳಿಂದಲೇ ಧೂಮಕೇತುಗಳೂ ರೂಪುಗೊಂಡಿವೆ. ಸೂರ್ಯನಿಂದ ಒಂದು ಲಕ್ಷ ಖಗೋಳಮಾನ (ಸೂರ್ಯನಿಂದ ಭೂಮಿಯ ದೂರ ಒಂದು ಖಗೋಳಮಾನ)ದಷ್ಟು ಅಗಾಧ ದೂರದಲ್ಲಿ ಇಂತಹ ಕೋಟ್ಯಂತರ ಸಂಖ್ಯೆಯ ಧೂಮಕೇತು ಸಾಗರವೇ ಇದೆ. ಇದನ್ನು 'ಊರ್ಟ್ಸ್ ಮೇಘ' ಎಂದು ಕರೆಯುತ್ತಾರೆ. ೧೯೯೯ರಲ್ಲಿ 'ಬೀಟ ಪಿಕ್ಟೋರಿಸ್' ಎಂಬ ಹೊಸದಾಗಿ ಉದಯಿಸುತ್ತಿರುವ ನಕ್ಷತ್ರದ ಅಧ್ಯಯನ ನಡೆಸಿದ ವಿಜ್ಞಾನಿಗಳು ಆ ನಕ್ಷತ್ರ ಕೂಡ ಊರ್ಟ್ಸ್ ಮೇಘದಂತಹ ಧೂಮಕೇತು ಸಾಗರದಿಂದ ಸುತ್ತುವರೆದಿರುವುದನ್ನು ಗಮನಿಸಿದ್ದಾರೆ. ಕಂಪ್ಯೂಟರ್ ಪ್ರಯೋಗಗಳಲ್ಲಿ ನಕ್ಷತ್ರವಿಕಾಸ ಅಧ್ಯಯನ ಮಾಡುವ ವಿಜ್ಞಾನಿಗಳು ತಿಳಿಸುವಂತೆ ಧೂಮಕೇತುಗಳು ಯಾವುದೇ ಹೊಸ ನಕ್ಷತ್ರ ಉಗಮಿಸುವಾಗ ಅದರ ಭಾಗವಾಗಿಯೇ ಉಗಮಿಸುತ್ತವೆ ಹಾಗೂ ದೂರದಲ್ಲಿ ನಕ್ಷತ್ರವನ್ನು ಸುತ್ತುವರಿದಿರುತ್ತವೆ. ನಕ್ಷತ್ರ ಮತ್ತು ಹತ್ತಿರದ ಗ್ರಹಗಳು ರೂಪುಗೊಳ್ಳುವಾಗ ಉಂಟಾಗುವ ಘರ್ಷಣೆ ಮತ್ತು ಶಾಖ ದೂರದ ಧೂಮಕೇತುಗಳನ್ನು ತಾಕುವುದಿಲ್ಲ. ಧೂಮಕೇತುಗಳು ನಕ್ಷತ್ರ ಉಗಮಿಸುವ ತಾರಾಮೇಘದ ಮೂಲ ರಾಸಾಯನಿಕ ವಸ್ತುಗಳನ್ನೇ ಉಳಿಸಿಕೊಂಡಿರುತ್ತವೆ. ಮಾತೃ ನಕ್ಷತ್ರ ಅಥವಾ ಸಮೀಪದ ಬೇರೆ ನಕ್ಷತ್ರಗಳ ಗುರುತ್ವದ ಸೆಳೆತದಿಂದಾಗಿ ಒಮ್ಮೊಮ್ಮೆ ದೂರದಲ್ಲಿ ನಿಧಾನವಾಗಿ ಸಂಚರಿಸುವ ಇಂತಹ ಧೂಮಕೇತುಗಳು ನಕ್ಷತ್ರಮಂಡಲದ ಒಳಭಾಗದತ್ತ ಡೈವ್ ಹೊಡೆಯುತ್ತವೆ. ಇಂತಹ ಡೈವ್ ಹೊಡೆಯುವ ಧೂಮಕೇತುಗಳು ನಕ್ಷತ್ರದ ಸುತ್ತ ಪ್ರದಕ್ಷಿಣೆ ಹಾಕಿ ಮರೆಯಾಗುತ್ತವೆ ಅಥವಾ ಒಮ್ಮೊಮ್ಮೆ ನಕ್ಷತ್ರ, ಅದರ ಗ್ರಹಗಳ ಗುರುತ್ವದ ಸೆಳೆತಕ್ಕೆ ಸಿಕ್ಕಿ ಅವುಗಳಿಗೆ ಡಿಕ್ಕಿ ಹೊಡೆಯುತ್ತವೆ. ಹೀಗೆ ಡಿಕ್ಕಿ ಹೊಡೆದಾಗ ತನ್ನಲ್ಲಿರುವ ಅಗಾಧ ಪ್ರಮಾಣದ ನೀರಿನ ದಾಸ್ತಾನು, ಆರ್ಗ್ಯಾನಿಕ್ ವಸ್ತುಗಳನ್ನು ಸುರಿಯುತ್ತದೆ. ಭೂಮಿಯ ಸಾಗರಗಳಲ್ಲಿರುವ ನೀರು ಧೂಮಕೇತುಗಳ ಕಾಣಿಕೆ. ಧೂಮಕೇತುಗಳ ಅಧ್ಯಯನದಿಂದ ನಕ್ಷತ್ರ ರೂಪುಗೊಂಡ, ತಾರಾಮೇಘದಲ್ಲಿದ್ದ ಆರ್ಗ್ಯಾನಿಕ್ ವಸ್ತುಗಳ ಸಂಯೋಜನೆಯನ್ನು ತಿಳಿಯಬಹುದು. ಈ ಆರ್ಗ್ಯಾನಿಕ್ ವಸ್ತುಗಳಿಂದಲೇ ಭೂಮಿಯಲ್ಲಿ ಜೀವಸೃಷ್ಟಿಯಾಗಿದೆಯೇ ಎಂದೂ ಕೂಡ ತಿಳಿಯಬಹುದು.

೧೮೬೪ರಲ್ಲಿ ಫ್ರಾನ್ಸ್ ದೇಶದ ಆರ್ಗುಯಿಲ್ ಎಂಬಲ್ಲಿ ಬಿದ್ದ ಧೂಮಕೇತುವಿನ ತುಂಡಿನ ಕುರಿತು ವಿಸ್ತೃತ ರಾಸಾಯನಿಕ ಅಧ್ಯಯನ ಈಗಲೂ ಕೂಡ ನಡೆಯುತ್ತಿದೆ. ಫ್ರಾನ್ಸ್‌ನ ಪ್ರಾಕೃತಿಕ ಇತಿಹಾಸ ಸಂಗ್ರಹಾಲಯದಲ್ಲಿರುವ



## ಕೇಳಿಸಿಕೊಂಡಿಲ್ಲ

ಭಜನೆಯಿದ್ದಲ್ಲಿ
ವಿಭಜನೆಯಿರುವುದಿಲ್ಲ
ಎಂದರು ಸ್ವಾಮಿಗಳು
ಭಜನೆ ಮುಗಿದ ಮೇಲೆ
ಒಳ ಪಂಕ್ತಿಯಲ್ಲಿ ಉಂಡವರು
ತೇಗಿದ್ದು ಮಾತ್ರ
ಕೇಳಿಸಿಕೊಂಡಿಲ್ಲ
ಸ್ವಾಮಿಗಳ ಕಿವಿಗಳು

**ರವಿಶಂಕರ ಒಡ್ಡಂಬೆಟ್ಟು**
ಉಪನ್ಯಾಸಕ, ಸರಕಾರಿ ಪದವಿಪೂರ್ವ ಕಾಲೇಜು
ಕಾವೂರು, ಮಂಗಳೂರು - ೫೭೫ ೦೧೫




ಐವತ್ತೈದು ಕೆಜಿ ಆರ್ಗುಯಿಲ್ ತುಂಡಿನಲ್ಲಿ ಟಾರಿನಂತಹ ವಸ್ತುವಿರುವುದನ್ನು ವಿಜ್ಞಾನಿಗಳು ಪತ್ತೆಹಚ್ಚಿದ್ದಾರೆ. ಈ ಟಾರಿನ ಕುರಿತು ಸೂಕ್ಷ್ಮವಾದ ವಿಶ್ಲೇಷಣಾ ತಂತ್ರಜ್ಞಾನಗಳನ್ನು ಬಳಸಿ ಗಮನಿಸಲಾಗುತ್ತಿದೆ. ಅದರಲ್ಲಿ ಈಗಾಗಲೇ ಅನೇಕ ಆರ್ಗ್ಯಾನಿಕ್ ವಸ್ತುಗಳಿರುವುದು ಕಂಡುಬಂದಿದೆ. ಆಕಾಶದಿಂದ ಭೂಮಿಗೆ ಬೀಳುವ ಉಲ್ಕೆ, ಧೂಮಕೇತುವಿನ ತುಂಡುಗಳು ವಾತಾವರಣದ ಘರ್ಷಣೆಯಿಂದ ಪೂರ್ಣವಾಗಿ ಭಸ್ಮವಾಗದೆ ಭೂಮಿಯನ್ನು ಸೇರಬಲ್ಲವು ಎಂಬುದನ್ನು ಆರ್ಗುಯಿಲ್ ಧೂಮಕೇತುವಿನ ತುಂಡು ನಿರೂಪಿಸಿದೆ.

೧೯೮೬ರಲ್ಲಿ ಸೂರ್ಯನ ಸಮೀಪ ಬಂದಿದ್ದ 'ಹ್ಯಾಲಿ' ಧೂಮಕೇತುವನ್ನು, ಭೂಮಿಯಿಂದ ಹಾರಿಬಿಟ್ಟಿದ್ದ ರಷಿಯಾದ 'ವೇಗ ೧', 'ವೇಗ ೨' ಮತ್ತು ಯೂರೋಪಿಯನ್ ಒಕ್ಕೂಟದ 'ಗಿಯೋಟೊ' ನೌಕೆಗಳು ಸಮೀಪಿಸಿದ್ದುವು. ಅವುಗಳು ಕಳಿಸಿದ ಮಾಹಿತಿಯಿಂದ ಹ್ಯಾಲಿ ಧೂಮಕೇತುವಿನಲ್ಲಿ ಹಲವಾರು ಬಗೆಯ ಇಂಗಾಲದ ರಾಸಾಯನಿಕಗಳು ಇರುವುದು ತಿಳಿಯಿತು. ಇಂಗಾಲದ ರಾಸಾಯನಿಕಗಳು ಮಾತ್ರವಲ್ಲ, ರಂಜಕ, ಸಿಲಿಕಾನ್ ಮೊದಲಾದ ರಾಸಾಯನಿಕಗಳು ಕೂಡ ಕಂಡುಬಂದವು.

'ನ್ಯಾಸಾ'ದವರು ಹಾರಿಬಿಟ್ಟಿದ್ದ 'ಡೀಪ್ ಇಂಪ್ಯಾಕ್ಟ್' ಎಂಬ ಅಂತರಿಕ್ಷ ಶೋಧಕ, ೨೦೦೫ರಲ್ಲಿ 'ಟೆಂಪೆಲ್-೧' ಎಂಬ ಧೂಮಕೇತುವಿಗೆ ಅಪ್ಪಳಿಸಿ ಅದರಲ್ಲಿನ ಧೂಳನ್ನು ಎಬ್ಬಿಸಿತ್ತು. ಈ ಧೂಳನ್ನು ಅಧ್ಯಯನ ನಡೆಸಿದ 'ಸ್ಪಿಟ್ಜರ್' ದೂರದರ್ಶಕ ಭೂಮಿಯಲ್ಲಿರುವ ಹಲವಾರು ರೀತಿಯ ರಾಸಾಯನಿಕಗಳು ಈ ಧೂಳಿನಲ್ಲಿರುವುದನ್ನು ತಿಳಿಸಿದೆ. ಸಿಲಿಕೇಟ್‌ಗಳು, ಕಾರ್ಬೊನೇಟ್‌ಗಳು, ಜೇಡಿಮಣ್ಣಿನಂತಹ ವಸ್ತು, ಕಬ್ಬಿಣದ ರಾಸಾಯನಿಕಗಳು ಮತ್ತು ಹಲವಾರು ಆರ್ಗ್ಯಾನಿಕ್ ರಾಸಾಯನಿಕಗಳು ಇದರಲ್ಲಿದ್ದುವು.

ಧೂಮಕೇತುವಿನಲ್ಲಿ ಇರುವುದೆಂದು ದೃಢಪಟ್ಟಿರುವ ರಾಸಾಯನಿಕಗಳು ಭೂಮಿಯ ವಾತಾವರಣದಲ್ಲಿ ಪ್ರತಿಕ್ರಿಯಿಸಿ ಬೇರೆ ಬೇರೆ ರೀತಿ, 'ಜೀವಸೃಷ್ಟಿ'ಗೆ ಅತ್ಯವಶ್ಯಕವೆಂದು ಪರಿಗಣಿಸಿರುವ ಪದಾರ್ಥಗಳಾಗಿ ಪರಿವರ್ತನೆಯಾಗುತ್ತವೆ. ಒಂದೆರಡು ಉದಾಹರಣೆಗಳು: 'ಹೈಡ್ರೋಜನ್ ಸಯನೈಡ್' ಎಂಬ ಹಲವಾರು ಅಣುಗಳು ಸೇರಿ 'ಅಡಿನೈನ್' ಎಂಬ ದುಂಡಗಿನ ಅಣುವಾಗುತ್ತದೆ. 'ಪಾಲಿ ಅಸಿಟಲಿನ್' ಎಂಬ ರಾಸಾಯನಿಕ ನೀರಿನ ಸಂಪರ್ಕಕ್ಕೆ ಬಂದೊಡನೆ 'ರೈಬೋಸ್' ಎಂಬ ಸಕ್ಕರೆಯಾಗುತ್ತದೆ. ಧೂಮಕೇತುವಿನಲ್ಲಿರುವ ಲೋಹ ಮಿಶ್ರಿತ ರಂಜಕದ ರಾಸಾಯನಿಕಗಳು ಭೂಮಿಯಲ್ಲಿ ನೀರಿನೊಡನೆ ಸೇರಿ 'ಫಾಸ್ಫೇಟ್' ಆಗುತ್ತವೆ. ಅಡಿನೈನ್, ರೈಬೋಸ್ ಮತ್ತು ಫಾಸ್ಫೇಟ್‌ಗಳು ಸೇರಿ ಡಿ.ಎನ್.ಎ. ಮತ್ತು ಆರ್.ಎನ್.ಎ.ಗಳ ರಚನೆಗೆ ಬೇಕಾದ ಮೂಲ ವಸ್ತುಗಳಲ್ಲಿ ಒಂದಾಗುತ್ತವೆ. ಅರಿಜೋನ ವಿಶ್ವವಿದ್ಯಾಲಯದ ವಿಜ್ಞಾನಿಗಳು ಉಲ್ಕೆಗಳಲ್ಲಿ ಸಿಗುವ ಶ್ರೈಬರ್ಸೈಟ್ ಎಂಬ ಖನಿಜ ನೀರಿನ ಸಂಪರ್ಕಕ್ಕೆ ಬಂದೊಡನೆ P207ಎಂಬ ರಂಜಕದ ಆಕ್ಸೈಡ್ ಆಗುವುದನ್ನು ಕಂಡರು. ಈ P207 ಹಲವಾರು ಜೀವರಸಾಯನಿಕ ಕ್ರಿಯೆಗಳಲ್ಲಿ ಪಾಲ್ಗೊಳ್ಳುವ ಅಡಿನಾಸಿನ್ ಟ್ರೈಫಾಸ್ಫೇಟ್‌ಗೆ ಹತ್ತಿರದ ರಾಸಾಯನಿಕವಾಗಿ ಬದಲಾಗಬಲ್ಲುದು.

ಜೀವಪರಿಕರಗಳು ಭೂಮಿಯನ್ನು ಸೇರಲು ದೊಡ್ಡ ಪ್ರಮಾಣದ ಧೂಮಕೇತು ಅಥವಾ ಉಲ್ಕೆಗಳ ಮೂಲಕ ಮಾತ್ರ ಸಾಧ್ಯ ಎಂದಲ್ಲ, ಅವುಗಳು ಇನ್ನೂ ಸುಲಭವಾದ ಮಾರ್ಗಗಳಿಂದಲೂ ಸೇರಿರಬಹುದು. ಧೂಮಕೇತುಗಳು ಪ್ರತಿಬಾರಿ ಸೂರ್ಯನನ್ನು ಪ್ರದಕ್ಷಿಣೆ ಹಾಕಿ ಹೋಗುವಾಗ ಸೂರ್ಯನ ಶಾಖದಿಂದ ಅದರ ಮಂಜುಗಡ್ಡೆಯಂತೆ ತಣ್ಣಗಾದ ಪದಾರ್ಥಗಳು ಆವಿಯಾಗಿ ಸುತ್ತಲಿನ ವಾತಾವರಣದಲ್ಲಿ ಚೆದುರಿಹೋಗುತ್ತವೆ. ಭೂಮಿ ತನ್ನ ವಾರ್ಷಿಕ ಸೂರ್ಯನ ಪ್ರದಕ್ಷಿಣೆಯಲ್ಲಿ ಎರಡು ಬಾರಿ, ಎಂದರೆ ಆಗಸ್ಟ್ ಮತ್ತು ನವೆಂಬರ್‌ನಲ್ಲಿ, ಇಂತಹ ಧೂಮಕೇತುವಿನ ಧೂಳಿನಲ್ಲಿ ಹಾದುಹೋಗುತ್ತದೆ. ಆಗ ಅಪಾರ ಪ್ರಮಾಣದ ಧೂಮಕೇತುವಿನ ಧೂಳು ಭೂಮಿಯ ವಾತಾವರಣವನ್ನು ಪ್ರವೇಶಿಸಿ ಉರಿದು ಆಗಸದಲ್ಲಿ ದೀಪಾವಳಿಯಂತೆ ಗೋಚರಿಸುತ್ತದೆ. ಇದನ್ನು 'ಪರ್ಸೈಡ್ ಮತ್ತು ಲಿಯೋನಿಡ್ ವೃಷ್ಟಿ' ಎಂದು ಕರೆಯುತ್ತಾರೆ. ಎಲ್ಲಾ ಧೂಳು ಇದೇ ರೀತಿಯಲ್ಲಿ ಭಸ್ಮವಾಗುವುದಿಲ್ಲ, ಸಣ್ಣ ಸಣ್ಣ ಧೂಳಿನ ಕಣಗಳು ಭಸ್ಮವಾಗದೆ ಹಾಗೆಯೇ ತೇಲುತ್ತಾ ಭೂಮಿಯನ್ನು ಸೇರುತ್ತವೆ. ಇಂದಿಗೂ ಕೂಡ ಪ್ರತಿವರ್ಷ ೩೦೦ ಕೆ.ಜಿ. ಆರ್ಗ್ಯಾನಿಕ್ ರಾಸಾಯನಿಕಗಳು ಭೂಮಿಯನ್ನು ಹೀಗೆ ಸೇರುತ್ತಿದೆ. ಭೂಮಿ ರೂಪುಗೊಂಡಾಗ ೪.೫ ಬಿಲಿಯನ್ ವರ್ಷಗಳ ಹಿಂದೆ ಅಸಂಖ್ಯ ಧೂಮಕೇತುಗಳು ಸೌರಮಂಡಲದಲ್ಲಿ ಸಂಚರಿಸುತ್ತಿದ್ದವು. ಆಗ ಇನ್ನೂ ಅಪಾರ ಪ್ರಮಾಣದ ಧೂಳು ಭೂಮಿಯನ್ನು ಸೇರಿರಬೇಕು. ಒಂದು ಅಂದಾಜಿನ ಪ್ರಕಾರ ಭೂಮಿ ರೂಪುಗೊಂಡಾಗ, ಕೇವಲ ೧೦೦ ಮಿಲಿಯನ್ ವರ್ಷಗಳಲ್ಲಿ ಹತ್ತು ಸಾವಿರ ಟನ್‌ಗಳಷ್ಟು ಇಂತಹ ಆರ್ಗ್ಯಾನಿಕ್ ಧೂಳು ಭೂಮಿಯನ್ನು ಸೇರಿದೆ.

**ಸೂಕ್ಷ್ಮ ಚೀಲಗಳು**

ತೊಂಬತ್ತರ ದಶಕದ ಕೊನೆಯಲ್ಲಿ ನಾಸಾ ವಿಜ್ಞಾನಿಗಳು ಭೂಮಿಯಲ್ಲಿ ಜೀವಸೃಷ್ಟಿಯನ್ನು ವಿವರಿಸಲು ನೆರವಾಗುವ ಮತ್ತೊಂದು ಮಹತ್ವದ ಪ್ರಯೋಗವನ್ನು ನಡೆಸಿದರು. ನಕ್ಷತ್ರಗಳು ರೂಪುಗೊಳ್ಳುವ ತಾರಾಮೇಘಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ನೀರು, ಮೀಥೇನ್, ಅಮೋನಿಯ ಮತ್ತು ಮೆಥನಾಲ್‌ಗಳನ್ನು ಮೈನಸ್ ೨೬೩ ಡಿಗ್ರಿಯಷ್ಟು ಕಡಿಮೆ ಶೈತ್ಯದ ಅಲ್ಯೂಮಿನಿಯಮ್ ಪುಡಿಯ ಮೇಲೆ ಘನೀಕೃತವಾಗುವಂತೆ ಮಾಡಲಾಯಿತು. ನಂತರ ಈ ತಣ್ಣನೆಯ ಪುಡಿಯ ಮೇಲೆ ನಾಕ್ಷತ್ರಿಕ ಮೇಘಗಳಲ್ಲಿ ಹೊಸದಾಗಿ ಮೂಡುತ್ತಿರುವ ನಕ್ಷತ್ರಗಳು ಸೂಸುವ ರೀತಿಯಲ್ಲಿ ಅತಿನೇರಳೆ ಕಿರಣಗಳನ್ನು ಹಾಯಿಸಲಾಯಿತು. ನಾಕ್ಷತ್ರಿಕ ಮೇಘಗಳಲ್ಲಿ ನಡೆಯುವ ರಾಸಾಯನಿಕ ಕ್ರಿಯೆಯನ್ನು ಪ್ರಯೋಗಾಲಯದಲ್ಲಿ ಈ ರೀತಿ ನಕಲು ಮಾಡಿದಾಗ ಹಲವಾರು ರೀತಿಯ ಸಂಕೀರ್ಣ ಆಲ್ಕೋಹಾಲ್‌ಗಳು, ಆಲ್ಡಿಹೈಡ್ ಮತ್ತು ದೊಡ್ಡದಾದ ಹೆಕ್ಸಮಿಥೈಲಿನ್ ಟೆಟ್ರಮೈಟ್ (ಎಚ್.ಎಂ.ಟಿ.) ಎಂಬ ರಾಸಾಯನಿಕಗಳು ಮೂಡಿಬಂದವು. ಅತಿಶೈತ್ಯದಲ್ಲಿದ್ದ ಈ ಎಚ್.ಎಂ.ಟಿ ರಾಸಾಯನಿಕವನ್ನು ನೀರಿನ ಸಂಪರ್ಕಕ್ಕೆ ತಂದಾಗ, ಅದು ಮೀಟರ್‌ನ ಹತ್ತರಿಂದ ನಲವತ್ತು ಮಿಲಿಯನ್ ಭಾಗದಷ್ಟು (ಕೆಂಪು ರಕ್ತಕಣದಷ್ಟು) ಸಣ್ಣ ಸಣ್ಣ ಖಾಲಿ ಚೀಲಗಳಾಗಿ ಬದಲಾದವು. ಈ ಸೂಕ್ಷ್ಮ ಚೀಲಗಳು ವಾತಾವರಣದ ಅತಿನೇರಳೆ ಕಿರಣಗಳನ್ನು ಹೀರಿ ತಮ್ಮೊಳಗಿನ ವಸ್ತುಗಳನ್ನು ರಕ್ಷಿಸಬಲ್ಲವು ಎಂದು ವಿಜ್ಞಾನಿಗಳು ಗಮನಿಸಿದರು. ಹೊಸದಾಗಿ ಮೂಡಿಬರುವ ನಕ್ಷತ್ರ ಮಂಡಲದ ಧೂಮಕೇತುಗಳಲ್ಲಿ ಎಚ್.ಎಂ.ಟಿ. ರಾಸಾಯನಿಕ ಕೂಡ ಸೇರ್ಪಡೆಯಾಗಿರಬಹುದು.

ಇದರಿಂದ ಜೀವದ ಉಗಮದ ಕುರಿತು ಎರಡು ರೀತಿಯಲ್ಲಿ ವಿವರಿಸಬಹುದು. ಧೂಮಕೇತುವಿನಿಂದ ಬಂದ ಧೂಳು ಮತ್ತು ಅದರ ಆರ್ಗ್ಯಾನಿಕ್ ರಾಸಾಯನಿಕಗಳು ಆದಿಮ ಭೂಮಿಯ ನೀರಿನಲ್ಲಿ ತೇಲುತ್ತಿತ್ತು. ಅಂತಹ ಕೆಲವು ರಾಸಾಯನಿಕಗಳು ಆ ನೀರಿನಲ್ಲೇ ರೂಪುಗೊಂಡಿದ್ದ ಸೂಕ್ಷ್ಮಚೀಲಗಳಲ್ಲಿ ಬಂಧಿಯಾಗಿ, ಹೊರಗಿನ ವಾತಾವರಣದಿಂದ ರಕ್ಷಣೆ ಪಡೆದು, ಕಾಲಕ್ರಮೇಣ ಸಂಕೀರ್ಣ ಜೀವ ರಾಸಾಯನಿಕಗಳಾಗಿ ಬದಲಾಗಿ ಜೀವಿಗಳು ಉಗಮಿಸಿರಬಹುದು. ಇದು ಮೊದಲನೆಯ ವಿವರಣೆ. ಎರಡನೆಯ ವಿವರಣೆ ಇನ್ನೂ ಕುತೂಹಲಕರವಾಗಿದೆ. ಧೂಮಕೇತುವಿನ ಗರ್ಭದಲ್ಲಿರುವ ವಿಕಿರಣಶೀಲ ವಸ್ತುಗಳ ಶಾಖದಿಂದ ಅಲ್ಲಿಯೇ ಸೂಕ್ಷ್ಮ ಚೀಲಗಳು ರೂಪುಗೊಂಡಿರುತ್ತವೆ. ಆ ಚೀಲದಲ್ಲಿಯೇ ಆರ್ಗ್ಯಾನಿಕ್ ರಾಸಾಯನಿಕಗಳು ಸೇರಿಕೊಂಡು ಅಲ್ಲಿಯೇ ಮತ್ತಷ್ಟು ಸಂಕೀರ್ಣ ಜೀವ ರಾಸಾಯನಿಕಗಳು ರೂಪುಗೊಳ್ಳುತ್ತಾ ಸಾಗಿರಬಹುದು. ಧೂಮಕೇತುವಿನ ಧೂಳಿನಲ್ಲಿ ಭೂಮಿಯನ್ನು ಸೇರಿದ ಈ ಚೀಲಗಳ ಜೀವರಾಸಾಯನಿಕಗಳಿಂದ ಜೀವದ ಉಗಮವಾಗಿರಬೇಕು. ಕ್ರಾಂತಿಕಾರಿ ಎನಿಸ ಬಹುದಾದರೂ ಈ ಎರಡನೆಯ ಸಾಧ್ಯತೆ ಭೂಮಿಯಲ್ಲಿ ಕೆಲವೇ ಮಿಲಿಯನ್ ವರ್ಷ ಗಳಲ್ಲಿ ಜೀವದ ಉಗಮವಾಗಿ ವಿಕಾಸವಾಗಿರುವುದನ್ನು ಯಶಸ್ವಿಯಾಗಿ ವಿವರಿಸುತ್ತದೆ.

ಎ. ಸುಬ್ರಮಣ್ಯ
ಭಾರತೀಯ ಜೀವ ವಿಮಾ ನಿಗಮ, ಅರಸೀಕೆರೆ - ೫೭೩ ೧೦೩, ಹಾಸನ ಜಿಲ್ಲೆ

# ಬಲೂನ್ ಗಿಡ : ನೋಡಿದ್ದೀರಾ ?

**ಬೆಂ**ಗಳೂರಿನ ಕೃಷ್ಣರಾಜೇಂದ್ರ ರಸ್ತೆಯಲ್ಲಿರುವ ದಿ ಥಿಯಸಾಫಿಕಲ್ ಸೊಸೈಟಿ, ಬೆಂಗಳೂರು ಸಿಟಿ ಲಾಡ್ಜ್ ಆವರಣ ಜೀವವೈವಿಧ್ಯ ಪ್ರತಿಬಿಂಬಿಸುವ ಹಾಗೂ ನೂರಾರು ವರ್ಷಗಳ ಮರ-ಗಿಡಗಳ ತಾಣ. ಇದರ ಮುಖ್ಯ ಕಛೇರಿಯ ಮುಂದೆ ತಿಳಿ ಹಸಿರು ಬಣ್ಣದ ಪುಟ್ಟ ಪುಟ್ಟ ಚೆಂಡುಗಳಿಂದ ಅಲಂಕೃತವಾಗಿರುವ ಸಸ್ಯ ಯಾರನ್ನೂ ಆಕರ್ಷಿಸಬಲ್ಲದು. ಸುಮಾರು ೫-೬ ಸೆಂಟಿಮೀಟರ್ ಸುತ್ತಳತೆಯ ಈ ಚೆಂಡುಗಳು ಈ ಸಸ್ಯದ ಊದಿಕೊಂಡಂತಹ ಕಾಯಿ ಎಂದರೆ ನಂಬಲಸಾಧ್ಯ. ಇವನ್ನು ತೋಟಗಳಲ್ಲಿ ಆಲಂಕಾರಿಕವಾಗಿ ಬೆಳೆಸಿದರೆ ಮಕ್ಕಳಿಗೆ ಕುತೂಹಲಕಾರಿ ವಿಷಯವಾಗಬಲ್ಲದು. ಹೂದಾನಿಗಳ ಅಲಂಕಾರಕ್ಕೆ ಮತ್ತಷ್ಟು ಸೊಬಗನ್ನು ನೀಡಬಹುದಾದ್ದರಿಂದ ಹೂ ವಿನ್ಯಾಸದ ಹವ್ಯಾಸಿಗಳ ಆಕರ್ಷಣೆಗೂ ಪಾತ್ರವಾಗಬಲ್ಲದು.

ಇದನ್ನು ಸಾಮಾನ್ಯವಾಗಿ ಬಲೂನ್ ಗಿಡ, ಬಲೂನ್ ಕಾಟನ್ ಬುಷ್, ವೃಷಣ ಸಸ್ಯ, ಬಿಷಪ್‌ರ ಚೆಂಡು, ಹಂಸ ಸಸ್ಯ, ವನ್ಯ ಹತ್ತಿ – ಹೀಗೆ ಹಲವಾರು ಹೆಸರುಗಳಿಂದ ಗುರುತಿಸುವುದಿದೆ. ಇದರ ವೈಜ್ಞಾನಿಕ ನಾಮ ಗಾಂಫೋಕಾರ್ಪಸ್ ಫೈಸೋಕಾರ್ಪಸ್. ಇದೊಂದು ಎಕ್ಕ (ಅರ್ಕ)ದ ಗಿಡಗಳ ಗುಂಪಿಗೆ ಸೇರಿದ ಸಸ್ಯ. ಈ ಸಸ್ಯಗಳ ಕುಟುಂಬ ಆಸ್ಲೆಪಿಡಿಯಾಸಿ. ಸಸ್ಯವರ್ಗೀಕರಣ ಪಿತಾಮಹನೆನಿಸಿರುವ ಕಾರೋಲಸ್ ಲಿನೆ ಕಾಂಡವನ್ನು ಮುರಿದಾಗ ಹಾಲು ಸ್ರವಿಸುವ ಈ ಗಿಡಗಳು ಜಾನಪದ ಸಾಂಪ್ರದಾಯಿಕ ವೈದ್ಯಕೀಯದಲ್ಲಿ ಬಳಕೆಯಾಗುವುದನ್ನು ಗುರುತಿಸಿ ಗ್ರೀಕರ ವೈದ್ಯ ದೇವತೆ ಆಸ್ಕುಲೇಪಿಯಸ್ ಹೆಸರನ್ನೇ ಕೊಟ್ಟಿದ್ದಾನೆ. ಹಾಗಾಗಿ ಇದಕ್ಕೆ ಆಸ್ಲೇಪಿಯಸ್ ಫೈಸೋಕಾರ್ಪ ಎಂತಲೂ ಹೆಸರಿದೆ. ಫೈಸೋಕಾರ್ಪ ಎಂದರೆ ಊದಿದ ಕಾಯಿ ಎಂಬ ಅರ್ಥವಿದೆ. ಎರಡು ಕಾಯಿಗಳು ಗಿಡದಲ್ಲಿ ಒಟ್ಟಿಗೆ ಬಿಟ್ಟಾಗ ಅವು ಜೋಡಿ ವೃಷಣಗಳಂತೆ ಕಾಣುವುದರಿಂದ ವೃಷಣ ಸಸ್ಯ ಎಂಬ ಹೆಸರೂ ಅನ್ವರ್ಥವಾಗಿದೆ.

ಮೂಲತಃ ಇದು ಆಗ್ನೇಯ ಆಫ್ರಿಕಾದ ಸಸ್ಯ. ನಂತರ ಮಾರಿಷಿಯಸ್, ಭಾರತ, ಶ್ರೀಲಂಕಾ, ಹಾಂಗ್‌ಕಾಂಗ್, ಆಸ್ಟ್ರೇಲಿಯಾ, ವೆಸ್ಟ್ ಇಂಡೀಸ್ ದೇಶಗಳಲ್ಲಿ ತನ್ನ ಛಾಪನ್ನು ಮೂಡಿಸಿರುವುದನ್ನು ಕಾಣಬಹುದು. ಇದೊಂದು ಕಳೆ ಸಸ್ಯವಾಗಿ ಎಲ್ಲೆಡೆ ಬೆಳೆಯುವುದಾದರೂ ಆಲಂಕಾರಿಕ ಸಸ್ಯವಾಗಿಯೂ ಕೆಲವೆಡೆ ಬೆಳೆಸುವುದಿದೆ. ಇದು ಬಹು ವಾರ್ಷಿಕೀಯ ಸಸ್ಯವಾಗಿದ್ದು ಸುಮಾರು ಎರಡು ಮೀಟರ್ ಉದ್ದದವರೆಗೂ ಬೆಳೆಯಬಹುದು. ಜೂನ್‌ನಿಂದ ಆಗಸ್ಟ್‌ವರೆಗೆ ಹೂ ಬಿಡುವ ಇದು ಹೂವಿನ ಹಂತದಲ್ಲೂ ಆಕರ್ಷಣೀಯವಾಗಿಯೇ ಕಾಣುತ್ತದೆ. ಡಾನಸ್ ಗುಂಪಿನ ಚಿಟ್ಟೆಗಳ ಕಂಬಳಿಹುಳುಗಳಿಗೆ ಇದು ತೌರುಮನೆ. ಹೂವಿನ ಮಕರಂದ ಅರಸಿಬರುವ ಜೇನು ಮತ್ತು ಅನೇಕ ಕೀಟಗಳಿಗೆ ಆಶ್ರಯ ತಾಣ. ಜೀರುಂಡೆ, ಪತಂಗ, ಸಸ್ಯ ತಿಗಣೆಗಳ ಅನೇಕ ಪ್ರಭೇದಗಳ ಲಾರ್ವಾಗಳಿಗೆ ಆಹಾರವೇ ಅಲ್ಲದೆ ಅದರಲ್ಲಿರುವ ವಿಶೇಷ ರಾಸಾಯನಿಕ ವಸ್ತು ಆತ್ಮರಕ್ಷಣೆಗೂ ಸಹಾಯಕ. ಈ ಸಸ್ಯದ ಹಾಲಿನಂತಹ ಸ್ರವಿಕೆಯಲ್ಲಿ ಕಾರ್ಡಿನೋಲೈಡೆಸ್ ಎಂಬ ರಾಸಾಯನಿಕವಿದೆ. ಈ ರಾಸಾಯನಿಕ ವಸ್ತು ಕೆಲವೊಂದು ಜೀವಿಗಳಿಗೆ ವಿಷಕಾರಕ. ಹಾಗಾಗಿ ಈ ಎಲೆಯನ್ನೇ ತಿಂದು ಬದುಕುವ ಜೀವಿಗಳನ್ನು ಭಕ್ಷಿಸಲು ಪಕ್ಷಿ ಮತ್ತಿತರ ಜೀವಿಗಳು ಬಯಸುವುದಿಲ್ಲ. ಚಿಟ್ಟೆ ಪಾರ್ಕ್ ನಿರ್ಮಿಸುವವರಿಗೆ ಅತ್ಯಂತ ಸೂಕ್ತವಾದ ಸಸ್ಯ. ಬಲಿತ ಕೊಂಬೆಯನ್ನು ನೆಟ್ಟು ಅಲೈಂಗಿಕವಾಗಿ ಬೆಳೆಸಬಹುದು.

ಇದರ ತೊಗಟೆಯಲ್ಲಿ ಹತ್ತಿಯಂತಹ ನಾರಿನಂಶವಿದೆ. ಹತ್ತಿಯಂತೆ ಈ ನಾರನ್ನು ತಿರುಚಲು ಅಥವಾ ಹೊಸೆಯಲು ಅಸಾಧ್ಯವಾದ್ದರಿಂದ ನೇಯ್ಗೆಗೆ ಸೂಕ್ತವಲ್ಲ. ಇತ್ತೀಚೆಗೆ ಹತ್ತಿಯೊಂದಿಗೆ ಬೆರೆಸಿ ಬಳಸುವ ಸಂಶೋಧನೆಗಳಾಗುತ್ತಿವೆ. ಇದರಿಂದ ಗಟ್ಟಿಯಾದ ಹಗ್ಗ ತಯಾರಿಸಬಹುದು. ಕಾಂಡದಲ್ಲಿ ಸ್ರವಿಸುವ ಹಾಲಿನಲ್ಲಿ ಕೌಟ್ ಚೌಕ್ ಎಂಬ ರಬ್ಬರಿನಂತಹ ವಸ್ತು ಶೇಕಡ ೧-೨ರಷ್ಟಿದೆ. ಎರಡನೇ ಜಾಗತಿಕ ಸಮರ ಸಮಯದಲ್ಲಿ ಜರ್ಮನಿ ಮತ್ತು ಅಮೆರಿಕಾ ರಬ್ಬರ್ ತಯಾರಿಸುವ ದಿಶೆಯಲ್ಲಿ ಇದನ್ನು ಉಪಯೋಗಿಸಲು ಚಿಂತಿಸಿದ್ದವು. ಆದರೆ ಆರ್ಥಿಕವಾಗಿ ಲಾಭದಾಯಕವಲ್ಲವೆಂಬ ಕಾರಣಕ್ಕೆ ಕೈಬಿಟ್ಟವು.

ಈ ಸಸ್ಯದ ಹಾಲನ್ನು ಚರ್ಮದ ಮೇಲೆ ಉಂಟಾಗುವ ನರೂಲಿ ಎಂಬ ಸಣ್ಣ ಗಂತಿಗಳನ್ನು ಕರಗಿಸಲು ಬಳಸುವುದಿದೆ. ಅದು ಕಳಚಿ ಬೀಳುವವರೆಗೂ ಪ್ರತಿನಿತ್ಯ ಅದನ್ನು ಲೇಪಿಸಬಹುದು. ಈ ಸಸ್ಯ ಬೆಳೆಯುವ ಸ್ಥಳದಲ್ಲಿ ಅಕ್ಕಪಕ್ಕದ ಸಸ್ಯಗಳೂ ಅನೇಕ ಹುಳು ಹುಪ್ಪಟೆಗಳ ಉಪದ್ರವದಿಂದ ರಕ್ಷಣೆ ಪಡೆಯಬಹುದು.

ಆಫ್ರಿಕಾದ ಬುಡಕಟ್ಟು ಜನರು ಈ ಸಸ್ಯವನ್ನು ಹಲವಾರು ತೊಂದರೆಗಳಿಗೆ ಔಷಧವಾಗಿ ಬಳಸುವುದಿದೆ. ಬೇರನ್ನು ಒಣಗಿಸಿ ಮೈಕೈ ನೋವು ನಿವಾರಕವಾಗಿ ಇದರ ಕಷಾಯ ಮಾಡಿ ಸೇವಿಸುತ್ತಾರೆ. ದೇಹದಲ್ಲಿ ಕ್ಯಾಲ್ಸಿಯಂ ಮತ್ತು ಪೊಟಾಸಿಯಂ ಪ್ರಮಾಣದ ನಿಯಂತ್ರಣ ಏರುಪೇರು ಮಾಡಬಲ್ಲ ಕಾರ್ಡಿಯಕ್ ಗ್ಲೈಕೊಸೈಡ್ ಅಂಶ ಇದರ ಹಾಲಿನಲ್ಲಿದೆ. ಹಾಗಾಗಿ ಆಫ್ರಿಕಾ ಮತ್ತು ದಕ್ಷಿಣ ಅಮೆರಿಕಾದ ಮೂಲನಿವಾಸಿಗಳು ಇದರ ಹಾಲನ್ನು ತಮ್ಮ ಬಾಣಗಳಿಗೆ ಸವರಿ ಬೇಟೆಯಾಡುವುದಿದೆ.

ಅಮೆರಿಕಾ ಮೂಲನಿವಾಸಿಗಳು ಈ ಸಸ್ಯದ ವಿವಿಧ ಭಾಗಗಳನ್ನು ಆಹಾರವಾಗಿ ಹಿಂದೆ ಬಳಸುತ್ತಿದ್ದುದರ ದಾಖಲೆಗಳಿವೆ. ಈ ಗುಂಪಿನ ಸಸ್ಯಗಳಲ್ಲಿ ಕೆಲವೊಂದು ವಿಷಕಾರಕ ವಸ್ತುಗಳಿರುವುದರಿಂದ ಅನೇಕ ಪ್ರಾಣಿಗಳು ಇದನ್ನು ಆಹಾರವಾಗಿ ಸೇವಿಸಲು ಹಿಂಜರಿಯುತ್ತವೆ. ಬೇರೆ ಸಸ್ಯಗಳ ಅಭಾವವಿದ್ದು ಉಪವಾಸ ಬೀಳಬೇಕಾದ ಸ್ಥಿತಿಯಲ್ಲಿ ಮಾತ್ರ ಈ ಸಸ್ಯಗಳಿಗೆ ಬಾಯಿ ಹಾಕಬಹುದಷ್ಟೇ. ಅವುಗಳ ಶರೀರ ತೂಕದ ಹತ್ತನೇ ಒಂದು ಭಾಗದಷ್ಟು ಸಸ್ಯ ಹೊಟ್ಟೆಗೆ ಹೋದಾಗ ವಿಷಪೂರಕವಾಗುವ ಸಂಭವವಿದೆ. ವಿವಿಧ ಪ್ರಭೇದಗಳನ್ನು ಆಫ್ರಿಕಾದ ಮೂಲನಿವಾಸಿಗಳು ಅನೇಕ ಕಾಯಿಲೆಗಳನ್ನು ಗುಣಪಡಿಸಲು ಬಳಸುತ್ತಾರೆ. ಹೃದಯದ ತೊಂದರೆಗಳಲ್ಲಿ ಫ್ರುಟಿಕ್ಯೋಸ್ ಪ್ರಭೇದ. ಇದರ ಎಲೆ ಮತ್ತು ಬೇರನ್ನು ಒಣಗಿಸಿ, ಪುಡಿ ಮಾಡಿ, ನಶ್ಯದಂತೆ ಬಳಸುವುದರಿಂದ ಸೀನು ಅವಿರತವಾಗಿ ಬರುತ್ತದೆ. ಹೀಗಾಗಿ ಇದು ಯಾವುದೇ ಸೋಂಕು ಮತ್ತು ತಲೆನೋವಿಗೆ ದಿವ್ಯೌಷಧವೆಂದು ಇವರ ನಂಬಿಕೆ. ಫೈಸೋಕಾರ್ಪಸ್ ಪ್ರಭೇದದ ಎಲೆ ಮತ್ತು ಬೇರುಗಳ ಪುಡಿಯನ್ನು ಹೊಟ್ಟೆನೋವು, ತಲೆನೋವು, ನರೂಲಿ ಮತ್ತು ಟ್ಯುಬರ್‌ಕ್ಯುಲೋಸಿಸ್ ನಿವಾರಕವಾಗಿ ಬಳಸುತ್ತಾರೆ.



ಇದರ ಔಷಧೀಯ ಗುಣಗಳು ಏನೇ ಇರಲಿ, ಇದರ ಚೆಂಡಿನಂತಹ ಕಾಯಿಗಳು ನೋಡಲು ಸುಂದರ. ಇದನ್ನು ನೀರಿನ ಅಭಾವವಿರುವ ಪ್ರದೇಶಗಳಲ್ಲೂ ಬೆಳೆಯಬಹುದಾದ್ದರಿಂದ ಒಣ ಪ್ರದೇಶಗಳಲ್ಲೂ ಸುಲಭವಾಗಿ ಬೆಳೆಸಬಹುದಾಗಿದೆ.

**ಡಾ|| ಎನ್. ಎಸ್. ಲೀಲಾ**
ನಂ. ೧೦೫, ವೆಸ್ಟ್ ಪಾರ್ಕ್ ಅಪಾರ್ಟ್‌ಮೆಂಟ್ಸ್, ೧೪-ಎ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು -೩

ಡಾ॥ ಎನ್. ಸುರೇಶ್ ನಾಗಲಮಡಿಕೆ



# 'ಸಂಗಡ'ದ ಜೊತೆಯಲ್ಲಿ ಸಾಗುತ್ತ...

**ಡಾ॥** ಎಚ್. ಎಸ್. ರಾಘವೇಂದ್ರ ರಾವ್ ಅವರ 'ಸಂಗಡ' ಕೃತಿಗೆ ಚಾರಿತ್ರಿಕ ಮಹತ್ವವಿದೆ. 'ನಮಸ್ಕಾರ'ದ ನಂತರ ಈ ವಿಮರ್ಶಾ ಕೃತಿ ಹೊರಗೆಬರುತ್ತಿದೆ. ಅಧ್ಯಯನದ ಅನುಕೂಲಕ್ಕಾಗಿ ಮತ್ತು ಚಾರಿತ್ರಿಕ ಹಿನ್ನೆಲೆಯಿಂದಾಗಿ 'ನಮಸ್ಕಾರ'ದ ಕೆಲವು ಲೇಖನಗಳು ಇಲ್ಲಿ ಜಾಗ ಪಡೆದುಕೊಂಡಿವೆ. 'ಸಂಗಡ' ಕೃತಿಯಲ್ಲಿ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳನ್ನು ಕುರಿತ ಒಟ್ಟು ಮೂವತ್ತೆಂಟು ಮುನ್ನುಡಿಗಳಿವೆ. ಕಾವ್ಯ, ಕವಿತೆ, ನಾಟಕ, ಪ್ರಬಂಧ, ವಿಮರ್ಶೆ, ಲಘು ಪ್ರಬಂಧ, ಆತ್ಮಕತೆಗಳು, ಅನುಭವ ಕಥನಗಳು, ಸಂಪಾದನೆ ಇತ್ಯಾದಿಗಳನ್ನು ಒಳಗೊಂಡಿದೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮುನ್ನುಡಿಗಳು ಕೆಲವು ಮಹತ್ವದ ಒಳನೋಟಗಳನ್ನು ನೀಡಿವೆ. ಡಿ.ಎಲ್.ಎನ್. ಅವರ ಮುನ್ನುಡಿಗಳು, ಪೀಠಿಕೆಗಳು, ಇದಕ್ಕೆ ಬಹುದೊಡ್ಡ ಉದಾಹರಣೆ. ಏಕಕಾಲಕ್ಕೆ ಅವು ಪರಿಚಯ, ವಿಶ್ಲೇಷಣೆ, ಸಂಶೋಧನೆ, ಪ್ರತಿಕ್ರಿಯೆಗಳನ್ನು ಸೂಚಿಸುತ್ತವೆ. ಕೆಲವು ಬಾರಿ ಮುನ್ನುಡಿಗಳು ಮೂಲ ಲೇಖಕರ ಪರಿವರ್ತನೆಗೂ ಕಾರಣವಾಗಬಹುದು. ಇದಕ್ಕೆ ವಿ.ಸೀ. ಮತ್ತು ಕೆ.ಎಸ್.ನ. ಅವರನ್ನು ನೆನಪಿಸಿಕೊಳ್ಳಬಹುದು. ಆಶ್ಚರ್ಯವೆಂದರೆ ಇಷ್ಟೊಂದು ಕೃತಿಗಳಿಗೆ ಮುನ್ನುಡಿಗಳನ್ನು ಬರೆದ ಎಚ್.ಎಸ್.ಆರ್. ತಮ್ಮ ಸ್ವಂತ ಕೃತಿಗಳಿಗೆ ಯಾವುದೇ ಮುನ್ನುಡಿಯನ್ನು ಬಯಸದೇ ಇರುವುದು. ಕಾವ್ಯವನ್ನು ಅಧ್ಯಯನ ಮಾಡುವಾಗ ಎಚ್.ಎಸ್.ಆರ್. ಕೆಲವು ಚೌಕಟ್ಟುಗಳನ್ನು ನಿರ್ಮಿಸಿಕೊಳ್ಳುತ್ತಾರೆ. (೧) ಇತ್ತೀಚಿನ ಕನ್ನಡ ಕಾವ್ಯ ಪರಂಪರೆಯೇ ಬೇಂದ್ರೆ-ಕುವೆಂಪು, ಅಡಿಗರ ಕಾವ್ಯದಿಂದ ತಪ್ಪಿಸಿಕೊಳ್ಳುವ ನೆಲೆಗಟ್ಟು; (೨) ಇತ್ತೀಚಿನ ಕಾವ್ಯ 'ಸಂವಹನಶೀಲತೆ'ಯನ್ನು ಹೇಗೆ ರೂಢಿಸಿಕೊಳ್ಳುತ್ತಿದೆ ಎಂಬುದು; (೩) ಮೀಮಾಂಸೆ ಮತ್ತು ಛಂದಸ್ಸಿನ ಲಯಗಾರಿಕೆಯ ಬೆನ್ನಲ್ಲಿ ಈಚಿನ ಕಾವ್ಯವನ್ನು ವಿಶ್ಲೇಷಿಸುವುದು. ಕೆ.ಎಸ್.ನ. ಅವರ ಕಾವ್ಯವನ್ನು ಚರ್ಚಿಸುವಾಗ ಈ ಮೂರು ಅಂಶಗಳೂ ಮುಖ್ಯವಾಗುತ್ತವೆ. ಕೆ.ಎಸ್.ನ. ಅವರ ಕಾವ್ಯ ಅಡಿಗರ ಕಾವ್ಯದೊಂದಿಗೆ ಗುದ್ದಾಡಿದ ಕ್ಷಣಗಳನ್ನು ಮೀರಿ ಬೆಳೆದಿದೆ ಎಂಬುದು ಎಲ್ಲರಿಗೂ ತಿಳಿದ ಸಂಗತಿ. ಇಲ್ಲಿಯೂ ಕೂಡ ಕೆ.ಎಸ್.ನ. ಗೆಲ್ಲುವುದು ಸಂವಹನಶೀಲತೆಯಿಂದ ಎಂಬುದು ಎಚ್.ಎಸ್.ಆರ್. ಅವರ ಅಭಿಮತ. ಹಾಗೆ ನೋಡಿದರೆ ಅವರ ಲಯಗಾರಿಕೆ ಮತ್ತು ಭಾಷೆಯ ಮೇಲಿನ ಪ್ರೀತಿಯೇ ಕೆ.ಎಸ್‌ನ. ಅವರನ್ನು ಅಡಿಗರಿಗಿಂತ ಹೆಚ್ಚು ಜನಸಾಮಾನ್ಯರ ಬಳಿಗೆ ತಂದು ನಿಲ್ಲಿಸಿದ್ದು. ಹಸಿವು ಮತ್ತು ಬಡತನವನ್ನು ಪ್ರೀತಿಯಿಂದ ಮರೆಯುವ ಕ್ಷಣಗಳನ್ನು ಇವರ ಕಾವ್ಯದಲ್ಲಿ ನೋಡಬಹುದು. ಲಂಕೇಶರ 'ರೊಟ್ಟಿ' ದೇವನೂರರ 'ಒಡಲಾಳ' ಕೃತಿಗಳನ್ನು ನೆನಪಿಸಿಕೊಂಡರೆ ಕೆ.ಎಸ್.ನ. ಅವರ ಮೃದುತ್ವ ನಮಗೆ ಅರಿವಾಗುತ್ತದೆ. 'ಸಂಗಡ'ದಲ್ಲಿ ಮತ್ತೊಬ್ಬ ಹಿರಿಯ ಕವಿಯಾದ ಚಂಪಾ ಅವರನ್ನು ಕುರಿತು ಭಿನ್ನ ಒಳನೋಟಗಳನ್ನು ಎಚ್.ಎಸ್.ಆರ್. ನೀಡಿದ್ದಾರೆ. ಚಂಪಾ ಕನ್ನಡ ಕಾವ್ಯದ ಯಾರ ಪ್ರಭಾವಕ್ಕೂ ಒಳಗಾಗದ ಕವಿ. ಅವರಿಗೆ ಆ ಕ್ಷಣದ ತುರ್ತುಗಳೇ ಕಾವ್ಯ ವಸ್ತುಗಳಾಗಿವೆ. ಚಂಪಾ ಅವರಿಗೆ ಪುರಾಣ, ಇತಿಹಾಸಗಳು ಹೆಚ್ಚು ಕಾಡಿಲ್ಲ. ಅಡಿಗರ ನಂತರ ಕನ್ನಡ ಕಾವ್ಯದಲ್ಲಿ ಸಮಕಾಲೀನ ರಾಜಕಾರಣವನ್ನು ಮತ್ತು ವಿವಿಧ ವಾದಗಳನ್ನು ಮೈಗೂಡಿಸಿಕೊಂಡಿದ್ದು ಚಂಪಾ ಅವರೇ ಇರಬೇಕು. ''ತುರ್ತು ಪರಿಸ್ಥಿತಿಯ ನಂತರದ ವಾಸ್ತವದಲ್ಲಿ ನಮ್ಮ ರಾಜಕಾರಣವು ಅನುಭವಿಸಿದ ಎಲ್ಲ ದ್ವಂದ್ವಗಳನ್ನು ಬಂಡಾಯ ಸಾಹಿತ್ಯದ ಮುಂಚೂಣಿಯಲ್ಲಿ ಇದ್ದವರು ಹಾಗೂ ಅವರ ಬರವಣಿಗೆಯು ಅನುಭವಿಸಬೇಕಾಯಿತು. ಪಾಟೀಲರ ಕಾವ್ಯವೂ ಇದಕ್ಕೆ ಅಪವಾದವಲ್ಲ'' (ಪು. ೫೧). ಇಂದಿಗೂ ಸಮಕಾಲೀನ ದ್ವಂದ್ವಗಳಿಗೆ ಶೀಘ್ರವೇ ಪ್ರತಿಕ್ರಿಯೆಗಳನ್ನು ನೀಡುವ ಕವಿಗಳಲ್ಲಿ ಚಂಪಾ ಪ್ರಮುಖರಾಗುತ್ತಾರೆ. 'ಸಂಗಡ' ಕೃತಿಯಲ್ಲಿ ಗಮನಿಸಬೇಕಾದ ಇನ್ನೊಂದು ಲೇಖನ ರಾಮಚಂದ್ರ ಶರ್ಮ ಅವರನ್ನು ಕುರಿತದ್ದು. ಪ್ರಾಯಶಃ ಶರ್ಮರನ್ನು ಕುರಿತು ಇಷ್ಟು ಗಾಢವಾಗಿ ಅಧ್ಯಯನ ಮಾಡಿದವರು ಶರ್ಮರ ಕಾವ್ಯವನ್ನು ಅಧ್ಯಯನ ಮಾಡುವಾಗ ರಾಚನಿಕ ನೆಲೆಗಳನ್ನು, ಛಂದೋ ವೈವಿಧ್ಯಗಳನ್ನು ಹಾಗೂ ಸಮಕಾಲೀನ ಅದರಲ್ಲೂ ಅಡಿಗರ ಕಾವ್ಯ ಸಂದರ್ಭವನ್ನು ಹಿನ್ನೆಲೆಯಾಗಿಟ್ಟುಕೊಳ್ಳುತ್ತಾರೆ.




ಆಯಾ ಕವಿಗಳ ಗ್ರಾಮೀಣ, ನಗರ, ವೈಯಕ್ತಿಕ ಹಿನ್ನೆಲೆಗಳನ್ನು ಪ್ರಧಾನ ನೆಲೆಗೆ ತಂದು ಚರ್ಚಿಸುವುದು ಆ ಮೂಲಕ ಕನ್ನಡ ಕಾವ್ಯ ಪರಂಪರೆಗೆ ಅವರ ಕಾವ್ಯ ಗ್ರಹಿಕೆಗಳನ್ನು ವಿಶ್ಲೇಷಿಸುವುದು ಎಚ್.ಎಸ್.ಆರ್.ರ ಮುಖ್ಯ ಆಶಯಗಳಲ್ಲಿ ಒಂದು. ಆನಂದ ಝುಂಝರವಾಡರು ಬಡತನ ಮತ್ತು ವೈಯಕ್ತಿಕ ಅನುಭವಗಳನ್ನು ಕಾವ್ಯಕ್ರಿಯೆಯಲ್ಲಿ ಅನುಸಂಧಾನಗೊಳಿಸುವುದರ ಕುರಿತು ಎಚ್.ಎಸ್.ಆರ್. ಅಭಿಪ್ರಾಯಪಡುವುದು ಹೀಗೆ: ''ಮಧ್ಯಮವರ್ಗದ ಮಿತಿಗಳನ್ನು ಮೀರುವ ಅಪವರ್ಗೀಕರಣದ ಫಲವಾಗಿಯೇ ಈ ಕವಿಗೆ ಕಡುಬಡತನದ, ದೈಹಿಕ ಶ್ರಮದ ನೇರ ಅನುಭವದ ಫಲವಾದ ದೃಷ್ಟಿಕೋನ ಹಾಗೂ ಪ್ರತಿಮಾ ಲೋಕಗಳು ದೊರೆತಿವೆ'' (ಪು. ೯೫). ಇದರಿಂದ ಬೇಂದ್ರೆ, ಕೆ.ಎಸ್.ನ. ಕಾವ್ಯದ ಹಿನ್ನೆಲೆಯಲ್ಲಿ ಈ ಮಾತನ್ನು ಗಮನಿಸಿದಾಗ ನಮಗೆ ಮತ್ತಷ್ಟು ಹೊಳಹುಗಳು ಲಭ್ಯವಾಗಬಹುದು. ಅಧ್ಯಾತ್ಮವನ್ನು ಎಚ್.ಎಸ್. ಶಿವಪ್ರಕಾಶ್, ಝುಂಝರವಾಡ, ಸಿದ್ಧಯ್ಯ – ಈ ಮೂವರು ತಮ್ಮ ಕಾವ್ಯದಲ್ಲಿ ಅನುಸಂಧಾನ ಮಾಡುತ್ತಿರುವ ಕ್ರಮಗಳನ್ನು ಚರ್ಚಿಸಬೇಕಾಗಿದೆ. ರಾಜಕೀಯದ ಆವರಣದಲ್ಲಿ ಕಾವ್ಯವನ್ನು ಕುರಿತು ಧ್ಯಾನಿಸಿದ ವೀಚಿ ಮತ್ತು ಎಲ್. ಹನುಮಂತಯ್ಯನವರ ಬಗ್ಗೆ ವಿವರವಾದ ಚರ್ಚೆಗಳಿವೆ. ಇವರ ಹಿಂದಿನ ಕವಿತೆಗಳನ್ನು ಬೆನ್ನಲ್ಲಿಟ್ಟುಕೊಂಡು ರಾಜಕೀಯ ಕಾವ್ಯ ಇವುಗಳ ದ್ವಂದ್ವಗಳನ್ನು ಎಚ್.ಎಸ್.ಆರ್. ಗಮನಿಸಿದ್ದಾರೆ. ವೀ.ಚಿ.ಯವರು ಸಮಾಜವಾದ, ಕಮ್ಯುನಿಸಂಗಳ ಹಿನ್ನೆಲೆಯಲ್ಲಿ ತಮ್ಮನ್ನು ಕಂಡುಕೊಳ್ಳುವುದಕ್ಕೆ ಪ್ರಯತ್ನಪಟ್ಟವರು. ಅಡಿಗರ ಕಾವ್ಯದಿಂದ ಬಿಡುಗಡೆಗಾಗಿ ಒದ್ದಾಡಿದವರು. ಎಚ್.ಎಸ್.ಆರ್. ಕನ್ನಡದ ಲಯಗಾರಿಕೆಯ ಹಿನ್ನೆಲೆಯಲ್ಲಿ ಅವರ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಗುರುತಿಸುತ್ತಾರೆ. ಹೆಚ್ಚು ಕಡಿಮೆ ಇದೇ ಅಭಿಪ್ರಾಯವನ್ನು ಎಲ್. ಹನುಮಂತಯ್ಯನವರ ಬಗೆಗೆ ಹೇಳಬಹುದು. ಇವರಿಗೆ ಸಮಕಾಲೀನ ರಾಜಕೀಯವು ದಲಿತ ಸಮುದಾಯಗಳನ್ನು ಬಳಸಿಕೊಳ್ಳುತ್ತಿರುವ ರೀತಿಯನ್ನು ಕಂಡು ಸಂಕಟಗಳಿವೆ. ಮುಖ್ಯವಾಗಿ, ಉತ್ತರ ಭಾರತದ ರಾಜಕೀಯವು ಇವರನ್ನು ಹೆಚ್ಚು ಕಾಡಿದಂತೆ ಕಾಣಿಸುತ್ತದೆ. ಸಾಮಾನ್ಯವಾಗಿ ತಮ್ಮ ಅಸ್ತಿತ್ವವನ್ನು ಕಾವ್ಯಚಿಂತನೆಯ ಗರ್ಭದಲ್ಲಿ ಅಡಗಿಸಿಟ್ಟಿರುವುದು ಇವರಿಬ್ಬರ ವಿಶಿಷ್ಟತೆ. ಎಚ್.ಎಸ್.ಆರ್. ತಮ್ಮ ಸಮಕಾಲೀನರಾದ ಇನ್ನಿಬ್ಬರು ಮುಖ್ಯ ಕವಿಗಳಾದ ಅರವಿಂದ ಮಾಲಗತ್ತಿ ಮತ್ತು ಎಸ್. ಜಿ. ಸಿದ್ಧರಾಮಯ್ಯ ಅವರನ್ನು ಕುರಿತು ವಿವರವಾಗಿ ಚರ್ಚಿಸಿದ್ದಾರೆ. ಎಸ್. ಜಿ. ಸಿದ್ಧರಾಮಯ್ಯನವರು ನವ್ಯದ ಸಿದ್ಧಾಂತಗಳು,

ಭಾಷೆ, ಮತ್ತು ಲಯಗಾರಿಕೆಯಿಂದ ಬಿಡಿಸಿಕೊಳ್ಳಲು ಇಂದಿಗೂ ಪ್ರಯತ್ನಿಸುತ್ತಿದ್ದಾರೆ. ಆದರೂ ಅವರು ಇಂದು ನಮಗೆ ಮುಖ್ಯ ಕವಿಗಳಲ್ಲಿ ಒಬ್ಬರೆನಿಸುವುದು ಏಕೆಂದರೆ, ಕೃಷಿ ಬದುಕನ್ನು ಮತ್ತು ಕನ್ನಡ ಸಂಸ್ಕೃತಿಯ ಮುಖ್ಯ ಬೇರುಗಳಾದ ವಚನ, ತತ್ವ ಪರಂಪರೆಯನ್ನು, ಜನಪದವನ್ನು, ತಮ್ಮ ಕಾವ್ಯದಲ್ಲಿ ಗರ್ಭೀಕರಿಸಿಕೊಂಡಿರುವ ಕಾರಣಗಳಿಂದ. ಇವರು ಹೆಚ್ಚು ಜಾನಪದ ಕಥನಮಾರ್ಗವನ್ನು ಆರಿಸಿಕೊಂಡಿದ್ದಾರೆ ಎಂದು ಎಚ್.ಎಸ್.ಆರ್. ಅಭಿಪ್ರಾಯಪಡುತ್ತಾರೆ. ದಲಿತಕಾವ್ಯದಲ್ಲಿ ವಿಶಿಷ್ಟರಾದ ಅರವಿಂದ ಮಾಲಗತ್ತಿಯವರಿಂದ ತೀರಾ ಭಾವನಾತ್ಮಕವಲ್ಲದ, ಆಕ್ರೋಶವಲ್ಲದ ಕವಿತೆಗಳು ಬಂದಿವೆ. ಆಧುನಿಕ ಜಗತ್ತು ದಲಿತ ಪರಂಪರೆಯನ್ನು ಮೌನವಾಗಿಯೇ ಆವರಿಸಿಕೊಂಡಿರುವ ಬಗ್ಗೆ ಮಾಲಗತ್ತಿಯವರಿಗೆ ಆತಂಕವಿದೆ. ವಸಾಹತುಶಾಹಿ, ಜಾಗತೀಕರಣದಂತಹ ದೊಡ್ಡ ಪರಿಕಲ್ಪನೆಗಳನ್ನು ತಮ್ಮ ಕಾವ್ಯದಲ್ಲಿ ಪರಿಣಾಮಕಾರಿಯಾಗಿ ತರುತ್ತಾರೆ.

ಎಚ್.ಎಸ್.ಆರ್. ಕಥನವನ್ನು ಅಧ್ಯಯನ ಮಾಡುವಾಗಲೂ ಅನುಸರಿಸುವ ಮಾರ್ಗವೆಂದರೆ ಆಯಾ ಕಾಲಘಟ್ಟಗಳಲ್ಲಿ ಲೇಖಕರು ತಮ್ಮನ್ನು ಚಳುವಳಿಗಳೊಂದಿಗೆ ಗುರುತಿಸಿಕೊಳ್ಳುವುದು ಮತ್ತು ಅದರಿಂದ ಮುಕ್ತರಾದ ನಂತರ ಇಡುವ ಹೆಜ್ಜೆಗಳ ಕುರಿತು. 'ಸಂಗಡ'ದಲ್ಲಿ ಕಾಳೇಗೌಡರ ಕತೆಗಳನ್ನು ಮತ್ತೆ ಸೇರಿಸಿದ್ದಾರೆ. ಪ್ರಾಯಃ ಬರಗೂರರ ನಂತರ ಬಂಡಾಯವನ್ನು ತಮ್ಮ ಕಥೆಗಳಲ್ಲಿ ಸಂಪೂರ್ಣವಾಗಿ ಅನುಸಂಧಾನಗೊಳಿಸಿ, ಅದಕ್ಕೆ ಸೀಮಿತಗೊಳ್ಳದೆ ಹೊರಬಂದಿರುವ ಕಾರಣಗಳಿಗೋಸ್ಕರ ಮತ್ತೆ ಮುಖ್ಯವಾಗಿರಬಹುದೇನೋ. ಅಷ್ಟಕ್ಕೂ ಬಂಡಾಯದ ಆಶಯಗಳನ್ನು ಹಲವು ಲೇಖಕರು ಇನ್ನೂ ಅರ್ಥ ಮಾಡಿಕೊಂಡಂತೆ ಕಾಣಿಸುವುದಿಲ್ಲ. ಪ್ರಾದೇಶಿಕ ಮತ್ತು ವೈಯಕ್ತಿಕ ಅನುಭವಗಳ ಸಂಕಟಗಳೇ ಬಂಡಾಯದ ಮೂಲವೆಂದರೆ ತಪ್ಪಾಗುತ್ತದೆ. ಎಚ್.ಎಸ್.ಆರ್. ಇದನ್ನು ನಾಗವಾರರ ಕಥನ ಕಲೆಗಾರಿಕೆಯ ಕಸಬುಗಾರಿಕೆ, ಪ್ರಾದೇಶಿಕ ಸಂಸ್ಕೃತಿಗಳ ಹಿನ್ನೆಲೆಯಲ್ಲಿ ಚರ್ಚಿಸುತ್ತಾರೆ. ಇವರ ಸಂಗಡದಲ್ಲೇ ಚರ್ಚಿಸಬಹುದಾದ ಮತ್ತೊಬ್ಬ ಕತೆಗಾರ ಕಾ.ತ. ಚಿಕ್ಕಣ್ಣ. ಪ್ರಾದೇಶಿಕವಾಗಿ ಹಳೇ ಮೈಸೂರು ಪ್ರಾಂತ್ಯದ ಗ್ರಾಮೀಣ ಸೊಗಡು ಇವರ ಕತೆಗಳ ಮುಖ್ಯ ಭಿತ್ತಿ. ಎಚ್.ಎಸ್.ಆರ್.ಅವರ ಈ ಮಾತುಗಳು ನಮಗೆ ಮುಖ್ಯವಾಗಿ ಕಂಡಿವೆ: ''ಕೋಮುವಾದ ಹಾಗೂ ಜಾತೀಯತೆಗಳು ಸ್ಥೂಲ ನೆಲೆಯಲ್ಲಿ ಕಡಿಮೆಯಾದಂತೆ ಕಂಡರೂ ಇನ್ನಷ್ಟು ಸೂಕ್ಷ್ಮವಾಗಿ ನೆಲೆಯೂರಿವೆ'' (ಪು. ೪). ಕನ್ನಡದ ಬಹುಮುಖ್ಯ ಕತೆಗಾರರಲ್ಲಿ ಒಬ್ಬರಾಗಿರುವ ಅಮರೇಶ್ ನುಗಡೋಣಿಯವರ 'ತಮಂಧದ ಕೇಡು' ಕಥಾಸಂಕಲನಕ್ಕೆ ಬರೆದಿರುವ ಮುನ್ನುಡಿ ಮಾತುಗಳು ಕೇವಲ ಅವರ ವೈಯಕ್ತಿಕ ಕಥನಗಾರಿಕೆಗೆ ಮಾತ್ರವಲ್ಲದೆ ಹೈದರಾಬಾದ್ ಕರ್ನಾಟಕದ, ಆ ಮೂಲಕ ಇಡೀ ಕರ್ನಾಟಕದ ಕೆಲವು ಆಶಯಗಳನ್ನು ವ್ಯಕ್ತಪಡಿಸುತ್ತವೆ. ಈ ಹಿಂದೆ ಬಿಸಿಲ ಹನಿಗಳಿಗೆ ಸಾಮೂಹಿಕವಾಗಿ ಬರೆಯುವಾಗಲೂ, ಹೈದರಾಬಾದ್ ಕರ್ನಾಟಕದ ಬರಹಗಾರರು 'ದ್ವೀಪದಲ್ಲಿ ಬದುಕಿ ಬರೆದ ಲೇಖಕರು' ಎಂಬಂತೆ ಗೋಚರಿಸುತ್ತಾರೆ. ಈ ಭಾಗಕ್ಕೆ ಬಳ್ಳಾರಿಯ ಕುಂ.ವೀ. ಅವರು ಸೇರಿಕೊಂಡರೆ ಅವರಿಗೆ ದಕ್ಕಿದ ಪ್ರಾಮುಖ್ಯತೆ ಉಳಿದ ಕತೆಗಾರರಿಗೆ ಸಿಗಲಿಲ್ಲವೇನೋ. ಕನ್ನಡನಾಡಿಗೆ ಬಹುದೊಡ್ಡ ವಚನ ಪರಂಪರೆಯನ್ನು ನೀಡಿದ ಹೈದರಾಬಾದ್ ಕರ್ನಾಟಕ ಪ್ರದೇಶವು ಹೊಸಗನ್ನಡದಲ್ಲಿ ಯಾಕಿಷ್ಟು ನಿರ್ಲಕ್ಷ್ಯಕ್ಕೆ ಒಳಗಾಯಿತು ಎಂಬುದು ಇಂದಿಗೂ ಆಶ್ಚರ್ಯವನ್ನುಂಟುಮಾಡುತ್ತದೆ. ನುಗಡೋಣಿಯವರ ಹಿಂದಿನ ಕತೆಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಎಚ್.ಎಸ್.ಆರ್. ದೀರ್ಘವಾಗಿ ಚರ್ಚಿಸಿದ್ದಾರೆ. ಮುಖ್ಯವಾಗಿ ಕಲ್ಯಾಣದ ಬದುಕನ್ನು ನಾಟಕ ಸಾಹಿತ್ಯದಲ್ಲಿ ನೋಡಿದ್ದೇವೆ ಮತ್ತು ಕಾದಂಬರಿಯಲ್ಲಿ ಗಮನಿಸಿದ್ದೇವೆ. ಆದರೆ ಕಥನದಲ್ಲಿ ಅಪರೂಪವೆಂದೇ ಹೇಳಬಹುದು. ಬಸವಣ್ಣನವರ ಕಾಲದ ಆಶಯಗಳನ್ನು ಸಮಕಾಲೀನಗೊಳಿಸುವುದು, ಹಾಗೂ ವರ್ತಮಾನದೊಂದಿಗೆ ಮುಖಾಮುಖಿಯಾಗಿಸುವುದು ಈ ಕತೆಗಳ ಮುಖ್ಯ ಲಕ್ಷಣವೆಂದು ಹೇಳಬಹುದು.

''ಬಸವಣ್ಣನವರ ಕಾಲದಲ್ಲಿ, ಅದರಲ್ಲೂ ಅಮರೇಶರ ತವರಾದ ಕಲ್ಯಾಣದ ಕರ್ನಾಟಕದಲ್ಲಿ, ನಡೆದ ಸಾಮಾಜಿಕ ಕ್ರಾಂತಿಯ ಆಶಯಗಳು ಮತ್ತು ನಂತರದ ಪತನ ಈ ಲೇಖಕರ ವಿಷಾದ ಮೂಲಗಳಲ್ಲಿ ಒಂದು. ದುರಗನೇ ಹೇಳುವ ''ಇದೇನು ಬಸ್ಣಣ್ಣಪ್ನ ಕಾಲ ಏನೆಲಾ ! ಚಪ್ಪಿ ಹೊಲಿವ ಕೈಯಿಗ ಲಿಂಗ ಬರದ್ಕಾ'' (ಪು. ೨೧೧) ಎಂಬ ಮಾತು ಇಲ್ಲಿ ಗಮನೀಯ. ಈ ರೀತಿಯ ಮಾತುಗಳ ಮೂಲಕ ಕೆಲವು ಸಾಮಾಜಿಕ ಪ್ರಶ್ನೆಗಳಿಗೆ ಉತ್ತರಗಳನ್ನೂ ಕಂಡುಕೊಳ್ಳಲಿಕ್ಕೆ ಪ್ರಯತ್ನಿಸುತ್ತಾರೆ.

'ಸಂಗಡ'ದಲ್ಲಿ ಕಥಾಪ್ರಕಾರಗಳನ್ನು ಕುರಿತು ಬರೆದಿರುವ ಲೇಖನಗಳಲ್ಲಿ ಹೆಚ್ಚು ಪರಿಣಾಮಕಾರಿಯಾದ್ದು ಲೋಕೇಶ್ ಅಗಸನಕಟ್ಟೆಯವರ ಕತೆಗಳನ್ನು ಕುರಿತಾಗಿದ್ದು, ಈ ಲೇಖನ ಕೇವಲ ಲೋಕೇಶ್ ಅವರ ಕತೆಗಳ ಬಗ್ಗೆ ನಡೆಸಿರುವ ಚರ್ಚೆ ಮಾತ್ರವಲ್ಲದೆ ಪ್ರಸ್ತುತ ಕನ್ನಡ ಕಥಾ ಜಗತ್ತು ವಿಸ್ತರಿಸಿಕೊಂಡಿರುವ ವ್ಯಾಪ್ತಿಯನ್ನು ಅನಾವರಣಗೊಳಿಸುತ್ತದೆ. ಮುಖ್ಯವಾಗಿ ಪ್ರಾದೇಶಿಕ ಹಾಗೂ ಶೈಲಿಗಳ ಸವಾಲುಗಳಿಗೆ ನಮ್ಮ ಕತೆಗಾರರು ಮುಖಾಮುಖಿಗೊಂಡಿದ್ದು, ದೇವನೂರು ಮಹಾದೇವ ಮಾರ್ಗವನ್ನು ಮೀರಿ ಬರೆಯುವುದು ಅಸಾಧ್ಯವಾದರೂ ಲೋಕೇಶ್ ಅವರು ಆ ಮಾರ್ಗವನ್ನು ಮುರಿದು ಕಟ್ಟುವಲ್ಲಿ ಯಶಸ್ವಿಯಾಗಿದ್ದಾರೆ. ''ಕನ್ನಡ ಕಥೆಗಳು ತಮ್ಮ 'ಕಥೆತನ'ವನ್ನು ಕಳೆದುಕೊಂಡು 'ಕಥನದ ಲಕ್ಷಣ'ಗಳನ್ನು ಪಡೆದುಕೊಳ್ಳುತ್ತಿರುವುದು ಈ ಕಾಲದ ಮುಖ್ಯ ಲಕ್ಷಣ, ಬೆಳವಣಿಗೆ. ಇದು ಕೇವಲ ಸಾಹಿತ್ಯ ಪ್ರಕಾರಗಳ ಪ್ರಶ್ನೆಯಲ್ಲಿ ಕಾದಂಬರಿ, ನೀಳ್ಗತೆ, ಸಣ್ಣಕತೆ, ಮುಂತಾದ ಗಡಿಗೆರೆಗಳನ್ನು ನೀಡುವ ವಿಸ್ತರಿಸುವ ಪ್ರಶ್ನೆಯಾಗಿ ಮಾತ್ರ ಅದನ್ನು ನೋಡಬೇಕಾಗಿಲ್ಲ. ಬದಲಾಗಿ ಇಲ್ಲಿ 'ವಾಸ್ತವದ ಕಲಾತ್ಮಕವಾದ ಮಂಡನೆ' ಮತ್ತು ಕಾಲ್ಪನಿಕವಾದ ಸಂಗತಿಗಳ ನಡುವಿನ ಆಯ್ಕೆಯು ಮುಖ್ಯವಾಗುತ್ತದೆ'' (ಪು. ೨೨೩). ಲೋಕೇಶ್ ಅವರ ಎಚ್.ಎಸ್.ಆರ್. ದಾಖಲಿಸುವ ಮತ್ತೊಂದು ಸಂಗತಿ ಎಂದರೆ ಅಂತರ್ ಪಠ್ಯೀಯತೆಯ ಗುಣ. ಇದು ಇತ್ತೀಚೆಗೆ ಕಥನದಲ್ಲಿ ಉದ್ಭವಿಸುತ್ತಿರುವ ಲಕ್ಷಣ. ಲೋಕೇಶ ಅವರು ತಮ್ಮ ಕತೆಗಳಲ್ಲಿ ಇದನ್ನು ಹೆಚ್ಚಾಗಿ ಬಳಸಿಕೊಂಡಿದ್ದಾರೆ.

'ಶೂದ್ರ' ಪತ್ರಿಕೆಯ ಬಗ್ಗೆ ಮತ್ತು ಅದರ ಸಾಂಸ್ಕೃತಿಕ ಅನನ್ಯತೆಯನ್ನು ಕುರಿತು ಎಚ್.ಎಸ್.ಆರ್. ಅವರು ಶೂದ್ರ ಅವರ ಬರಹಗಳ ಹಿನ್ನೆಲೆಯಲ್ಲಿ ಪರಿಣಾಮಕಾರಿಯಾಗಿ ಮಾತನಾಡುತ್ತಾರೆ. ಅವರ ಮಾತುಗಳನ್ನು ಗಮನಿಸಿ: ''ಈಚಿನ ಹಲವು ವರ್ಷಗಳಿಂದ ಇವನು ಜಂಗಮ ಜನಾರ್ಧನನಾದರೆ, ಸರ್ವಸಂಗಿಯಾದರೆ, ನಾನು ದೂರ ಉಳಿದವನು. ಸಾರ್ವಜನಿಕ ಸಂಗದಿಂದ ಹುಟ್ಟಬಹುದಾದ ಆರೋಗ್ಯ ಆನಂದಗಳನ್ನು ದೂರವಿಟ್ಟವನು. ಶೂದ್ರನ 'ದುಷ್ಟಕೂಟ'ದ ಚಟುವಟಿಕೆಗಳಿಂದಲಂತೂ ಗಾವುದ ದೂರ ಉಳಿದವನು'' (ಪು. ೨೭೪). ಇಷ್ಟನ್ನು ಹೇಳಿದರೂ ಪತ್ರಿಕೆಯ ಪ್ರಾಮುಖ್ಯತೆಯನ್ನು ಹೊಗಳುತ್ತಾರೆ. ವ್ಯಕ್ತಿ-ವ್ಯಕ್ತಿತ್ವ ಸಮಾಜ ಈ ಮೂರು ಅಂಶಗಳನ್ನು ಎಚ್.ಎಸ್.ಆರ್. ಈ ಬರೆಹಗಳ ಹಿನ್ನೆಲೆಯಲ್ಲಿ ಅನುಸಂಧಾನಗೊಳಿಸುವ ಕ್ರಮ ವಿಶಿಷ್ಟ ರೀತಿಯದು. ಇದೇ ರೀತಿಯ ಅನುಭವಗಳನ್ನು ತಮ್ಮ 'ದಾದಾಗಿರಿಯ ದಿನಗಳು' ಹೆಸರಿನಲ್ಲಿ ದಾಖಲಿಸಿರುವ ಅಗ್ನಿ ಶ್ರೀಧರ್ ಅವರನ್ನು ಕುರಿತು ಬರೆಯುವಾಗಲೂ ಎಚ್ಚರಿಕೆಯ ಹಾದಿಗಳನ್ನು ಹುಡುಕಿಕೊಳ್ಳುತ್ತಾರೆ. ಜಗತ್ತಿನ ಇತರ ಭಾಷೆಗಳಲ್ಲಿ ಬಂದಿರುವ ಇದೇ ಮಾದರಿಯ ಬರೆಹಗಳನ್ನು ವಿಮರ್ಶೆಗಳನ್ನು ನೆನಪಲ್ಲಿಟ್ಟುಕೊಂಡು ಚರ್ಚಿಸಿದ್ದಾರೆ. ಭೂಗತ ಲೋಕದ ಆವರಣವನ್ನು ಶ್ರೀಧರ್ ಅವರು ಹೇಗೆ ದಾಖಲಿಸಿದ್ದಾರೋ ಆ ಅಂಶಗಳನ್ನು ವಿಮರ್ಶೆಯ ಚೌಕಟ್ಟಿಗೆ ಎಳೆದುಕೊಂಡು ಬರುವಲ್ಲಿ ಎಚ್.ಎಸ್.ಆರ್. ಯಶಸ್ವಿಯಾಗಿದ್ದಾರೆ. ಮುಖ್ಯವಾಗಿ ಇಲ್ಲಿ ಮಾನವೀಯ ಸಂಬಂಧಗಳು, ಪ್ರೀತಿ-ಆತ್ಮೀಯತೆಗಳು ಗೌಣವಾಗುವ ಸಂದರ್ಭಗಳೇ ಜಾಸ್ತಿ. ಆದರೆ ಶ್ರೀಧರ್ ಅವರ ಬರೆಹಗಳಲ್ಲೂ ಇದನ್ನು ಗುರುತಿಸಬಹುದೆಂದು ಹೇಳುತ್ತಾರೆ. ಕನ್ನಡ ಸಾಹಿತ್ಯಲೋಕ ಈ ತರಹದ ಬರಹಗಳ ಕಡೆ ಹೆಚ್ಚು ಮುಖ ಮಾಡದೇ ಇರುವುದು ದುರಂತ.

ಪ್ರಬಂಧಗಳಲ್ಲಿ ಬದುಕಿನ ಸಣ್ಣ ವಿವರಗಳನ್ನು ಸಂಕೀರ್ಣದೆಡೆಗೆ ಸಾಗಿಸುವ ಕ್ರಮ ಪ್ರಬಂಧಕಾರರ ಕೌಶಲಗಳನ್ನು ಮೂರ್ತಿಯವರ ಪ್ರಬಂಧಗಳ ಹಿನ್ನೆಲೆಯಲ್ಲಿ ಎಚ್.ಎಸ್.ಆರ್. ಗುರುತಿಸುತ್ತಾರೆ. ಇದಲ್ಲದೆ ತಾನು ಸಂಪಾದಿಸಿರುವ ಹೊಸತು ವಾಚಿಕೆ, ಶತಮಾನದ ಸಾಹಿತ್ಯ ವಿಮರ್ಶೆ, ಮುಂತಾದ ಪುಸ್ತಕಗಳಿಗೆ ಬರೆದಿರುವ ಪ್ರಸ್ತಾವನೆಗಳಲ್ಲಿ ಸಮಕಾಲೀನ ಸಾಹಿತ್ಯ ವಿಮರ್ಶೆಯನ್ನು ಕುರಿತಾದ ಮುಖ್ಯ ಸಂವಾದಗಳನ್ನು ಬೆಳೆಸಿದ್ದಾರೆ. ತಮ್ಮ ಕೃತಿಯನ್ನು ಕುರಿತು ಬರೆಯುವಾಗ ಎಚ್.ಎಸ್.ಆರ್. ಆ ಕೃತಿಯ ಲೇಖಕನ ಇತರ ಕೃತಿಗಳನ್ನು ಗಮನಿಸಿ ಹಾಗೂ ಅವರ ಸಮಕಾಲೀನ ಲೇಖಕರ ಹಿನ್ನೆಲೆಯಲ್ಲಿ ಚರ್ಚಿಸಿ ಕೆಲವು ಮಹತ್ವದ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಾರೆ. 'ಸಂಗಡ'ದಲ್ಲಿರುವ ಬರೆಹಗಳು ಕೇವಲ ಮುನ್ನುಡಿಗಳಲ್ಲ, ಬದಲಾಗಿ ಆಯಾ ಲೇಖಕರ ಒಟ್ಟು ಆಶಯಗಳನ್ನು ಅವು ಒಳಗು ಮಾಡಿಕೊಂಡಿವೆ, ಎನ್ನಬಹುದು.

**ಡಾ॥ ಎನ್. ಸುರೇಶ್ ನಾಗಲಮಡಿಕೆ**
ನಂ. ೫೮, ೨ನೇ ಮಹಡಿ, ೫ನೇ ಮುಖ್ಯರಸ್ತೆ, ನರಸಿಂಹಲು ಬಡಾವಣೆ,
ನಂದಿನಿ ಲೇಔಟ್, ಬೆಂಗಳೂರು - ೫೬೦ ೦೯೬

# ಸ್ಥಾನಮಾನ

ಕೀರ್ತಿ, ಪ್ರತಿಷ್ಠೆ, ಸ್ಥಾನಮಾನದ ಕುರಿತಾಗಿ ತಲೆಕೆಡಿಸಿಕೊಳ್ಳದ ಮಂದಿ ಬಹಳ ವಿರಳ. ತಾನೂ ಒಂದು ಜನವೆನಿಸಿಕೊಳ್ಳಬೇಕು, ತನ್ನನ್ನು ಎಲ್ಲರೂ ಗುರುತಿಸಬೇಕು, ಕೀರ್ತಿಯ ಶಿಖರಕ್ಕೇರಬೇಕು ಎಂದೆಲ್ಲ ಕನಸು ಕಟ್ಟುವ ಮಂದಿಯಿಂದಲೇ ತುಂಬಿಬಿಟ್ಟಿದೆ ಈ ಜಗತ್ತು. ಹಾಗೆ ನೋಡಿದರೆ ಈ ಸ್ಥಾನಮಾನದ ಅಪೇಕ್ಷೆ ಮನುಷ್ಯನ ಆಶಾವಾದಿತನದ ಕುರುಹು ಎನ್ನಬಹುದು. ಆರೋಗ್ಯಯುಕ್ತವಾದ ಬೆಳವಣಿಗೆಗೆ ಒಂದು ಮಿತಿಯಲ್ಲಿ ಆಶಾವಾದಿತನ ಉತ್ತಮವಾದರೂ, ಅದು ಅತಿಯಾದರೆ ನಗೆಗೀಡಾಗಬಹುದು, ನಿರಾಶಾವಾದಿಯಂತೆ ಹುಂಬತನವೂ ಆಗಿಬಿಡಬಹುದು. ಇದು ವ್ಯಕ್ತಿಸ್ತರಕ್ಕಿಂತಲೂ ರಾಷ್ಟ್ರ ಮಟ್ಟದಲ್ಲಿ ನಡೆದಾಗ, ಅಮೆರಿಕದಂತೆ ಜಗತ್ತಿನ ದೊರೆಯಾಗುವ ಹಂಬಲದಿಂದ ಮಾನವೀಯತೆಯನ್ನೂ ಸರಕಾಗಿಸುವ ಕಠೋರತೆ ವಿಜೃಂಭಿಸಿಬಿಡುತ್ತದೆ. ಇರಲಿ ಬಿಡಿ, ನಾವು ಕೇವಲ ಮನುಷ್ಯರ ಕುರಿತೇ ನೋಡೋಣ, ಅಂತೂ ಈ ಸ್ಥಾನಮಾನದ ಬಯಕೆ ಸಾಮಾನ್ಯವಾಗಿಹೋಗಿದೆ ಎನ್ನೋಣವೇ?



■ ಸುಬ್ರಹ್ಮಣ್ಯ ಎಸ್. ಆರ್.

ಸ್ಥಾನಮಾನದ ಕಿರಿಕಿರಿ ನಮ್ಮೆಲ್ಲರ ಮನೆಯ ದೋಸೆಯ ತೂತೇ ಆಗಿಹೋಗಿದೆ. ನಿಮ್ಮ ಮನೆಯಲ್ಲಿ ನಿಮ್ಮ ಪತ್ನಿಯೇ ನಿಮ್ಮನ್ನು ಈ ಸ್ಥಾನಮಾನದ ಕುರಿತಾಗಿ ಮೊಟಕಿದ ಸಂಗತಿ ನಿಮಗೀಗ ನೆನಪಾಗಿರಲೇಬೇಕಲ್ಲ! ''ನನ್ನನ್ನು ನೀವೇನು ಮನೆಕೆಲಸಕ್ಕಾಗಿ ಮದುವೆಯಾದಿರಾ? ಈ ಮನೆಯಲ್ಲಿ ನನಗೇನು ಸ್ಥಾನವನ್ನು ನೀವು ಕೊಟ್ಟಿದ್ದೀರಿ? ನಿಮ್ಮ ಮನೆಯವರ ಚಾಕರಿ ಮಾಡಿಕೊಂಡು ಇರುವುದಷ್ಟೆ ನನ್ನ ಕರ್ಮ. ಈ ಕರ್ಮಕ್ಕೆ ಯಾಕಾದರೂ ಮದುವೆಯಾದಿರೋ?'' ಎಂಬ ಪತ್ನಿಯ ಕೆಚ್ಚಿನ ನುಡಿ ಕೇವಲ ಸ್ತ್ರೀವಾದಿಯ ಅಡಿಪಾಯದ ಮಾತು ಮಾತ್ರವಲ್ಲ, ಸ್ಥಾನಮಾನದ ಕುರಿತಾದ ಕಾಳಜಿ ಎಂದೇ ನಾನು ಅರ್ಥ ಮಾಡಿಕೊಂಡಿರುವುದು. ಇಲ್ಲಿ ನೀವು, ''ಅಲ್ಲ ಕಣೇ, ನೀ ನನ್ನ ಹೃದಯವಾಸಿ, ಪ್ರೇಮಪಕ್ಷಿ,'' ಮುಂತಾದ ಕಾವ್ಯದ ಸವಕಲನ್ನು ಉದುರಿಸಿದಿರೋ, ನಿಮ್ಮ ಸ್ಥಾನಮಾನದ ನಿರ್ಣಯ ಆ ಕ್ಷಣದಲ್ಲೇ ಆಗಿಬಿಡುತ್ತದೆ! ಪತಿಪತ್ನಿಯರೊಳಗೇ ಯಾರ ಮಾತು ನಡೆಯುವುದು ಎಂಬ ಕುರಿತಾಗಿಯೇ ಹಲವು ಮನೆಗಳಲ್ಲಿ ಆಗಾಗ ಜಗಳಗಳಾಗುತ್ತಿರುವುದೂ ಬಹಿರಂಗ ಸತ್ಯ.

ಈ ಸ್ಥಾನಮಾನದ ಕುರಿತಾದ ಜಗಳಗಳು ಈಗಿನವರ ಸೊತ್ತೇನೂ ಅಲ್ಲ. ಹಿಂದಿನ ಚರಿತ್ರೆ, ಪುರಾಣಗಳ ಕಾಲದಿಂದಲೂ ಇದು ನಡೆದೇ ಇತ್ತು. ರಾಜ ರಾಜರೊಳಗೆ ಸಾರ್ವಭೌಮತ್ವಕ್ಕಾಗಿ ನಡೆಯುತ್ತಿದ್ದ ಕದನಗಳು ಅಷ್ಟಿಷ್ಟಲ್ಲ. ಇಲ್ಲಿನ ಇನ್ನೂ ಒಂದು ವಿಶೇಷವೆಂದರೆ ಇವರ ಪ್ರತೀ ವಿಜಯಗಳನ್ನು ಹಾಡಿ ಹೊಗಳುವ ವಂದಿಮಾಗಧರು ಕ್ಷಣಕ್ಷಣಕ್ಕೂ ನಮಗೆ ಅವರ ಸ್ಥಾನಮಾನಗಳನ್ನು ನೆನಪಿಸುತ್ತಿರುತ್ತಾರೆ. ನಮಗೆ ಕೇಳಿಸಿಕೊಳ್ಳುವ ಆಸಕ್ತಿ ಇದೆಯೋ ಇಲ್ಲವೋ ಎಂಬುದು ಬೇರೆಯೆ ವಿಚಾರ. ಈಗಲೂ ನಮ್ಮ ರಾಜಕೀಯರಂಗದಲ್ಲಿ ಇದರ ಪಳೆಯುಳಿಕೆಗಳನ್ನು ಕಾಣಬಹುದು. ಆಡಳಿತಾರೂಢ ಪಕ್ಷಗಳು ತಾವು ಜನಸಾಮಾನ್ಯರಿಗೆ ಒದಗಿಸಿದ ಸವಲತ್ತುಗಳನ್ನು, ಕೆಲವು ಸಲ ಹಿಂದಿನ ಆಡಳಿತಪಕ್ಷಗಳ ಮುಂದುವರಿದ ನೀತಿಯನ್ನೂ ತಮ್ಮ ಪಕ್ಷದ್ದೇ ಕಾಣಿಕೆ ಎಂದು ಢಾಣಾ ಢಂಗುರ ಸಾರುವ ರಾಜಕಾರಣಿಗಳನ್ನು ಮತ್ತವರ ಹಿಂಬಾಲಕರನ್ನು ನೋಡಿದರೆ, ಪ್ರಭುತ್ವವನ್ನು ಹೊಂದಿದವರೆಲ್ಲರೂ ಹೀಗೆ ಸ್ಥಾನಮಾನಕ್ಕಾಗಿ ವಂದಿಮಾಗಧಿತನ ಮಾಡಿಕೊಳ್ಳುವ ಪ್ರವೃತ್ತಿ ನಿರಂತರವಾಗಿ ನಡೆಯುತ್ತಿದೆ ಎನ್ನಬಹುದು. ಇನ್ನು ಪುರಾಣ ಕಾಲದಲ್ಲಿ ಇಂದ್ರ ಪದವಿಗಾಗಿ ಕಲಹಗಳು ಏರ್ಪಡುತ್ತಿದ್ದವು. ನಮ್ಮ ದೇವಾನುದೇವತೆಗಳ ಸ್ಥಾನನಿರ್ಣಯ ಈಗಾಗಲೇ ಆಗಿಹೋಗಿದೆ. ಒಬ್ಬನ ಕೆಲಸದಲ್ಲಿ ಇನ್ನೊಬ್ಬ ಮೂಗು ತೂರಿಸದೆ ಸ್ಥಾನಮಾನಗಳನ್ನು ಕಾಪಾಡಿಕೊಂಡು ಬಂದಿದ್ದಾರೆ. ವಿಶ್ವಾಮಿತ್ರ ಋಷಿ ಬ್ರಹ್ಮರ್ಷಿ ಪದವಿಗೋಸ್ಕರ ಸಶರೀರಿಯಾಗಿ ತ್ರಿಶಂಕುವನ್ನು ನಿಜವಾದ ಸ್ವರ್ಗಕ್ಕೆ ಕಳುಹಿಸಲಸಮರ್ಥನಾಗಿ ತ್ರಿಶಂಕುವಿಗಾಗಿಯೇ ಒಂದು ತೇಲಾಡುವ ಸ್ವರ್ಗ ನಿರ್ಮಿಸಿ ಸ್ಥಾನ ಕೊಟ್ಟನಂತೆ!

ಚರಿತ್ರೆ, ಪುರಾಣಗಳ ಮಾತು ಬಿಡಿ, ನಾನೊಮ್ಮೆ ನನ್ನ ಸಂಬಂಧಿಕರ ಮದುವೆಗೆಂದು ದಿನ ಮುಂದಾಗಿ ಪತ್ನೀ ಸಮೇತನಾಗಿ ಹೋಗಿದ್ದೆ. ವಧುವಿನ ಮನೆಯವರು ತುಂಬ ಸ್ಥಿತಿವಂತರೇನಲ್ಲ. ಆದ್ದರಿಂದ ತೀರಾ ಸರಳವಾಗಿ, ಸುಂದರವಾಗಿ ಸಮಾರಂಭವನ್ನು ಏರ್ಪಡಿಸಿದ್ದರು. ಆದರೆ ವರನ ಕಡೆಯವರು ಭಾರೀ ಶ್ರೀಮಂತರಾಗಿದ್ದರು. ಅವರು ತಮ್ಮ ಸ್ಥಾನಮಾನಗಳಿಗನುಗುಣವಾಗಿ ಬಾಜಾಬಜಂತ್ರಿ ವಾಲಗದವರನ್ನು ಮದುವೆ ಮನೆಗೆ ಅವರ ಖರ್ಚಿನಲ್ಲೆ ಮುಂಚಿತವಾಗಿ ಕಳುಹಿಸಿ ತಮ್ಮ ದಿಬ್ಬಣವನ್ನು ಎದುರುಗೊಳ್ಳಲು ವ್ಯವಸ್ಥೆ ಮಾಡಿಕೊಂಡಿದ್ದರು! ಸರಳ ಸಮಾರಂಭದಲ್ಲಿ ಈ 'ಭರ್ಜರಿ' ಬಂದ ಪರಿಯನ್ನು

ವಿಚಾರಿಸಿದಾಗ ವರನ ಮನೆಯವರು ಅವರ ಸ್ಥಾನಮಾನ ಕಾಪಾಡಿಕೊಳ್ಳಲು ಈ ಏರ್ಪಾಡು ಮಾಡಿದ್ದರು ಎಂದು ತಿಳಿಯಿತು. ಅಂತೂ ಇರುವ ಮಿತಿಗಳಲ್ಲಿಯೇ ಇವರು ತಮ್ಮ ಸ್ಥಾನಮಾನಗಳನ್ನು ತಾವೇ ಗುರುತಿಸಿಕೊಂಡು (!) ಆ ಮಟ್ಟವನ್ನು ಕಾಯ್ದುಕೊಳ್ಳಲು ಅಥವಾ ಏರಿಸಿಕೊಳ್ಳಲು ಸಮಾರಂಭಗಳಲ್ಲೂ ಪಡಿಪಾಟಲು ಪಡುತ್ತಿರುತ್ತಾರೆ. ಹೀಗೆಯೇ ಕೆಲವರು ತಮಗಾಗಿ ಸನ್ಮಾನ ಸಭೆಗಳನ್ನು ತಾವೇ ಏರ್ಪಾಡು ಮಾಡಿಕೊಳ್ಳುವವರೂ ಇರುತ್ತಾರೆ.

ಅಂತೂ ಈ ಸ್ಥಾನಮಾನಗಳ ಆಶೆ ಸರ್ವವ್ಯಾಪಿಯಾದದ್ದು. ಶೈಕ್ಷಣಿಕ ಸಂಸ್ಥೆಗಳು, ಧಾರ್ಮಿಕ ಸಂಸ್ಥೆಗಳಲ್ಲೂ ಕೂಡ ಇದು ವ್ಯಾಪಿಸಿ, ಅವು ತಮ್ಮ ಆಶಯವನ್ನೇ ಮರೆತುಬಿಡುವ ಅಪಾಯದಲ್ಲಿವೆ. ಇನ್ನು ಕಲಾಕ್ಷೇತ್ರಗಳತ್ತ ನೋಡಿದರೆ ಅಲ್ಲೂ ಕೂಡ ಸ್ಥಾನಮಾನದ ಕಸರತ್ತು ದಾಂಗುಡಿ ಇಡುತ್ತಿದೆ. ಈ ಬರಹಗಾರರ ಸ್ಥಾನಮಾನಗಳ ವಿಶ್ಲೇಷಣೆಗೆ ಬಂದರೆ ಕವಿಗಳಲ್ಲಿಯೇ ಭಾವಕವಿ, ನವ್ಯಕವಿ, ಚುಟುಕು ಕವಿ, ಕುಟುಕು ಕವಿ, ಮಹಾಕವಿಗಳೆಂದು ವಿಂಗಡಿಸಬಹುದಾದರೂ ಇವರೆಲ್ಲರನ್ನೂ ಲಹರಿಯ ಸ್ಥಾನದಲ್ಲಿ ಧ್ಯಾನಸ್ಥ ಭಂಗಿಯಲ್ಲಿ ನಿಲ್ಲಿಸಬಹುದು. ಇನ್ನು ಕಾದಂಬರಿಕಾರರನ್ನು ಮತ್ತು ಕತೆಗಾರರನ್ನು ಮಧ್ಯಮ ಸ್ಥಾನದಲ್ಲಿ ಎಂದರೆ ಸುತ್ತಮುತ್ತಲಿನ ಜಗತ್ತಿನ ಆಗುಹೋಗುಗಳನ್ನು ವರ್ಣಿಸಿ ಜನಜೀವನದ ಚಿತ್ರಣ ಕೊಡುವ ಭಾಷ್ಯಕಾರರ ಸ್ಥಾನದಲ್ಲಿ ನಿಲ್ಲಿಸಬಹುದು. ಇನ್ನು ಈ ಹಾಸ್ಯ ಬರಹಗಾರರು; ಇವರಿಗೂ ಒಂದು ಸ್ಥಾನಮಾನವಿದೆಯೆ? ಇವರ ಬರಹಗಳೋ ತೀರಾ ಲಘು ದಾಟಿಯವು, ಹಗುರ ಚಿಂತನೆಯವು, ಆದ್ದರಿಂದ ಇವರಿಗೆ ಕೊಡುವುದಿದ್ದರೂ ತೀರಾ ಲಘುವಾದ ಸ್ಥಾನವನ್ನು ಕೊಟ್ಟರೆ ಸಾಕು ಎಂಬ ಕುಚೋದ್ಯದ ಜಿಜ್ಞಾಸೆ ನಿಮಗಿರುವ ಹಾಗೆ ಕಾಣುತ್ತಿದೆಯಲ್ಲ? ಆದರೆ ಈ ಸ್ಥಾನವೇ ಅಲ್ಲದ ಸ್ಥಾನದ ಮಾನವನ್ನು ಹಾಸ್ಯಬರಹಗಾರರಿಗೆ ಕೊಡುವ ನಿಮ್ಮ ಆಕಾಂಕ್ಷೆ ನನಗೇನೂ ನ್ಯಾಯವೆಂದು ಕಾಣುವುದಿಲ್ಲ! ಸಮಾಜದ ಓರೆಕೋರೆಗಳನ್ನು, ವ್ಯವಸ್ಥೆಯಲ್ಲಿನ ಕೊಂಕುಗಳನ್ನು, ಈಗಿನ ಅನ್ವೇಷಣೆಯಂತೆ ಸಮಾಜದ ಆರೋಗ್ಯವನ್ನು ಸುಸ್ಥಿತಿಯಲ್ಲಿಡುವ ಕೆಲಸವನ್ನು ಮಾಡುತ್ತಿರುವ ಈ ಲಾಲಿತ್ಯದ ಮೋಡಿಗಾರರನ್ನು ವೈದ್ಯರ ಸ್ಥಾನದಲ್ಲಿ ನಿಲ್ಲಿಸಿದರೆ ನಿಮ್ಮ ಆಕ್ಷೇಪವೇನೂ ಇಲ್ಲ ತಾನೆ? ಹ್ಞಾಂ! ಅಂದ ಹಾಗೆ ಈ ವಿಮರ್ಶಕ ಮಹಾಶಯರನ್ನು ಎಲ್ಲಿ ಇಡೋಣ? ಬರಹಗಾರರೆಲ್ಲರನ್ನೂ ಅಳೆದು ತೂಗಿ ಸಾಹಿತ್ಯದ ಸ್ಥಾನಮಾನದ ನಿರ್ಣಯ ಮಾಡುವ ವಿಮರ್ಶಕರನ್ನು ಅಧ್ಯಾಪಕರ ಸ್ಥಾನದಲ್ಲಿರಿಸಿದರೆ ಔಚಿತ್ಯ ಪೂರ್ಣವಾದೀತು. ಹೀಗಾಗಿ ಸಂಕ್ಷಿಪ್ತವಾಗಿ ಹೇಳಬೇಕೆಂದರೆ, ಸಾಹಿತ್ಯಸೌಧದ ಅಡಿಪಾಯದಲ್ಲಿ ವಿಮರ್ಶಕ, ಗೋಡೆಯಲ್ಲಿ ಕಾದಂಬರಿಕಾರರು ಮತ್ತು ಕತೆಗಾರರು, ಛಾವಣಿಯಾಗಿ ಕವಿಗಳು, ಬಾಗಿಲುಗಳಾಗಿ ವೈಚಾರಿಕರು, ಕಿಟಕಿಗಳಾಗಿ ಹಾಸ್ಯಬರಹಗಾರರು ಸಮಾಜದಲ್ಲಿ ಸ್ಥಾನವನ್ನುಗಳಿಸಿಕೊಂಡಿದ್ದಾರೆನ್ನಬಹುದು. ಇದೊಂದು ಸಮರ್ಪಕವಾದ ಸ್ಥಾನಮಾನ ನಿರ್ಣಯ ಎಂಬ ಹೆಮ್ಮೆ ಖಂಡಿತ ನನಗಿಲ್ಲ, ಯಾಕೆಂದರೆ ನಾನು ಎಷ್ಟಾದರೂ ಲಘು ಚಿಂತನೆಯ ಲಘು ಮನುಷ್ಯ ತಾನೆ? ಇದಕ್ಕೆ ನನ್ನ ಸ್ವಾನುಭವವೇ ಸಾಕ್ಷಿಯಾಗಿದೆ. ನನ್ನ ಯಾವುದೇ ಸಲಹೆಗಳನ್ನು ಯಾರೂ ಕೂಡ ಮಾನ್ಯ ಮಾಡುವುದಿರಲಿ, ಮೂಸಿಯೂ ನೋಡುವುದಿಲ್ಲ! ''ಹ್ಞುಂ, ಇವನೇನು ಹೇಳಿಯಾನು ಮಣ್ಣು'', ಎಂಬ ಉಡಾಫೆಯ ಮುಖಭಾವವನ್ನು ಎಲ್ಲರೂ ನನ್ನನ್ನು ಕಂಡಾಗ ಪ್ರದರ್ಶಿಸಿಬಿಡುತ್ತಾರೆ. ಎಲ್ಲರೂ ನನ್ನನ್ನು ಲಘುವಾಗಿ ತೆಗೆದುಕೊಂಡು ಬಿಟ್ಟಿದ್ದಾರೆ! ಹೀಗಾಗಿ ನಾನು ಸ್ಥಾನಮಾನಕ್ಕೆ ಪಟ್ಟುಹಿಡಿದು ಪ್ರಯೋಜನವಿಲ್ಲ! ಪ್ರಾಪ್ತಿಯೇ ಇಲ್ಲವೆಂದಮೇಲೆ ಅರಸದಿರುವುದೇ ಜಾಣತನವಲ್ಲವೆ? ಸ್ಥಾನಮಾನಗಳು ಎಲ್ಲಿಯೂ ಸಿಗದವರು ಪಾಪ, ''ನಮಗೆ ಸ್ಥಾನಮಾನಗಳ ಆಕಾಂಕ್ಷೆಯೇ ಇಲ್ಲ, ನಮ್ಮ ಕೆಲಸವನ್ನು ನಾವು ನಿರ್ವಂಚನೆಯಿಂದ ಮಾಡಿಕೊಂಡಿರುತ್ತೇವೆ. ಶ್ರೀಕೃಷ್ಣನೇ ಹೇಳಿಲ್ಲವೆ ಕರ್ಮಣ್ಯೇ ವಾಧಿ...'' ಎಂದು ವೇದಾಂತ ಹೇಳುತ್ತಾ ಮನಸ್ಸಿನೊಳಗೇ ಸ್ಥಾನಮಾನಕ್ಕಾಗಿ ಹಂಬಲಿಸುತ್ತಿರುತ್ತಾರೆ. ಇನ್ನು ಇದ್ದ ಸ್ಥಾನಮಾನಗಳನ್ನು ಕಳೆದುಕೊಂಡವನಂತೂ ನೀರಿನಿಂದ ಹೊರಬಿದ್ದ ಮೀನಿನಂತೆ ಚಡಪಡಿಸುತ್ತಿರುತ್ತಾನೆ. ಮಾನ ಹೋದರೂ ಸ್ಥಾನ ಹೋಗಲಿಲ್ಲವೆಂದು ಸಮಾಧಾನ ಪಟ್ಟುಕೊಳ್ಳುವವರು ಹಲವರಾದರೆ, ಸ್ಥಾನ ಹೋದರೂ ಮಾನ ಹೋಗಲಿಲ್ಲ ಎಂದು ಹೆಮ್ಮೆಪಟ್ಟು ಕೊಳ್ಳುವವರು ಕೆಲವೇ ಮಂದಿ. ಅಷ್ಟಕ್ಕೂ ಸ್ಥಾನದಿಂದ ಮಾನವಲ್ಲ, ಮಾನದಿಂದ ನಮಗೆ ಸಿಗುವ ಸ್ಥಾನವೇ ಪರಮ ಪಾವನವಾದದ್ದು. ಹಾಗಾಗಿಯೇ ಯೇನಕೇನ ಪ್ರಕಾರೇಣದಿಂದ ಬರುವ ಪ್ರಸಿದ್ಧಿಗೆ ಬೆಲೆ ಇಲ್ಲ. ವಿದ್ಯಾರ್ಥಿ ಜೀವನದಲ್ಲಿ ಕೆಲವು ಅಧ್ಯಾಪಕರಾದರೂ ತಮ್ಮ ನಡೆನುಡಿ, ಪಾಠ ಪ್ರವಚನಗಳಿಂದಾಗಿ ನಮ್ಮ ಹೃದಯದಲ್ಲಿ ನೆಲೆಸಿರುತ್ತಾರೆ. ನಮ್ಮ ಹೃದಯ ಸಿಂಹಾಸನದಲ್ಲಿ ನಾವು ಮನಃಪೂರ್ವಕವಾಗಿ ಅಂತಹ ಗುರುಗಳನ್ನು ಪ್ರತಿಷ್ಠಾಪಿಸಿ ಅವರಿಗೆ ದಿನವೂ ಅತ್ಯುನ್ನತವಾದ ಸ್ಥಾನವನ್ನು ಕೊಟ್ಟು ಗೌರವಿಸುತ್ತೇವೆ. ಇಂತಹ ದುರ್ಲಭವಾದ ಸ್ಥಾನಸಿಗುವುದು ಅವರ ಮಾನದಿಂದಾಗಿ, ಇದುವೇ ಅತ್ಯಮೂಲ್ಯವಾದ ಸ್ಥಾನಮಾನ.




ಅಂತೂ ಇಂತೂ ಸ್ಥಾನಮಾನಗಳ ಆಕಾಂಕ್ಷೆಯಿಂದ ಯಾರೂ ಹೊರತಲ್ಲ. ದೊಡ್ಡವರಿಗೆ ದೊಡ್ಡ ಸ್ಥಾನದ ಚಿಂತೆಯಾದರೆ, ಸಣ್ಣವರಿಗೂ ಅವರ ಮಟ್ಟಿಗಿನ ಸ್ಥಾನಮಾನದ ಚಿಂತೆ ಇದ್ದೇ ಇದೆ. ನಿಮ್ಮನ್ನು ವಿಶ್ವಾಸಕ್ಕೆ ತೆಗೆದುಕೊಂಡು ಹೇಳುವುದಾದರೆ ನಾನು ಈ ಪ್ರಬಂಧ ಬರೆಯಲು ಹೊರಟದ್ದೇ ಸ್ಥಾನಮಾನದ ಆಶೆಗಾಗಿ! ಈ ಸ್ಥಾನಮಾನದ ಆಶೆಪಟ್ಟು ನಾನು ಪಟ್ಟ ಬವಣೆ ನನಗೊಬ್ಬನಿಗೇ ಗೊತ್ತು.


ಸುಬ್ರಹ್ಮಣ್ಯ ಎಸ್. ಆರ್.
ನೇಣಾರು ಮನೆ, ಚೊಕ್ಕಾಡಿ ಅಂಚೆ, ಸುಳ್ಯ ತಾಲೂಕು - ೫೭೪ ೨೧೨

ಗಂಗಾಧರ ಕೊಡ್ಲಿಯವರ

ಹದಿನಾರನೇ ಶತಮಾನದ ನಡುಗನ್ನಡ ಸಾಹಿತ್ಯ ಸಂದರ್ಭದಲ್ಲಿ ಬಹಳ ಪ್ರಮುಖವಾಗಿ ಕಾಣಿಸಿಕೊಂಡ ಕನಕದಾಸರಿಗೆ ತುಂಬ ಮಹತ್ವದ ಸ್ಥಾನವಿದೆ. ಅವರು ಆ ಕಾಲಘಟ್ಟದ ಕೀರ್ತನಕಾರರಲ್ಲಿ ವರಕವಿಗಳೆಂದು ಖ್ಯಾತಿ ಗಳಿಸಿದವರು.

ಕನಕದಾಸರು ಸಂತ ಕವಿ ಎಂದು ಕರೆಯಿಸಿಕೊಂಡಿದ್ದಾರೆ. 'ಕವಿ' ಪದದ ಹಿಂದಿರುವ 'ಸಂತ' ಎಂಬ ವಿಶೇಷಣಕ್ಕೆ ಸಾತ್ವಿಕ ಸ್ವಭಾವ, ರಾಗಾದಿಗಳಿಲ್ಲದ ಸಾಧು-ಯತಿ-ಸತ್ವಪುರುಷ ಎಂಬೆಲ್ಲ ಅರ್ಥಗಳುಂಟು. ಈ ಎಲ್ಲ ಲಕ್ಷಣಗಳನ್ನು ಮೈಗೂಡಿಸಿಕೊಂಡು ಬೆಳೆದು ಮಹಾಪುರುಷನಾಗಿ ಎಲ್ಲರ ಮನ್ನಣೆಗೂ ಪಾತ್ರರಾದ ಕನಕದಾಸರ ಬದುಕೇ ಒಂದು ಮಹಾಕಾವ್ಯ.

ಒಬ್ಬ ಶ್ರೇಷ್ಠ ಕವಿಯಾಗಲು ಪ್ರತಿಭೆಗೆ ಅನುಗುಣವಾಗಿ ವ್ಯುತ್ಪತ್ತಿ ಹಾಗೂ ಜೀವನಾನುಭವಗಳು ಬೇಕು. ಅಂತೆಯೇ ತಾನು ಜನಿಸಿದ ಕುಟುಂಬ, ಬೆಳೆದ ಪರಿಸರ, ಸಾಮಾಜಿಕ ಹಿನ್ನೆಲೆಗಳ ಪ್ರಭಾವ ಮುಖ್ಯವಾಗುತ್ತವೆ. ಈ ದೃಷ್ಟಿಯಿಂದ ಕನಕದಾಸರನ್ನು ನೋಡಿದಾಗ, ಕನಕದಾಸರಲ್ಲಿ ಅವರ ಜೀವನ ಪರ್ಯಂತ ಸ್ಥಾಯಿಯಾಗಿ ಕೆಲಸ ಮಾಡಿದ ಕವಿಪ್ರಜ್ಞೆ, ಇತರೆ ಕೀರ್ತನಕಾರರಿಗಿಂತ ಅವರನ್ನು ವರಕವಿಗಳೆಂದು ನೋಡಲು ಸಾಧ್ಯವಾಯಿತು.

ಇತಿಹಾಸದ ಪುಟಗಳನ್ನು ತಿರುವಿದಾಗ ಕನಕದಾಸರ ಬದುಕಿನ ಕಾಲಮಾನವನ್ನು ೧೪೯೧ರಿಂದ ೧೫೮೦ ಎಂದು ನಿಖರವಾಗಿ ಗುರುತಿಸಲಾಗಿದೆ. ಪ್ರಸ್ತುತ ಹಾವೇರಿ ಜಿಲ್ಲೆಯ ಬಾಡ ಗ್ರಾಮದ ಕುರುಬ ಜನಾಂಗಕ್ಕೆ ಸೇರಿದ ಬೀರಪ್ಪ ಮತ್ತು ಬಚ್ಚಮ್ಮ ದಂಪತಿಗಳ ಮಗನಾಗಿ ಜನಿಸಿ ೯೮ ವರುಷಗಳ ತುಂಬು ಜೀವನವನ್ನು ನಡೆಸಿದ ಕನಕದಾಸರ ಮೊದಲ ಹೆಸರು ತಿಮ್ಮಪ್ಪ. ತಂದೆ ವಿಜಯನಗರ ಸಾಮ್ರಾಜ್ಯದಲ್ಲಿ ಅರಸರ ಅಧೀನದಲ್ಲಿ ಬಾಡದ ಸುತ್ತಮುತ್ತಲಿನ ಪ್ರದೇಶಕ್ಕೆ ಮಾಂಡಲೀಕನಾಗಿದ್ದನು.

ಈ ಸಂತ ಕವಿಗೆ ಜಾತಿಯೆಲ್ಲಿ? ಸಂಸಾರಿ, ಸಾಮಂತ, ಸಂತ, ಸಮಾಜಸುಧಾರಕರಾಗಿದ್ದ ಕನಕದಾಸರ ಬದುಕು ಬೆಲೆಗೆ ನಿಲುಕಲಾರದ್ದು. ಇಂದು ಕನಕದಾಸರು ನಮ್ಮ ಮಧ್ಯೆ ಜೀವಂತವಾಗಿರುವುದು ಅವರ ಸಮಾಜದ ಒಡನಾಟ, ಅನುಭವ, ಜ್ಞಾನ ಮತ್ತು ಅವುಗಳ ಅನುಸಂಧಾನದಿಂದ ಅಭಿವ್ಯಕ್ತಿಗೊಂಡ ಸಾಮಾಜಿಕ ಪರಿವರ್ತನೆಯ ಪ್ರಧಾನ ಆಶಯ ಹೊಂದಿದ ಸಾಹಿತ್ಯ ಕೃಷಿಯಿಂದ. ಕನಕದಾಸರ ಪ್ರತಿ ಕಾವ್ಯದಲ್ಲೂ ಹೊಸ ಬಗೆಯ ಪ್ರಯೋಗಶೀಲತೆ, ಸಾಮಾಜಿಕ ಕಳಕಳಿ, ಕಾಲಧರ್ಮವನ್ನು ಮೀರಿದ ಜೀವನದರ್ಶನ ಅವರ ಅದ್ಭುತ ಪ್ರತಿಭೆಗೆ ಸಾಕ್ಷಿಯಾಗಿವೆ.

ಸಂತನಂತೆ ಕನಕದಾಸರು ಸಾಂಸಾರಿಕ ಜೀವನವನ್ನು ತೊರೆದು ಪರಿವ್ರಾಜಕರಂತೆ ನಾಡನ್ನು ಸುತ್ತಿ ಒಂದೊಂದು ಕಡೆ ಒಂದೊಂದು ಬಗೆಯ ಅನುಭವವನ್ನು ಪಡೆದು ಆತ್ಮಜ್ಞಾನಿಯಾದ ಅನುಭಾವಿಗೆ ಸತ್ಯವನ್ನು ಯಥಾಸ್ಥಿತಿಯಲ್ಲಿ ನೋಡುವುದರ ಜೊತೆಗೆ ಖಂಡಿಸುವ ದಿಟ್ಟತನವನ್ನು ಸಾಧಿಸಿದ್ದಾರೆ. ಅವರ ಇಂತಹ ನಿಲುವುಗಳು ವಸ್ತುನಿಷ್ಠ ಕಾವ್ಯಗಳಿಗಿಂತ ವ್ಯಕ್ತಿನಿಷ್ಠ ಕೀರ್ತನೆಗಳಲ್ಲಿ ನಿಚ್ಚಳವಾಗಿ ಕಾಣಬಹುದಾಗಿದೆ. ಹೀಗಾಗಿ ಅವರ ಕೀರ್ತನೆಗಳಲ್ಲಿ ಮೌಢ್ಯದ ವಿಡಂಬನೆಯಿದೆ, ದಿಟ್ಟ ನಿಲುವಿದೆ, ವೈಚಾರಿಕ ಪ್ರಜ್ಞೆಯಿದೆ, ಸಾಧು -ಸಂತರಿಗೆ ಸಹಜವಾದ ವಿನಯವಿದೆ, ಶತ್ರುವನ್ನು ಮಿತ್ರರನ್ನಾಗಿಸುವ ವಿನಮ್ರತೆಯಿದೆ.

ಪುರಂದರದಾಸರಂತೆ ಕನಕದಾಸರ ಕೊಡುಗೆ ಕರ್ನಾಟಕ ಸಂಗೀತ ಪರಂಪರೆಗೆ ಬಹಳ ಮುಖ್ಯವಾದುದು.

ಸಂತನಂತೆ ಕನಕದಾಸರು ಸಾಂಸಾರಿಕ ಜೀವನವನ್ನು ತೊರೆದು ಪರಿವ್ರಾಜಕರಂತೆ ನಾಡನ್ನು ಸುತ್ತಿ ಒಂದೊಂದು ಕಡೆ ಒಂದೊಂದು ಬಗೆಯ ಅನುಭವವನ್ನು ಪಡೆದು ಆತ್ಮಜ್ಞಾನಿಯಾದ ಅನುಭಾವಿಗೆ ಸತ್ಯವನ್ನು ಯಥಾಸ್ಥಿತಿಯಲ್ಲಿ ನೋಡುವುದರ ಜೊತೆಗೆ ಖಂಡಿಸುವ ದಿಟ್ಟತನವನ್ನು ಸಾಧಿಸಿದ್ದಾರೆ. ಅವರ ಇಂತಹ ನಿಲುವುಗಳು ವಸ್ತುನಿಷ್ಠ ಕಾವ್ಯಗಳಿಗಿಂತ ವ್ಯಕ್ತಿನಿಷ್ಠ ಕೀರ್ತನೆಗಳಲ್ಲಿ ನಿಚ್ಚಳವಾಗಿ ಕಾಣಬಹುದಾಗಿದೆ. ಹೀಗಾಗಿ ಅವರ ಕೀರ್ತನೆಗಳಲ್ಲಿ ಮೌಢ್ಯದ ವಿಡಂಬನೆಯಿದೆ, ದಿಟ್ಟ ನಿಲುವಿದೆ, ವೈಚಾರಿಕ ಪ್ರಜ್ಞೆಯಿದೆ, ಸಾಧು–ಸಂತರಿಗೆ ಸಹಜವಾದ ವಿನಯವಿದೆ, ಶತ್ರುವನ್ನು ಮಿತ್ರರನ್ನಾಗಿಸುವ ವಿನಮ್ರತೆಯಿದೆ.



# ಸಂತ ಕವಿ ಕನಕದಾಸರು

ಕಾಗಿನೆಲೆ, ತಿರುಪತಿ, ಬೇಲೂರು, ಶ್ರೀರಂಗಪಟ್ಟಣ, ಉಡುಪಿ ಮುಂತಾದ ಧಾರ್ಮಿಕ ಕ್ಷೇತ್ರಗಳಿಗೆ ಭೇಟಿಯಿತ್ತಾಗ ರಚಿತವಾದ ಕೀರ್ತನೆಗಳನ್ನು ಅವಲೋಕಿಸಿದಾಗ, ಅವು ವಿವಿಧ ತಾಳ ಮಟ್ಟುಗಳಿಗೆ ಅನುಗುಣವಾಗಿರುವುದನ್ನು ನೋಡಬಹುದಾಗಿದೆ. ಕನಕದಾಸರು ಸಂಗೀತದ ಒಳಹೊರಗುಗಳನ್ನು ಬಲ್ಲವರು, ಸಂಗೀತದ ತುಡಿತವನ್ನು ತಮ್ಮ ನಾಡಿ ಮಿಡಿತವನ್ನಾಗಿಸಿಕೊಂಡಿದ್ದವರು. ಸಾಹಿತ್ಯ ಸಂಗೀತಗಳ ಗುಂಗಿನಿಂದ ಜನಸಮೂಹದ ಮನಸ್ಸನ್ನು ಸೆರೆಹಿಡಿದವರು, ಭಕ್ತಿಯ ಹೊಳೆಯಲ್ಲಿ ಮೀಯುವಂತೆ ಪ್ರೇರೇಪಿಸಿ ಆತ್ಮವಿಶ್ವಾಸವನ್ನು ಮೂಡಿಸಿದವರು.

ದೇಸಿನುಡಿಯ ಗರಡಿಯಲ್ಲಿ ಪಳಗಿದ ಜಾನಪದ ನೆಲೆಯ ಕನಕದಾಸರು ಜನಪದ ವಾದ್ಯ, ಗೀತ, ನರ್ತನಗಳನ್ನು ಶ್ವಾಸೋಚ್ಛ್ವಾಸವನ್ನಾಗಿಮಾಡಿಕೊಂಡವರು. ಯಕ್ಷಗಾನ, ಬಯಲಾಟಗಳಲ್ಲಿ ಹಾಡಿ ಕುಣಿದು ಕುಪ್ಪಳಿಸಿದವರು – ಒಬ್ಬ ಜಾನಪದ ಕವಿಯೇ ಹೊರತು ಬೇರಲ್ಲ. ಹೀಗಾಗಿ ಅವರ ರಚನೆಗಳಲ್ಲಿ ಜಾನಪದ ಸೊಗಡಿನ ಜೊತೆಗೆ ದೇಸಿಯ ಚೆಲುವು ಸೇರಿ ಅತಿ ಸಾಮಾನ್ಯನೂ ಓದಿಕೊಂಡು ಹೋಗುವಂಥದನ್ನು ಕಾಣಬಹುದಾಗಿದೆ.

ಕನಕದಾಸರ ಕೀರ್ತನೆಗಳಲ್ಲಿ ಸಮಕಾಲೀನ ಸಮಾಜದ ಜೀವನಚಿತ್ರಣವಿದೆ, ವಿಡಂಬನೆಯಿದೆ, ಬಹುದೇವತಾ ಪೂಜೆಯನ್ನು ತಿರಸ್ಕರಿಸಬೇಕೆಂಬ ಧ್ವನಿಯಿದೆ. ವಿಶೇಷವಾಗಿ ಅವರ ಸಾಹಿತ್ಯದಲ್ಲಿ ಪಾರಮಾರ್ಥಿಕ ಚಿಂತನೆಯಿದ್ದರೂ ಸಾಹಿತ್ಯಿಕ ಮೌಲ್ಯವಾದ ಲೋಕಹಿತವೂ ಮುಖ್ಯವಾಗಿ ಚಿತ್ರಿತವಾಗಿದೆ. ಕನಕದಾಸರು ಅತ್ಯಂತ ಗಹನವಾದ ವಿಚಾರಗಳನ್ನು ಅತ್ಯಂತ ಸರಳವಾಗಿ ಜನಮನ ಭಾಷೆಯಲ್ಲಿ ವಚನಕಾರರಂತೆ ಕನ್ನಡಿಗರ ಹೃದಯಕ್ಕೆ ತಲುಪಿಸಿದವರು.

ಕನಕದಾಸರ ಸಾಹಿತ್ಯ ದೃಷ್ಟಿಯನ್ನು ಅವಲೋಕಿಸಿದಾಗ ಸಹಜವಾಗಿಯೇ ಅವರು ಭಾಗವತ ಸಂಪ್ರದಾಯವನ್ನು ಸ್ವೀಕರಿಸಿದವರಂತೆ ಕಾಣುತ್ತಾರೆ. ಅವರಾದರೂ ಶಿವದ್ವೇಷಿಯಾಗಿರಲಿಲ್ಲ ಎಂಬುದು ವಿಶೇಷ. ಬದಲು, ಹರಿ-ಹರರಲ್ಲಿ ಭೇದವೆಣಿಸದ ಸಮನ್ವಯಿಗಳಾಗಿದ್ದರು. ಹರಿಭಕ್ತಸಾರದಲ್ಲಿ ಹರ-ಹರಾ, ಶಿವ-ಶಿವಾ ಎಂದಿರುವ ಕನಕದಾಸರು ಮೋಹನ ತರಂಗಿಣಿ ಕಾವ್ಯದಲ್ಲಿ ಹರ-ಹರಿ ಇಬ್ಬರ ನಡುವೆ ಯುದ್ಧ ಮಾಡಿಸಿ, ಕೊನೆಯಲ್ಲಿ ಹರ ಬೇರೆಯಲ್ಲ – ಹರಿ ಬೇರೆಯಲ್ಲ ಎಂಬ ತತ್ವ ಪ್ರತಿಪಾದನೆ ಮಾಡಿರುವುದನ್ನು ನಾವು ಕಾಣಬಹುದಾಗಿದೆ.

ಕನಕದಾಸರ ರಚನೆಗಳ ಪ್ರಕಾರಗಳಾದ ಕೀರ್ತನೆ, ಕಾವ್ಯ, ಮುಂಡಿಗೆಗಳನ್ನು, ಸುಳಾದಿ, ಉಗಾಭೋಗಗಳನ್ನು ಅವಲೋಕಿಸಿದಾಗ ಹೊಸ ಬಗೆಯ ಪ್ರಯೋಗಶೀಲತೆ, ಸಾಮಾಜಿಕ ಕಳಕಳಿ, ಕಾಲವನ್ನು ಮೀರಿದ ಜೀವನ ದರ್ಶನಗಳು ಕಾಣಸಿಗುತ್ತವೆ. ಇವರ ರಾಮಧಾನ್ಯ ಚರಿತೆ ಭರತಖಂಡದ ವರ್ಗ-ವರ್ಣ ವ್ಯವಸ್ಥೆಯ ವಿರುದ್ಧ ಹೋರಾಡುವ ಮೇಲು-ಕೀಳು ಜಾತಿ ವ್ಯವಸ್ಥೆಯ ಪೊಳ್ಳುತನವನ್ನು ಬಯಲುಮಾಡುವ ಧರಾಮರರು ಧರಾಧಮರಾಗಿ ವರ್ತಿಸದೆ, ಸಮಾಜದ ಕೆಳವರ್ಗದವರೊಂದಿಗೆ ಕೂಡಿ ಬಾಳಬೇಕೆಂಬ ರಾಮ ಸಂದೇಶವನ್ನು ಹೊತ್ತ ರಾಗಿರಾಮಾಯಣವೆಂದೇ ಪ್ರಸಿದ್ಧವಾಗಿದೆ ಈ ಅಣಕು ಕಾವ್ಯ. ಈ ಕಾವ್ಯದಲ್ಲಿ ವ್ಯಕ್ತವಾಗಿರುವ ವೈಚಾರಿಕ ನಿಲುವುಗಳನ್ನು ಬೇರೆ ದಾಸಪಂಥದ ಕವಿಗಳಲ್ಲಿ ಕಾಣಲು ಸಾಧ್ಯವಿಲ್ಲ. ಅವರೇನೆ ಇದ್ದರೂ ಸನಾತನ ಕೊರಕಲು ಜಾಡಿನಲ್ಲಿ ಕಂಠಶೋಷಣೆ ಮಾಡಿಕೊಂಡು ಸೊರಗಿದ್ದಾರೆಯೇ ವಿನಾ ಕೊರಕಲು ಜಾಡನ್ನು ಬಿಟ್ಟು ರಾಜಮಾರ್ಗವನ್ನು ಹಿಡಿದವರಲ್ಲ. ಜನರ ನರ-ನಾಡಿಗಳಲ್ಲಿ ಬದುಕಲ್ಲಿ ಮಿಂಚು ಸಂಚರಿಸುವಂತೆ ಮಾಡಿ ಹೊಸ ಬಾನಂಚನ್ನು ಕಾಣುವಂತೆ ಮಾಡಿದವರಲ್ಲ.

ಸರ್ವರಿಗೆ ಸಮಪಾಲು - ಸರ್ವರಿಗೆ ಸಮಬಾಳು ಎಂಬುದು ಕನಕದಾಸರ ನಿಲುವು. ತಾರತಮ್ಯ, ಭೇದಭಾವ ಮಾನವತೆಗೆ ಮಾರಕ ಎಂಬುದು ಅವರ ಬಾಳಿನ ಮಂತ್ರ. ಸಮಾಜದಲ್ಲಿ ಬೇರುಬಿಟ್ಟಿರುವ ಮೇಲು-ಕೀಳು, ಬಡವ-ಬಲ್ಲಿದ ಎಂಬ ವರ್ಗ-ವರ್ಣ ತಾರತಮ್ಯ ಹೋಗಬೇಕು ಎಂಬುದೇ ಅವರ ಗುರಿ. ಅವರ ಈ ಎಲ್ಲ ನಿಲುವು-ಮಂತ್ರ-ಗುರಿಗಳನ್ನು ಅವರ ರಾಮಧಾನ್ಯ ಚರಿತೆಯಲ್ಲೂ, 'ಕುಲ-ಕುಲವೆನ್ನುತಿಹರು, ಕುಲವ್ಯಾವುದು ಸತ್ಯಸುಖವುಳ್ಳ ಜನರಿಗೆ', 'ಹೊಲೆಯ ಹೊರಗಿಹನೆ ಊರೊಳಗಿಲ್ಲವೇ' ಮೊದಲಾದ ಕೀರ್ತನೆಗಳಲ್ಲೂ ಕಾಣಬಹುದಾಗಿದೆ.

ಕನಕದಾಸರು ಅಧ್ಯಾತ್ಮವನ್ನು ಒತ್ತಿ ಹೇಳುವಾಗ ಸಾಮಾಜಿಕ ಚಿಂತನೆಯನ್ನು ಕೈ ಬಿಡುವುದಿಲ್ಲ. ಸಮಾಜ ಚಿಂತನೆಗೆ ಒತ್ತುಕೊಟ್ಟಾಗ ಅಧ್ಯಾತ್ಮವನ್ನು ಬಿಡುವುದಿಲ್ಲ. ಉದಾಹರಣೆಗೆ, 'ಎಲ್ಲರೂ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ' ಎಂಬ ಕೀರ್ತನೆಯಲ್ಲಿ ಯಾವ ವೃತ್ತಿಯನ್ನು ಮೇಲು-ಕೀಳು ಎಂದು ತಾರತಮ್ಯದಿಂದ ಕಾಣುವುದಾಗಬಾರದೆಂಬ ಅಂಶವನ್ನು ಗಮನಿಸಬಹುದಾಗಿದೆ. ಐಹಿಕವಾಗಲೀ, ಆಧ್ಯಾತ್ಮಿಕವಾಗಲೀ ಜನಸಾಮಾನ್ಯರಿಗೆ ತಲುಪಬೇಕಾದರೆ ಜನಪದರ ದನಿಯಲ್ಲಿ ಅವರವರ ವೃತ್ತಿ ಪರಿಭಾಷೆಯಲ್ಲಿ ವ್ಯಕ್ತಪಡಿಸಬೇಕಾದ ಅನಿವಾರ್ಯತೆಯನ್ನು ಎತ್ತಿ ತೋರಿಸಿದ್ದಾರೆ. ಈ ಅಂಶವನ್ನು 'ನಾರಾಯಣ ಎಂಬ ನಾಮದ ಬೀಜವನು ನಾಲಿಗೆಯ ಕೂರಿಗೆಯ ಮಾಡಿ ಬಿತ್ತಿರಯ್ಯಾ' ಎಂಬ ಕೀರ್ತನೆಯಲ್ಲಿ ಉತ್ತಮವಾಗಿ ಉದಾಹರಿಸಿದ್ದಾರೆ.

'ಎಲ್ಲ ಮತದ ಹೊಟ್ಟು ತೂರಿ, ಎಲ್ಲ ತತ್ವದೆಲ್ಲೆ ಮೀರಿ, ನಿರ್ದಿಗಂತವಾಗಿ ಏರಿ' ನಿಂತ ಕನಕದಾಸರು, ಹಿಂದೆಂದಿಗಿಂತಲೂ ಇಂದು ಪ್ರಸ್ತುತ. ಆ ಕಾರಣದಿಂದಾಗಿ ನಮ್ಮ ನಡುವೆ ಅವರು ಇನ್ನೂ ಜೀವಂತವಾಗಿದ್ದಾರೆ.

ದಾಸಸಾಹಿತ್ಯದಲ್ಲಿ ಸಮಾಜದ ಕೆಳವರ್ಗದಿಂದ ಬಂದಂತಹ ಕನಕದಾಸರ ಕೊಡುಗೆ ಬಹುಬಗೆಯದ್ದು ಮತ್ತು ಅಪಾರವಾದದ್ದು. ಅವರು 'ಮುಂಡಿಗೆಗಳು' ಎಂಬ ಹೊಸ ಸಾಹಿತ್ಯ ಪ್ರಕಾರದ ಜನಕರು ಎಂದು ನಿರ್ವಿವಾದವಾಗಿ ಹೇಳಬಹುದಾಗಿದೆ. ಜನಪದ ಸಾಹಿತ್ಯದ ಒಗಟು ಪ್ರಕಾರವನ್ನು ವಚನಸಾಹಿತ್ಯ ಸಂದರ್ಭದಲ್ಲಿ ಅಲ್ಲಮಪ್ರಭುಗಳು ಬೆಡಗಿನ ವಚನಗಳೆಂಬ ಪ್ರಕಾರಗಳನ್ನು ಅಸ್ತಿತ್ವಕ್ಕೆ ತಂದಂತೆ, ಹರಿದಾಸ ಸಾಹಿತ್ಯದಲ್ಲಿ ಕನಕದಾಸರು 'ಮುಂಡಿಗೆಗಳು' ಎಂಬ ಹೊಸ ಪ್ರಕಾರವನ್ನು ನೀಡಿ, ಏಕಕಾಲದಲ್ಲಿ ಪ್ರಾಪಂಚಿಕ ಅರ್ಥ ಹಾಗೂ ಪಾರಮಾರ್ಥಿಕ ಅರ್ಥ ಎರಡೂ ಅನ್ವಯಿಸುವಂತೆ ಮಂಡಿಸಿರುವುದು ಈ ಪ್ರಕಾರದ ವಿಶೇಷತೆ. ಉದಾಹರಣೆಗೆ :

*ಮರವ ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ – ಇದರ*
*ಕುರುಹ ಪೇಳಿ ಕುಳಿತಿರುವ ಜನರು*
*ಒಂಟಿ ಕೊಂಬಿನ ಪಕ್ಷಿ ಒಡಲೊಳಗೆ ಕರುಳಿಲ್ಲ*
*ಗಂಟಲು - ಮೂರುಂಟು ಮೂಗು ಇಲ್ಲ*
*ಕುಂಟು - ಮನುಜನ ತೆರದಿ ಕುಳಿತಿಹುದು ಮನೆಯೊಳಗೆ*
*ಎಂಟು-ಹತ್ತರ ಭಕ್ಷ - ಭಕ್ಷಿಸುವುದು.*

ಕನಕದಾಸರು ಯಾವುದೇ ಒಂದು ಮತಕ್ಕೆ ಕಟ್ಟುಬೀಳದೆ, ಎಲ್ಲ ಮತ-ಧರ್ಮಗಳ ಒಳಿತನ್ನು ಮಾತ್ರ ಸ್ವೀಕರಿಸಿ ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಬಾಳಿದ ಸಂತ, ಕವಿ, ದಾರ್ಶನಿಕ, ಕೀರ್ತನಕಾರ. ನತಜನಹಿತದ ಬಗ್ಗೆ ಬಾಳಿನುದ್ದಕ್ಕೂ ಚಿಂತಿಸಿ ಅವರ ಉದ್ಧಾರಕ್ಕೆ ಟೊಂಕ ಕಟ್ಟಿ ನಿಂತವರಾಗಿದ್ದವರು.

**ಗಂಗಾಧರ ಕೊಡ್ಲಿಯವರ**
'ಶಾಲ್ಮಲೀ', ೬ನೇ ಕ್ರಾಸ್, ಮುನ್ಸಿಪಲ್ ಲೇಔಟ್, ಸಿದ್ಧಗಂಗಾ ಬಡಾವಣೆ, ತುಮಕೂರು - ೫೭೨ ೧೦೨

## ಎಂಥಾ ವಿಸ್ಮಯ !

* ಪೆಸಿಫಿಕ್ ಸಾಗರದ ಆಕ್ಟೋಪಸ್ (ಅಷ್ಟಪಾದಿ)ನ ದೇಹ ದೈತ್ಯಾಕಾರದ್ದಾಗಿದ್ದರೆ ಅದರ ಮೊಟ್ಟೆ ಅಕ್ಕಿ ಕಾಳಿನಷ್ಟು ಚಿಕ್ಕದು. ಅದು ಎಷ್ಟು ದೊಡ್ಡದಾಗಿ ಬೆಳೆಯುತ್ತದೆಂದರೆ ಅದರ ತೋಳುಗಳು ಒಂದು ಸಣ್ಣ ಕಾರಿನಷ್ಟು ದೊಡ್ಡವಾಗಿರುತ್ತವೆ.
* ದೈತ್ಯಾಕಾರದ ದೊಡ್ಡ ಇರುವೆ ಬಾಕ (ಆ್ಯಂಟ್ ಈಟರ್) ಒಂದು ದಿನದಲ್ಲಿ ೩೦,೦೦೦ ಗೆದ್ದಲು ಹುಳುಗಳನ್ನೂ ಇರುವೆಗಳನ್ನೂ ತಿನ್ನಬಲ್ಲುದು.
* ಗೋಲ್ಡನ್-ಈಗಲ್ (ಹೊಂಬಣ್ಣದ ತಲೆ ಜುಟ್ಟುಳ್ಳ ದೊಡ್ಡ ಹದ್ದು) ಮೊಲವೊಂದನ್ನು ಎರಡು ಮೈಲಿ ದೂರದಿಂದ ಗೊತ್ತುಹಚ್ಚಬಲ್ಲುದು.
* ಹಾವಿನ ಮೈಮೇಲಿನ ಪೊರೆ ನಮ್ಮ ಬೆರಳಿನ ಉಗುರುಗಳಂತೆಯೇ ಅಂಥದೇ ವಸ್ತುವಿನಿಂದ (ಕೆರಾಟಿನ್ – ಒಂದು ಬಗೆಯ ಪ್ರೋಟೀನ್) ಆಗಿರುತ್ತದೆ.



ವಿವಿಧ ಮೂಲಗಳಿಂದ : **ಕೆ. ಎಲ್. ಗೋಪಾಲಕೃಷ್ಣ ರಾವ್**



# ಜನಪದ ಕಥೆಗಳ ಮಾಯಾಲೋಕ!

ಹುಡುಗ ಉಂಗುರವನ್ನು ಕೈಲಿ ಹಿಡಿದುಕೊಂಡು ''ಜೈ ಪರಮೇಶ್ವರ'' ಎಂದ. ಏಳು ಅಂತಸ್ತಿನ ಬಂಗಾರದ ಅರಮನೆ ಬಂತು, ಮನೆ ತುಂಬ ವಸ್ತ್ರ, ವೈಡೂರ್ಯ, ಸಿರಿ ಸಂಪತ್ತು, ಆಳು - ಗೀಳು. ಇದೆಲ್ಲಾ ''ನಾಗ ಮಾಣಿಕ್ಯ ಉಂಗುರದ ಫಲ'' ಎಂದು ಅಮ್ಮನಿಗೆ ವಿವರಿಸಿದ ಹುಡುಗ...

ನನ್ನಮ್ಮ ಕಥೆ ಹೇಳುತ್ತಿದ್ದಂತೆ ನನ್ನ ಮಗಳು ತನ್ನ ಪುಟ್ಟ 'ಭೂಮಿ'ಯ ಕಣ್ಣು ಅರಳಿಸುತ್ತಾ ಕಲ್ಪನೆಯಲ್ಲಿ ಬಣ್ಣ ಬಣ್ಣದ ಅರಮನೆ ನೋಡುತ್ತಿದ್ದರೆ, ಕಥೆ ಕೇಳುತ್ತಿದ್ದ ದೊಡ್ಡವರಿಗೂ 'ನಾಗ ಮಾಣಿಕ್ಯ'ದ ಶಕ್ತಿಯ ಬಗ್ಗೆ ಬೆರಗಿನ ಲೋಕವನ್ನೇ ತೆರೆದಿಡುತ್ತಿತ್ತು.

ಮಗುವಾಗಿ 'ಅಜ್ಜಿಯ' ಕಥೆ ಕೇಳಿದ್ದಕ್ಕೂ, ತಾಯಿಯಾಗಿ ಮಗಳಿಗೆ ಕಥೆ ಹೇಳುವುದಕ್ಕೂ, 'ಮನೋವೈದ್ಯೆ'ಯಾಗಿ, ಸಾಹಿತ್ಯದ ವಿದ್ಯಾರ್ಥಿಯಾಗಿ, ಜನಪದ ಕಥೆಗಳ ಅಧ್ಯಯನ ಮಾಡುವುದಕ್ಕೂ ತುಂಬಾ ಆಸಕ್ತಿಕಾರಕವಾದ ಭಿನ್ನತೆಗಳಿವೆ. ರಾತ್ರಿ ಮಲಗುವ ಸಮಯದಲ್ಲಿ ಚಂಡಿ ಹಿಡಿದ ಮಗುವನ್ನು ಮಲಗಿಸಲು ಅಜ್ಜಿ ತನ್ನ ಹಿಂದಿನ ನೆನಪುಗಳನ್ನೋ ಅನುಭವಗಳನ್ನೋ ಕಥೆಯ ರೂಪದಲ್ಲಿ ಹೇಳಲಾರಂಭಿಸಿದಾಗಿನಿಂದಲೇ ಜನಪದ ಕಥೆಗಳ ಮಾಯಾಲೋಕದ ಸೃಷ್ಟಿಯ ಆರಂಭ. ಚಂಡಿ ಹಿಡಿದ ಮಗುವಿನ ನೆಪದಲ್ಲಿ ಕಥೆ ಆರಂಭವಾದರೂ ದೇಜಗೌರ, ''ಚಂಡಿ ಹಿಡಿಯುವ ಕಣ್ಣಿಗೆ ನಿದ್ದೆ ಹತ್ತದಿರುವ ದೇಹಾಲಸ್ಯದಿಂದ ನರಳುವ ಮಗುವಿಗೆ ಕಥೆ ಸಮ್ಮೋಹನಾಂಜನವಾಗುತ್ತದೆ. ಕಥಾಶ್ರವಣ ರೋಗಿಗೆ ವೈದ್ಯವಾಗುತ್ತದೆ. ದಡ್ಡನಿಗೆ ವಿದ್ಯೆಯಾಗುತ್ತದೆ. ದುಡಿಮೆಗಾರನಿಗೆ ಚೇತೋಹಾರಿಯಾಗುತ್ತದೆ, ದುಷ್ಟನಿಗೆ ಶಿವಶಕ್ತಿಯಾಗುತ್ತದೆ, ಸೋಮಾರಿಗೆ ಚೈತನ್ಯದಾಯಿಯಾಗುತ್ತದೆ. ರಸಿಕನಿಗೆ ರಸಾಯನವಾಗುತ್ತದೆ. ಒಡೆಯ - ಆಳು, ದೊರೆ - ಮಂತ್ರಿ, ರೈತ- ಯೋಧ, ಸನ್ಯಾಸಿ - ಸಂಸಾರಿ, ಹೆಂಗಸು - ಗಂಡಸು ಎಂಬ ಭೇದವಿಲ್ಲದೆ ಕಥೆ ಸರ್ವರನ್ನೂ ಏಕರೀತಿಯಾಗಿ ತೃಪ್ತಿಪಡಿಸುತ್ತದೆ. ಅದು ಬಾಳಿನ ಬವಣೆಯನ್ನು ಮರೆಸುತ್ತದೆ. ಮಾನಸಿಕ ಯಾತನೆಯನ್ನು ಒರೆಸುತ್ತದೆ. ಕೇಳುಗನಿಗೆ ಕೇಳುವ ಕುತೂಹಲವಿರುವಂತೆ, ಹೇಳುಗನಿಗೆ ಹೇಳುವ ಹವ್ಯಾಸವಿರುತ್ತದೆ'' (ಜಾನಪದ ಅಧ್ಯಯನ, ಪುಟ ೬೮) ಎಂಬ ಮಾತುಗಳು ಈ ಮಾಯಾಲೋಕದ ಹರಹನ್ನು ತೆರೆದಿಡುತ್ತವೆ.

ಪ್ರಾಣಿ ಕಥೆ, ಮಾಂತ್ರಿಕ, ರಾಕ್ಷಸ, ದೇವಕನ್ಯೆ, ಕಿನ್ನರರನ್ನೊಳಗೊಂಡ ಅತಿಮಾನುಷ ಕಥೆಗಳು, ದಡ್ಡರ ದಡ್ಡತನದ ನಗೆ ಭರಿಸುವ ವಿನೋದ ಕಥೆಗಳು ಹೀಗೆ ಮಾನವ ಸ್ವಭಾವವನ್ನು ಚಿತ್ರಿಸಲು ಜನಪದ ಕಥೆಗಳು ಹುಡುಕಿಕೊಂಡ ಮಾರ್ಗಗಳು ಅನೇಕ. ಒಂದಾನೊಂದು ಕಾಲದಲ್ಲಿ, ಒಂದಾನೊಂದು ಊರಿನಲ್ಲಿ ಕಥೆ ಆರಂಭವಾದರೂ, ಕಾಗಕ್ಕ - ಗುಬ್ಬಕ್ಕನ ಕಥೆಯಾದರೂ ಈ ಜನಪದ ಕಥೆಗಳು ನಮ್ಮೆಲ್ಲರ ಕಥೆಯೇ. ಇಂದಿನ ಕಾಲದ್ದೇ ಎನಿಸಿಬಿಡುತ್ತವೆ!

ನಮ್ಮ ಜನಪದ ಕಥೆಗಳ ಭಂಡಾರ ಮಕ್ಕಳಿಗಂತೂ ಅದ್ಭುತ-ಅಲೌಕಿಕ ಕಲ್ಪನಾ ಪ್ರಪಂಚವನ್ನೇ ಸೃಷ್ಟಿಸುತ್ತದೆ. ಮಾನವ ಪ್ರಪಂಚದ ವ್ಯಕ್ತಿ ವಿಷಯಗಳ ಜೊತೆಗೆ ಪ್ರಾಣಿ, ಪಕ್ಷಿ, ಮರ ಬಳ್ಳಿಗಳಲ್ಲದೆ ನಿರ್ಜೀವ ವಸ್ತುಗಳು, ಮಂತ್ರದ ದಂಡ, ಉಂಗುರ, ಭೂತಗನ್ನಡಿ, ಮಾಯದ ಟೋಪಿ, ಮಂತ್ರದ ಚಾಪೆ, ಮಾಯದ ಕುದುರೆ ಹೀಗೆ ಇಡೀ ಜಗತ್ತೇ ಅದ್ಭುತ - ರಮ್ಯ - ಅಲೌಕಿಕ ! ಮಕ್ಕಳಿಗೆ ಹೇಳುವಾಗಲೂ ಅಷ್ಟೆ. ಈ ಕಥೆಗಳಲ್ಲಿ ಸರಳ ಪಾತ್ರ ಚಿತ್ರಣ, ನೇರ ಕಥನ ಗತಿಯ ನಿರ್ವಹಣೆ, ಕಥೆಯ ಹರಿಯುವಿಕೆ ಮಾತ್ರ ಇಲ್ಲಿ ಪ್ರಧಾನ. ಮತ್ತೆಲ್ಲವೂ ಅದಕ್ಕೆ ಪೂರಕ. ಸಾವಕಾಶ ಪ್ರವೇಶ, ಅವಸರವಿಲ್ಲದ ಮುಕ್ತಾಯ, ಕಥೆ ಕೇಂದ್ರಬಿಂದು ತಲುಪಿದ ಮೇಲೂ ನಿಲುಗಡೆಯವರೆಗೆ ಮುಂದುವರಿಕೆ, ಸರ್ವಸಾಮಾನ್ಯವಾದ ಪುನರಾವರ್ತನೆ, ಈ ಪುನರಾವರ್ತನೆಯೂ ಏಕತಾನತೆಯ ಬದಲು ಕಥೆಯಲ್ಲಿ ನಿರೀಕ್ಷೆಯನ್ನೇ ತುಂಬುತ್ತದೆ. ಈ ಎಲ್ಲವೂ ಮಕ್ಕಳ ಮನರಂಜನೆಯ ಸಾಧನಗಳಾಗಲು ಒಳ್ಳೆಯ ಅರ್ಹತೆಗಳು. ಚಿತ್ರ ಪುಸ್ತಕ, ಕಾರ್ಟೂನ್‌ಗಳ 'ಮೂರ್ತ' ಜನಪದ ಕಥೆಗಳಿಗಿಂತ ಹೇಳುವ - ಕೇಳುವ ಅಥವಾ ತಾವೇ ಓದುವ 'ಅಮೂರ್ತ' ಕಲ್ಪನೆಗೆ ಹೆಚ್ಚು ಅವಕಾಶವೀಯುವ ಕ್ರಿಯೆಗಳು ಮಕ್ಕಳಿಗೆ ಹೆಚ್ಚು ಹಿತಕಾರಿ.

ಜನಪದ ಸಂಸ್ಕೃತಿಯ ಪ್ರತಿ ಬಗೆಯಂತೆ ಜನಪದ ಕಥೆಗಳೂ ಸ್ಥಿರ ಚಿತ್ರಗಳಾಗದೆ, ಚಲನಶೀಲತೆಯನ್ನು ಪಡೆದುಕೊಂಡಿರುವಂಥವು. ಹೇಳುಗನ ಜಾಣ್ಮೆ - ಕೌಶಲ - ಸೃಜನಶೀಲತೆಗೆ ಅನುಗುಣವಾಗಿ 'ಅತ್ತೆ - ಸೊಸೆ' ಒಂದೇ ಕಥೆ ಹಲವು ರೂಪಗಳನ್ನು ತಾಳಬಹುದು. ಕೇಳುಗನಿಗೆ ಆ ಸಂದರ್ಭದಲ್ಲಿ ಹೇಳಬೇಕಾದ ತಿಳುವಳಿಕೆ ಕಥೆಯ ಪಾತ್ರಕ್ಕೆ ಹೇಳುವಂತೆ ಅಡಕವಾಗಬಹುದು.

ಮನೋವೈಜ್ಞಾನಿಕವಾಗಿ ಈ ಜನಪದ ಕಥಾ ಜಗತ್ತು ಮಾನವ ಸ್ವಭಾವದ ಚಿತ್ರಣ. ವಾಸ್ತವ ಬದುಕಿನ ವಿವರಗಳು ದಾಖಲಾಗಿರುವುದರ ಜೊತೆಗೆ ಮಾನವ ವಾಸ್ತವ ಬದುಕಿನಲ್ಲಿ ಪಡೆಯಲಾಗದ, ಅನುಭವಿಸಲಾರದ ಅಂಶಗಳು ಕಲೆಯ ಮೂಲಕ ಕಥೆಯಲ್ಲಿ ರೂಪು ಪಡೆಯುತ್ತದೆ. ದೈನಂದಿನ ಬದುಕಿನ ಒತ್ತಡ, ಇಕ್ಕಟ್ಟುಗಳನ್ನು ನೀಗಿಕೊಳ್ಳುವ ಒಂದು ಪರ್ಯಾಯ ಜಗತ್ತನ್ನು ಕತೆಗಾರ ಸೃಷ್ಟಿಸುತ್ತಾನೆ. ನಿದ್ರೆಯಲ್ಲಿ ನಾವು ಕಾಣುವ ಕನಸುಗಳಂತೆ ಜನಪದ ಕಥೆಗಳು ಮಾನವ ಸಮುದಾಯದ ಸುಪ್ತಪ್ರಜ್ಞೆಯ ಭಾವನೆಗಳ ಸಾಂಕೇತಿಕ ಅಭಿವ್ಯಕ್ತಿ. ತನಗಾದ ನೋವು - ಅಸಹಾಯಕತೆಗಳನ್ನು ಹೊರಹಾಕಲಾಗದ, ಪ್ರತಿಕ್ರಿಯೆ ತೋರಲಾಗದ ಮೌನದ ಒತ್ತಡ, ಪ್ರತಿಭಟನೆಯ ತಂತ್ರವಾಗಿ ಈ ಕತೆಗಳ ಹುಟ್ಟನ್ನು ಅರ್ಥೈಸಬಹುದು. ಕಥೆಗಳ ನಾಯಕ ಕಿರಿಯನಾಗಿರುವುದು, ಸಾಮಾನ್ಯ ಮನುಷ್ಯನಾಗಿರುವುದು, ಬಡವನಾಗಿರುವುದು, ಪೆದ್ದನಾಗಿರುವುದು, ಆತ ತನಗಿಂತ ಬಲಿಷ್ಠನಾದ ರಾಜ, ರಾಕ್ಷಸ, ಪ್ರಾಣಿ, ದೇವತೆಯನ್ನು ಗೆದ್ದು ಮೇಲೇರುವುದು ಎಲ್ಲವೂ ಒಂದು ಹೋರಾಟದ ಸಾಧ್ಯತೆಯನ್ನು ತೆರೆದಿಡುತ್ತವೆ.

ಕಥೆ ಕೇಳುವನ ಮತ್ತು ಹೇಳುವ ಈ ಪ್ರಕ್ರಿಯೆಗೆ ಮಕ್ಕಳ ಮನೋವೈದ್ಯಕೀಯ ಜ್ಞಾನದಲ್ಲಿ ಮಹತ್ತರ ಸ್ಥಾನವಿದೆ. ತಾಯಿ - ಅಜ್ಜಿಯರೊಡನೆ ಬಾಂಧವ್ಯ ಬೆಸೆಯುವ, ಮಕ್ಕಳ ಮನಸ್ಸಿಗೆ ಮನರಂಜನೆಯ ಮುಖಾಂತರ ನೀತಿ ಶಿಕ್ಷಣ ನೀಡುವ ಅಮೂರ್ತ ಚಿಂತನೆಯ ಸೃಜನಶೀಲತೆಯನ್ನು ಬೆಳೆಸುವ ಮಾಧ್ಯಮ ಈ ಜನಪದ ಕಥಾಲೋಕ. ಅದೇ ಭಿನ್ನ ಮನಸ್ಕ- ಶೋಷಿತ- ಬೌದ್ಧಿಕವಾಗಿ ಹಿಂದುಳಿದ ಮಗುವನ್ನೂ ಈ ಕಥಾಲೋಕ ತನ್ನ ಮನಸ್ಸು ಬಿಚ್ಚಿ ತೆರೆದಿಡುವಂತೆ ಮಾಡಬಲ್ಲದು. ಕಥೆಯ ಅಂಗವಿಕಲ, ಕಿರಿಯ, ಬಡ ನಾಯಕ ತನ್ನ ಕೀಳರಿಮೆಯನ್ನು ಗೆದ್ದು, ಮೇಲೇರಿದ ಚಿತ್ರಣ ಸಹೋದರ ದ್ವೇಷದ, ಕೀಳರಿಮೆಯ ವ್ಯಕಿತ್ವದ, ಸಮಸ್ಯೆಗಳಿಗೆ ಸಮಾಧಾನದ ಸಂದೇಶ ನೀಡಬಹುದು. ಸರಿ-ತಪ್ಪು, ಬಡವ-ಶ್ರೀಮಂತ, ಮೇಲು - ಕೀಳು, ಅಸಮಾನತೆ, ನೀತಿ - ಅನೀತಿ ಪರಿಕಲ್ಪನೆಗಳ ಒಳಹುಗಳನ್ನು ಬೇಸರವಾಗದ ರೀತಿಯಲ್ಲಿ ತಿಳಿಯಪಡಿಸುತ್ತವೆ. ಜೀವನ ಮೌಲ್ಯಗಳ ಜೊತೆ ಜೊತೆಗೇ ಸುಪ್ತ ಮನಸ್ಸಿನ ಸಮಾಜದ ಶಿಸ್ತನ್ನು ಮೀರುವ ಆಕಾಂಕ್ಷೆಗಳಿಗೆ ಕಟ್ಟುಪಾಡುಗಳನ್ನು ಮೀರುವ ಮಾಧ್ಯಮವಾಗಿ ಈ ಜನಪದ ಕಥೆಗಳು ನಮ್ಮ ಸಂಸ್ಕೃತಿಯಲ್ಲಿ ಕೆಲಸ ಮಾಡುತ್ತವೆ. ಇವೆಲ್ಲವೂ ಗೊತ್ತಿರುವ ಹಿರಿಯರಿಗೆ ವಿವಿಧ ಅರ್ಥಗಳಲ್ಲಿ ತಮ್ಮ ತಮ್ಮ ಆತ್ಮ ಪರಿಶೀಲನೆ ಮಾಡಿಕೊಳ್ಳಬಲ್ಲ ಅವಕಾಶ ಈ ಜನಪದ ಕಥೆಗಳ ಮೂಲಕ ದೊರಕುತ್ತದೆ.

ಇಂದು ಜನಪದ ಕಥೆಗಳ ಬಣ್ಣದ ಲೋಕ ಟಿ.ವಿ., ವೀಡಿಯೋಗಳ ಕಾರ್ಟೂನ್‌ಗಳ ಮುಖಾಂತರ ಮಾತ್ರ. ಹೇಳುವ ಅಜ್ಜಿಯರು ವೃದ್ಧಾಶ್ರಮಗಳಲ್ಲಿ, ಕೇಳುವ ಮೊಮ್ಮಕ್ಕಳು ಟ್ಯೂಷನ್‌ಗಳಲ್ಲಿ ಇಲ್ಲವೆ ಟಿ.ವಿ. ಮುಂದೆ ! ಅಜ್ಜಿ ಕಥೆಗಳು ಈಗ ಕಾರ್ಟೂನ್ ಕಥೆಗಳು ಮಾತ್ರ. ಹೀಗಾಗದೆ ಅಜ್ಜಿಯರು ಮತ್ತೆ ಮನೆಗೆ ಮರಳಿ, ಮೊಮ್ಮಕ್ಕಳು ಜೀವನ ಶಿಕ್ಷಣಕ್ಕಾಗಿ ಜನಪದ ಕಥೆಗಳ ಮಾಯಾಲೋಕಕ್ಕೆ ಕಾಲಿರಿಸಿದರೆ ಮಕ್ಕಳ ಬೌದ್ಧಿಕ-ಮಾನಸಿಕ-ಭಾವನಾತ್ಮಕ ಸಮಸ್ಯೆಗಳಿಗೆ ಟಾಟಾ !!

**ಡಾ|| ಕೆ. ಎಸ್. ಪವಿತ್ರ**
ಶ್ರೀ ವಿಜಯಾ ಕಲಾನಿಕೇತನ, ೬ನೇ ಅಡ್ಡರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪



# ತನ್ನತನ



ನಮ್ಮ ವರ್ಣಮಯ ಜಗತ್ತು ಹಲವು ಬಗೆಯ ವೈವಿಧ್ಯತೆಗಳಿಂದ ಕೂಡಿದೆ. ಈ ಜಗತ್ತಿನಲ್ಲಿ ಅಡಕವಾಗಿರುವ ಅಸಂಖ್ಯಾತ ಗಿಡಮರ, ಬಳ್ಳಿಗಳು, ಪ್ರಾಣಿ-ಪಕ್ಷಿಗಳು, ಮನುಷ್ಯ ಜೀವಿಗಳು – ಇವುಗಳಲ್ಲಿ ಒಂದೊಂದೂ ತನ್ನದೇ ವಿಶಿಷ್ಟತೆಯನ್ನು ಹೊಂದಿದ್ದು, ತನ್ನದೇ ವರ್ಗದ ಬೇರೆಲ್ಲ ಸದಸ್ಯರಿಂದ ವಿಭಿನ್ನವಾಗಿಯೇ ಇರುತ್ತದೆ. ಅದೇ ಭೂಮಿ, ಅದೇ ನೀರು, ಅದೇ ಗಾಳಿ, ಅದೇ ಶಾಖ – ಈ ಎಲ್ಲ ಸಾಮಾನ್ಯ ಪೋಷಕಾಂಶಗಳನ್ನು ಹೊಂದಿದ್ದೂ, ಉಳಿದಂತೆ ವಿಭಿನ್ನವಾಗಿಯೇ ರೂಪಿತವಾಗಿರುತ್ತವೆ. ಈ ವಿಭಿನ್ನತೆ ಆಕಾರ, ವಿನ್ಯಾಸ, ಗಾತ್ರ, ಬಣ್ಣ, ಗುಣ ಲಕ್ಷಣ ಇವೇ ಮೊದಲಾದ ಆಯಾಮಗಳಿಗೆ ಸಂಬಂಧಿಸಿದ್ದು, ಒಂದಲ್ಲ ಒಂದು ಬಗೆಯಲ್ಲಿ ಒಂದು ಇನ್ನೊಂದರಿಂದ ಬೇರೆಯಾಗಿಯೇ ಇರುತ್ತದೆ. ಇದು ಪ್ರಕೃತಿ ಧರ್ಮ; ನಿಸರ್ಗದ ನಿಯಮ. ಈ ವೈವಿಧ್ಯತೆಗಳು ವೈಜ್ಞಾನಿಕ ಅಧ್ಯಯನಗಳಿಗೆ ಗ್ರಾಸವಾಗುತ್ತವೆ; ಈ ವೈವಿಧ್ಯಗಳ ಸೊಬಗು ಕವಿಯ ಕಲ್ಪನೆಯನ್ನು ಪ್ರಚೋದಿಸುತ್ತವೆ.

ಮನೋವಿಜ್ಞಾನವು ವ್ಯಕ್ತಿಗಳ ನಡುವಣ ವ್ಯತ್ಯಾಸಗಳನ್ನು ಕುರಿತ ಅಧ್ಯಯನ. ಪ್ರತಿ ವ್ಯಕ್ತಿಯೂ ವಿಶಿಷ್ಟವಾಗಿದ್ದು, ಇತರರಿಗಿಂತಲೂ ವಿಭಿನ್ನನಾಗಿರುತ್ತಾನೆ. ಈ ವ್ಯಕ್ತಿ ವಿಶಿಷ್ಟತೆಯ ವಿಶ್ಲೇಷಣೆ ಮನೋವೈಜ್ಞಾನಿಕ ಅಧ್ಯಯನಗಳ ಪ್ರಮುಖ ಅಂಶಗಳಲ್ಲಿ ಒಂದು. ಬುದ್ಧಿ ಮಟ್ಟದಲ್ಲಿ, ಸಾಮರ್ಥ್ಯಗಳಲ್ಲಿ, ಆಸಕ್ತಿ, ಅಭಿರುಚಿ, ಮನೋಭಾವ, ವ್ಯಕ್ತಿತ್ವ ಮುಂತಾದ ವಿಚಾರಗಳಲ್ಲಿ ಒಬ್ಬೊಬ್ಬರೂ ತಮ್ಮದೇ ಮಟ್ಟವನ್ನು ಹೊಂದಿದ್ದು ಒಬ್ಬೊಬ್ಬರೂ ಅನನ್ಯವಾಗಿ ರೂಪುಗೊಂಡವರಾಗಿರುತ್ತಾರೆ. ಇವನು ಇವನೇ, ಅವನು ಅವನೇ. ಇವನು ಅವನಾಗಲಾರ, ಅವನು ಇವನಾಗಲಾರ.

ಈ ಹಿನ್ನೆಲೆಯಲ್ಲಿ, ನಾವು ನಮ್ಮ ಮಕ್ಕಳನ್ನು ಇವರಂಥವರಾಗಬೇಕು ಅವರಂಥವರಾಗಬೇಕು ಎಂದು ಒತ್ತಾಯ ಹಾಕುವುದು ಎಷ್ಟು ಸಮಂಜಸ ? ಈ ಬಗೆಯ ನಿರ್ಬಂಧಗಳನ್ನು ಹಾಕುವುದರಿಂದ ಉದ್ಭವಿಸಬಹುದಾದ ದುಷ್ಪರಿಣಾಮಗಳೇನು ? ಈ ವಿಚಾರಗಳನ್ನು ಕುರಿತು ತಂದೆ-ತಾಯಿಯರು, ಪಾಲಕರು ಚಿಂತಿಸಬೇಕಾದ ಅವಶ್ಯಕತೆ ಇದೆ.

ಒಂದೊಂದು ಕೆಲಸಕ್ಕೂ ಅದರದೇ ಆದ ಅವಶ್ಯಕತೆಗಳೂ ಇರುತ್ತವೆ. ಅದಕ್ಕೆ ಅನುಗುಣವಾಗಿ ಆ ಕೆಲಸ ನಿರ್ವಹಣೆಗೆ ನಿರ್ದಿಷ್ಟ ಸಾಮರ್ಥ್ಯ, ಬುದ್ಧಿವಂತಿಕೆ, ವ್ಯಕ್ತಿತ್ವಗಳ ಅಗತ್ಯವೂ ಇರುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಆ ಕೆಲಸದಲ್ಲಿ ಅವರಿಗೆ ಆಸಕ್ತಿ ಇರಬೇಕು; ಅಭಿರುಚಿ ಇರಬೇಕು. ಪಕ್ಕದ ಮನೆಯ ಹುಡುಗಿ ಸಂಗೀತದಲ್ಲಿ ಪ್ರವೀಣೆ ಇರಬಹುದು; ನಿಮ್ಮ ಮಗಳು ಲೆಕ್ಕದಲ್ಲಿ ಚುರುಕಾಗಿರಬಹುದು. ನಿಮ್ಮ ಮನೆಯ ಮಗಳು ನೆರೆಮನೆಯ ಹುಡುಗಿಯಷ್ಟು ಚಂದವಾಗಿ ಹಾಡುವುದಿಲ್ಲ ಎಂದು ಹಂಗಿಸುವುದು ತಪ್ಪಾಗುತ್ತದೆ. ನಿಮ್ಮ ಮಗಳಿಗೆ ಸಂಗೀತದಲ್ಲಿ ಕೌಶಲ ಇಲ್ಲ; ಆಸಕ್ತಿಯೂ ಇಲ್ಲ. ಇದನ್ನು ಅರಿಯದೆ ಅವಳಿಗೆ ಸಂಗೀತ ಪಾಠ ಕಲಿಸಲು ಹೊರಟರೆ ನಿಮ್ಮ ನಿರೀಕ್ಷೆ ಹುಸಿಯಾಗಬಹುದು. ಅದು ನಿಮ್ಮ ಮಗಳ ತಪ್ಪಲ್ಲ; ಅದು ಅವಳಿಗೆ ಒಲ್ಲದ ವಿಷಯ. ಅವಳ ಆಸಕ್ತಿ ಇನ್ನೆಲ್ಲಿಯೋ ಇದೆ ಮತ್ತು ಅದರಲ್ಲಿ ಅವಳು ಸಾಫಲ್ಯ ಪಡೆಯುವುದು ಹೆಚ್ಚು ಸಂಭವನೀಯ. ಈ ಅಂಶವನ್ನು ಪ್ರತಿ ತಾಯಿ-ತಂದೆಯರೂ ಗಮನದಲ್ಲಿಟ್ಟುಕೊಳ್ಳಬೇಕು. ಪ್ರತಿಯೊಬ್ಬರಿಗೂ ತಮ್ಮದೇ ಆದ ಕೌಶಲಗಳು, ಆಸಕ್ತಿಗಳು ಇರುತ್ತವೆ. ಈ ಸತ್ಯವನ್ನು ಅರಿತು, ಅವುಗಳ ಪೂರಕ ಬೆಳವಣಿಗೆಗಳಿಗೆ ಅವಕಾಶಗಳನ್ನು ಕಲ್ಪಿಸಬೇಕು, ಪ್ರೋತ್ಸಾಹಿಸಬೇಕು. ಅದಕ್ಕೆ ಬದಲಾಗಿ, ತನಗೆ ಇಷ್ಟವಾಗದ, ತನ್ನ ಸಾಮರ್ಥ್ಯಗಳಿಗೆ ಸರಿದೂಗದ ವಿಚಾರಗಳಲ್ಲಿ ತೊಡಗಿಸಿಕೊಂಡರೆ – ನಿರಾಸಕ್ತಿ, ಸೋಲಿನ ಅನುಭವ, ಉದ್ವಿಗ್ನತೆಗಳನ್ನು ಅನುಭವಿಸಬೇಕಾಗುತ್ತದೆ. ಇದರಿಂದ ಸಹಜ ಬೆಳವಣಿಗೆ ಕುಂಠಿತವಾಗುವುದೇ ಅಲ್ಲದೆ, ಜೀವನದ ವೈಫಲ್ಯಗಳಿಗೂ ಕಾರಣವಾಗುತ್ತದೆ.

ಪ್ರತಿಯೊಬ್ಬನೂ ತನ್ನತನವನ್ನು ಬೆಳೆಸಿಕೊಂಡು, ಉಳಿಸಿಕೊಂಡು ತಾನು ತಾನೇ ಆಗಿ ಬಾಳಲು ಕಲಿಯಬೇಕು. ಅದಕ್ಕೆ ಬದಲಾಗಿ ತಾನು ಬೇರೆ ಯಾರೋ ಆಗಬೇಕೆಂಬ ಬಯಕೆ ಸಮಂಜಸವಲ್ಲ. ಬೇರೆಯವರು ನಮಗೆ ಮಾದರಿಯಾಗಬಾರದು, ಉತ್ತಮ ಸಾಧಕರನ್ನು ನಾವು ಅನುಕರಿಸಬಾರದು ಎನ್ನುವುದು ಈ ಮಾತಿನ ಅರ್ಥವಲ್ಲ. ಆದರೆ ನಮ್ಮ ಸಾಮರ್ಥ್ಯಗಳಿಗೆ ಮಿಗಿಲಾದ, ಆಸಕ್ತಿಗಳಿಗೆ ಹೊರತಾದ ಮಾದರಿಗಳನ್ನು ಅನುಕರಿಸುವುದು ಬುದ್ಧಿವಂತಿಕೆ ಆಗಲಾರದು. ಈ ಸಂದರ್ಭದಲ್ಲಿ ಎಮ್. ಎಲ್. ಮೆನ್ಕೆನ್ ಹೇಳುವ ಮಾತೊಂದು ನನ್ನ ನೆನಪಿಗೆ ಬರುತ್ತದೆ : ''ಗಯಟೆ ಅಥವಾ ಬಿತೋವನ್ ಇವರನ್ನು ಉತ್ತಮ ಬಿಲಿಯರ್ಡ್ಸ್ ಅಥವಾ ಗಾಲ್ಫ್ ಆಟಗಾರರನ್ನಾಗಿ ನಾವು ಊಹಿಸುವುದು ಸಾಧ್ಯವಿಲ್ಲ.''

ಎಚ್. ಎಸ್. ಈಶ್ವರ
ಎಚ್.ಐ.ಜಿ. ೧೧, ಕೆ.ಎಚ್.ಬಿ. ಕಾಲೋನಿ, ಮೊದಲನೇ ಹಂತ, ಬಸವೇಶ್ವರನಗರ, ಬೆಂಗಳೂರು - ೭೯

## ಡೊಂಬರಾಟದ ಹುಡುಗಿ



ಡೋಲು ಬಡಿಯುತ್ತಾ
ಕೇಕೆ ಹಾಕುತ್ತಾ
ಜಗದ ಕಿವಿಯ ತೆರೆಸಿದ್ದಾಳೆ
ಡೊಂಬರಾಟದ ಹುಡುಗಿ

ಚೋಟು ರಿಂಗಿನ ಒಳಗೆ
ತೂರಿ ಬಂದಳು ಹುಡುಗಿ
ಮೂಳೆಗಳಿಲ್ಲದ ಹಾವಿನಂತೆ
ತೋರಿಸಿದಳು ತನ್ನ
ಗೇಣು ಹೊಟ್ಟೆಯ ತೆರೆದು
ಎಲ್ಲವೂ ಹೊಟ್ಟೆಗಾಗಿ ಎಂದು

ತಂತಿಯ ಮೇಲೊಂದು ಸಾಹಸ
ಬೊಂಬಿನ ಮೇಲೊಂದು ಸಾಹಸ
ಗಾಜಿನ ಬಾಟಲಿಯ ಮೇಲೆ
ಮೈ ನವಿರೇಳಿಸುವ ಸಾಹಸ

ಬಿದ್ದು ಕೈಕಾಲು ಮುರಿದೀತೆಂಬ
ಭಯವಿಲ್ಲ
ಗಾಜು ಹೊಟ್ಟೆಯ
ಸೀಳೀತೆಂಬ ಕಬುರಿಲ್ಲ
ಹಸಿದ ಹೊಟ್ಟೆಯ ಮುಂದೆ
ಎಲ್ಲವೂ ಗೌಣ.

ತುತ್ತು ಅನ್ನ ತಿನ್ನೋಕೆ
ಇಷ್ಟೊಂದು ಸಾಹಸ ಯಾಕೆ
ಎನ್ನುತ್ತೀರಾ !
ಇಲ್ಲದಿದ್ದರೆ, ಇಲ್ಲವಲ್ಲ
ಅವಳ ಹೊಟ್ಟೆಗೆ ಅನ್ನ
ಯಾರು ಕಲಿಸಿದರು ಎಂದರೆ

ಹಸಿವು ಎನ್ನುತ್ತಾಳೆ ಹುಡುಗಿ
ಆ ಪುಟ್ಟ ಹುಡುಗಿ ಕಲಿತ
ಹಸಿದ ಹೊಟ್ಟೆಯ ಪಾಠ
ದೊಡ್ಡದು
ಭೂಮಂಡಲಕ್ಕಿಂತಲೂ
ದೊಡ್ಡದು

ಬೆಟ್ಟದಷ್ಟು ಎತ್ತರ
ಬೆಳೆದು ನಿಂತಿರುವ
ಆ ಹುಡುಗಿಯ ಮುಂದೆ
ನಾನೂ ನಿಂತಿದ್ದೆ
ಸಣ್ಣ ಹುಡುಗನಂತೆ

ಹುಲಿಕಟ್ಟಿ ಚನ್ನಬಸಪ್ಪ
ಶಿಕ್ಷಕರು, ಇ.ಡಬ್ಲ್ಯು.ಎಸ್. - ೬೦, ಹುಡ್ಕೋ ಬಡಾವಣೆ, ಸಿರುಗುಪ್ಪ - ೫೮೩ ೧೨೧

# ಕನ್ನಡದಲ್ಲಿ ವಿಜ್ಞಾನ ಭಾಷಾ ಬೆಳವಣಿಗೆಗೆ ನವಕರ್ನಾಟಕ ಪ್ರಕಾಶನದ ಅಮೂಲ್ಯ ಕೊಡುಗೆ

## ಮೇ 2011 ರಲ್ಲಿ ಲೋಕಾರ್ಪಣೆ




ನವಕರ್ನಾಟಕ

# ವಿಜ್ಞಾನ - ತಂತ್ರಜ್ಞಾನ ಪದ ಸಂಪದ

(15,000 ವಿಜ್ಞಾನ ಪದಗಳ ಸಂಚಯ)

ಸುಮಾರು 1000 ಪುಟಗಳು ಆಕಾರ ಕ್ರೌನ್ 1/4

ಸಂಪಾದಕರು

ಕೆ. ಎಲ್. ಗೋಪಾಲಕೃಷ್ಣರಾವ್

ಟಿ. ಆರ್. ಅನಂತರಾಮು

ಸಿ. ಆರ್. ಕೃಷ್ಣರಾವ್

ಮುಖ ಬೆಲೆ

₹ 600

ಪ್ರಕಟಣಾಪೂರ್ವ ಬೆಲೆ

₹ 450

ಇಂದೇ ಪಾವತಿಸಿ ₹150 ಲಾಭ ಗಳಿಸಿ




ವಿವರಗಳಿಗೆ ಸಂಪರ್ಕಿಸಿ

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001.

ದೂರವಾಣಿ : 30578022, 22203580. ಫ್ಯಾಕ್ಸ್ : 30578023.

e-mail : navakarnataka@gmail.com. URL : www.navakarnataka.com blog : http://navakarnataka.blogspot.com


Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

